ಶ್ರೀರಸ್ತು.

ಶ್ರೀ ಗುರು ದಕ್ಷಿಣಾಮೂರ್ತಯೇ ನಮಃ.

ಸಮಸ್ತ ತತ್ವ ತಾತ್ವಿಕ ವಿಚಾರಾಭ್ಯುದಯ ಸಂಯುಕ್ತವಾಗಿ
ಶ್ರೀಮದ್ವೇದಾಂತ ಪ್ರಸಿದ [illegible]
ಶಾಲ್ಯಕ್ಷಿತಿಪಾಲ ಶ್ರೀಮತ್ಕೃ[illegible]ಶೇಖರವಿರಚಿತವಾದ

# ನಿಜದೀಪಿಕಾ ರತ್ನ[illegible]ಂಬ

ಈ ಗ್ರಂಥವು
ಶ್ರೀಮನ್ ಕರ್ನಾಟಕ ರಾಜಧಾನಿ ಮಹೀಶೂರ ಪುರವರಾಧೀಶ್ವರ
ಕೃಷ್ಣರಾಜ ಸಾರ್ವಭೌಮ ಮಹಾಸಂಸ್ಥಾನ ವಿದ್ವಚ್ಚೂಡಾಮಣಿಗಳಾದ
ತಿರುಮಲ ಸೋಮ ನಗರನಿವಾಸ ಶ್ರೀಮದ್ವೇದಾಂತ
ರಾಘವಾಚಾರ್ಯರಿಂದ,

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದಾಃ
೧೭೭೩ ನೆ ವರ್ತಮಾನ, ವಿರೋಧಿಕೃತು ಸಂವತ್ಸರ ಶ್ರಾವಣ ಸಿತ ಪಕ್ಷ
ದಶಮೀ ಸೌಮ್ಯವಾಸರದಲ್ಲಿ ಪೂರ್ಣವಾಗಿ ವಿರಚಿತವಾದ ಟೀಕೆಯೊಡನೆ,
ಇದರ ಸರ್ವ ಸ್ವಾತಂತ್ರ್ಯವನ್ನು ಪಡೆದು, ಪರಿಶೋಧಿತರಾದ
ಮಹೀಶೂರ ಶ್ರೀ ಪರಮಹಂಸ ದೇವಾನಂದ ಸ್ವಾಮಿಗಳವರ
ಅನುಜ್ಞೆ ಹೊಂದಿ

ಕಂ. ಮೈ. ಉಪಾಧ್ಯ ಜವರಾಯಪ್ಪನವರಿಗಾಗಿ

ಮೊದಲನೇ ಛಾಪಾ ೧,೦೦೦ ಪ್ರತಿಗಳು.

ಬೆಂಗಳೂರು:

ವಿಚಾರ ದರ್ಪಣ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.
೧೮೯೪.

# ವಿಷಯ ಸೂಚಿಕೆ.

☞ ಈ ಗ್ರಂಥವನ್ನು ಅಪೇಕ್ಷಿಸುವವರು ಮೈಸೂರು ಮಂಡಿ ಮೊಹಲ್ಲಾ ಕಾಳಮ್ಮನ ಗುಡಿ ಬೀದಿಯಲ್ಲಿ ಇರುವ ಶ್ರೀ ಪರಮಹಂಸ ದೇವಾನಂದ ಸ್ವಾಮಿಗಳವರಿಗೆ ಬರದು ತರಿಸಿಕೊಳ್ಳ ಬಹುದು.



ಶ್ರೀ.

ಶ್ರೀದಕ್ಷಿಣಾಮೂರ್ತಿಗುರುವೇನಮಃ.

# ನಿಜದೀಪಿಕಾರತ್ನ.

## ಪಂಚವಿಂಶತಿಪದ್ಧತಿ.

ಮಂದಾಕ್ರಾಂತವೃತ್ತಂ॥ ಕೃತ್ವಾವಸ್ತಿಂವಟತರುಪದೇವೇಷಮಾ
ರ್ಷಂಭಜಿತ್ವಾ । ದಿವ್ಯೈರ್ಜ್ಞಾನೈರ್ಮುನಿಭಿರನಿಶವ್ಯಾವೃತಸ್ತ್ವಂಯ
ದರ್ಥಂ ॥ ಸಂಸಾರಾಬ್ಧಾವಘಲಿತತಟೇಮಜ್ಜತಾಂನೋರ್ಥಮಾ
ದ್ಯಂ । ಶೇವೆತ್ವಾಮಿತ್ಯಹಮಿತಿಮತಿರ್ದಕ್ಷಿಣಾಮೂರ್ತಿಮೀಶಂ॥

ಟೀಕು॥ ವಟತರುಪದೆ-ವಟವೃಕ್ಷದಮೂಲವೆಂಬಸ್ಥಾನದಲ್ಲಿ,ವಸ್ತಿಂ-ಯಿರುವದನ್ನು, ಕೃತ್ವಾ-ಮಾಡಿ,ಆರ್ಷಂ-ಋಷಿಸಂಬಂಧವಾದಂಥಾ, ವೇಷಂ-ಅಲಂಕಾರವನ್ನು, ಭಜಿತ್ವಾ-ಐದಿ, ದಿವ್ಯೈಃ-ದಿವ್ಯ-ಅಮೋಘವಾದಂಥಾ, ಜ್ಞಾನೈಃ-ಆತ್ಮಜ್ಞಾನಉಳ್ಳಂಥಾ, ಮುನಿಭಿಃ-ಮುನೀಶ್ವರರುಗಳಿಂದ, ಅನಿಶಂ-ನಿರಂತರವು, ವ್ಯಾವೃತಃ-ಸುತ್ತಲ್ಪಟ್ಟ, ತ್ವಂ-ನೀನು, ಅಘಲಿತ-ಶಿಕ್ಕದಂಥಾ, ತಟೆ-ತಡಿಯುಳ್ಳ. ಸಂಸಾರಾಬ್ಧೌ-ಜನನಮರಣರೂಪಪ್ರವಾಹವೆಂಬಸಮುದ್ರದಲ್ಲಿ, ಮಜ್ಜತಾಂ-ಮುಳುಗಿರುವಂಥಾ, ನಃ-ನಮ್ಮಗಳ, ಯದರ್ಥಂ-ಯೆತ್ತುವದಕೋಸ್ಕರವು, ಇತಿ-ಹೀಗೆಂದುತಿಳಿದು, ಆದ್ಯಂ-ಮೊದಲಾದ, ಅರ್ಥಂ-ಅರ್ಥಸ್ವರೂಪವಸ್ತುವಾದ, ಈಶಂ-ಸರ್ವೈಶ್ವರ್ಯಮುಳ್ಳ, ದಕ್ಷಿಣಾಮೂರ್ತಿಂ-ಕರುಣಾಮಯಸ್ವರೂಪಗೊಂಡಿರುವ, ತ್ವಾಂ-ನೀನು, ಇತಮತಿಃ-ಇತಪ್ರಾಪ್ತವಾದ, ಮತಿಃ-ಬುದ್ಧಿಉಳ್ಳಂಥಾ, ಅಹಂ-ನಾನು, ಸೇವೆ-ಭಜಿಸುತ್ತಿದ್ದೇನೆ, ॥೧॥

ಕಂದಾ॥ ಯೆಂತೆನಗಪ್ಪುದುಸಂಸೃತಿ । ಯಿಂತೆರಪಪುನರ್ಭವಂ
ಪುರುಷನೊಡನೈಕ್ಯಂ । ಕಂತುಹರಾದಿಗಳಿಂನಿಜ। ವಿಂತೆಂದಾಜ್ಞಾ
ಪಿಸಿದುದನುಸುರಳ್ಕರಿನಿಂ॥

ಟೀ॥ ಹ್ಯಾಗೆಯುನಗೆಆದೀತುಜನನಮರಣರೂಪಸಂಸಾರದಿಂದಬಿಡು

ಗತಿಯು. ಪುನರುತ್ಪತ್ತಿರಹಿತತ್ವವು. ಪುರುಷಶಬ್ದವಾಚ್ಯನಾದಸಚ್ಚಿದಾ
ನಂದಸ್ವರೂಪವಾದಪರಬ್ರಹ್ಮನೊಳಗೇಕತ್ವವು. ಪರಮೇಶ್ವರನೊದ
ಲಾದವರುಗಳಿಂದ ಯಥಾರ್ಥವಿದೆಂದು ಅಪ್ಪಣೆಕೊಡಿಸಿಕೊಟ್ಟು ಯಿರು
ವದನ್ನು, ಪ್ರೀತಿಯಿಂದ ಜಾಗ್ರತೆಯಾಗಿಹೇಳ್ವೆಯು॥ ॥೧॥

ವಚನ॥ ಇಂತೆಂದುಸುರ್ದ ಮನೋಮಹೀಶಂಗೆ ಮಂದಾನಂದ
ಮೊಸರ್ವಂತೆ, ಲೈಸುವೃತ್ತಿಯೆನಿವೃತ್ತಿಯಾಗಬೇಕಾದೊಡ ವಿಾಸಂ
ಸಾರಗಹನದಿಂದಾತ್ಮಸ್ವರೂಪಾಭಿಜ್ಞಾನಮಂಬಿಟ್ಟಾಗದು. ಆಯಾತ್ಮಸು
ಧಾಸಮುದ್ರಕ್ಕೆನಿರ್ಮಲಸಿಂಧುವಾದ, ನೀನದಂ ಪ್ರವೇಶಿಸುವದಕ್ಕೆ ಮು
ಖ್ಯಾರ್ಥದಿಂ, ಪ್ರಾಪ್ತವೊಂದಾಗಿರಲ್ ವಿಚಿತ್ರಿವಿಶೇಷದಿಂ, ಸಂಚವಿಂಶ
ತಿಪದ್ಧತಿಗಳುಂಟವರಪ್ರಕಾರಮಂ ವಿವರಿಸುತ್ತಿರ್ದಪೆನವಧರಿಸೆಂದುಸುವಿ
ಭವದಿಂಪೇಳುತ್ತಿರ್ದಪಂ॥ ಟೀ॥ ಈಪ್ರಕಾರವಾಗಿ ಹೇಳಿದಮನಸ್ಸೆಂಬ
ಭೂಪತಿಗೆ, ಅಧಿಕವಾದ ಆನಂದಭಾಷ್ಪ ಶ್ರವಿಸುವಹಾಗೆ ಯೆಲೈ ವಳ್ಳಿ
ವೃತ್ತಿಯುಳ್ಳಂಥಾ ಮನಸ್ಸೆಂಬಪ್ರಭುವೆ, ಜನನಮರಣರೂಪಸಂಸಾರಾ
ರಣ್ಯದಿಂದ, ಬಿಡುಗಡೆಯನ್ನುಹೊಂದಬೇಕಾದರೆ ಹ್ಯಾಗಾದರು ನಿನ್ನ
ಸ್ವರೂಪವಂ ನೀನು ತಿಳಿಯುವದನ್ನುಬಿಟ್ಟು, ಯಿಂನುಯಾವಉಪಾಯ
ದಿಂದಲಾದರುಆಗದು. ಆಯಾತ್ಮಸ್ವರೂಪವೆಂಬ ಸುಧಾಸಮುದ್ರಕ್ಕೆ,
ಮಲಿನರಹಿತಸ್ವರೂಪನದಿಯಾದನೀನು, ಆತ್ಮನೆಂಬ ಅಮೃತಸಮುದ್ರವ
ನ್ನುಹೊಗುವದಕ್ಕೆ, ಪ್ರಸಿದ್ಧವಾದ ಅರ್ಥದಿಂದ ಹೊಂದತಕ್ಕ ಪದಾರ್ಥ
ಒಂದೇ ಆಗಿಯಿದ್ದಾಗ್ಯು, ಬೇರೆಬೇರೆಯಾಗಿರುವಭೇದದಿಂದ, ಇಪ್ಪತ್ತೈ
ದುಮಾರ್ಗಗಳುಂಟು, ಆಮಾರ್ಗಗಳರೀತಿಯನ್ನು ಕ್ರಮವಾದವಿವರವಾಗಿ
ಹೇಳುತ್ತಲಿದ್ದೇನೆ, ಕೇಳ್ವೆಯ್ಯಾಯೆಂದು ವಳ್ಳೆವೈಭವದಿಂದ ಹೇಳುತ್ತಲಿ
ದ್ದಾನೆ, ಅದು ಹ್ಯಾಗೆ ಅಂದರೆ. ॥೩॥

ಮೂಲ—ಜಂಪೆ.

ತನುವೆಶಿವಾಲಯುಂದಾತುಸಪ್ತಕವೇವ । ರಣನಟ್ಟೆಲುವೆವೃಷಭರಾ
ಜನಪತಾಕೆ॥ ಟೀ॥ ಶರೀರವೇ ಶಿವನದೇವಸ್ಥಾನವು, ಈ ಶರೀರದವಳ
ಗಿರುವ ಸಪ್ತದಾತುಗಳೇ ಯೇಳುಸುತ್ತಾದ ಪ್ರಾಕಾರಗಳು, ನಡುಬೆನ್ನಿ
ನಲ್ಲಿರುವ ಅಸ್ಥಿಯೇ ವೃಷಭರಾಜನಾದ ನಂದಿಧ್ವಜವು. ॥೧॥

ಅವಯವಗಳೇ ದೇವತಾವಾಸಗಳುಮೊದಲ, ನವರಂಗವೇಜಾಗ್ರದವಸ್ಥೆಯೆನಿಕ್ಕುಂ|| ||ಟೀ|| ಈ ಶರೀರದಲ್ಲಿರುವ ಕರಚರಣಾದ್ಯವಯವಗಳೇ ನಂದೀಶ್ವರ, ಚಂಡೀಶ್ವರ, ಭೃಂಗೀಶ್ವರ ಮೊದಲಾದ ದೇವತಾನಿವಾಸ ಯೋಗ್ಯವಾದಸ್ಥಾನಗಳು. ಪ್ರಥಮವಾದ ನವರಂಗಸ್ಥಾನವೇ ಜಾಗ್ರದವಸ್ಥೆಗೆ ಗೃಹವಾದ ನೇತ್ರಸ್ಥಾನವೆನಿಸುವದು. ||೨||

ಗೋಪುರವೆಶಿರವುಕನಸೇಪೂಡೆಯುಮನೆಯುನೀ । ನೇಪಿಂಗದೃಕ್ಪೀಠನೆನಿಪೆಚನ್ನಾಗಿ|| ||ಟೀ|| ಶಿರಸ್ಸೇಗೋಪುರವು, ಸ್ವಪ್ನಾವಸ್ಥೆಯೇ ಸುಖನಾಸಿ ಯುಂಬುವಸ್ಥಾನವು, ಯೆಲೈಮನೋರಾಜನೇ; ನೀನು, ಅರಿಸಿನವರ್ಣವಾದ ದೃಷ್ಟಿಯುಳ್ಳಂಥಾಶಿವನಿಗೆ, ಸೊಗಸಾದ ಗೋಮುಖಪೀಠವನ್ನಿನಿಸಿಕೊಳ್ಳುತ್ತಾಯಿದ್ಧೀಯೇ. ||೩||

ಅಲ್ಲಿಬಿಂಬಿಸಿದ ಪರಮಾತ್ಮಪ್ರಭೆಯೆಲಿಂಗ, ಮುಳ್ಳಭಿವ್ಯಕ್ತಿಯೇಉಮೆಯುಮನದನ್ನಾ|| ||ಟೀ|| ಆಚನ್ಮಯನೇತ್ರಸ್ಥಾನದಲ್ಲಿಪ್ರತಿಫಲಿಸಿದ ಚಿತ್ಸ್ವರೂಪವಾದ ಆತ್ಮಪ್ರಕಾಶವೇಗುರುತಾಗಲುಳ್ಳಂಥಾ, ಯೆಲ್ಲಾಕಡೆಯಲ್ಲಿಯೂ ವ್ಯಾಪಿಸಿಕೊಂಡಿರುವ ಪ್ರಕಾಶವೇ, ಪಾರ್ವತಿಯ ಮನಸ್ಸಿಗೆ ಪ್ರಿಯನಾದಂಥಾಶಿವನು. ||೪||

ಕುಲದೈವ ವಿದುನಿನಗೆ ಬಳಸದಿತರವಸುಗುಣ, ಫಲಕುಸುಮದಿಂದರ್ಚಿಸಲು ಧನ್ಯನಪ್ಪೆ|| ||ಟೀ|| ಪಾರ್ವತಿಪ್ರಿಯನಾದ ಶಿವನೇ ನಿನಗೆ ಮನೆದೇವರು. ಇತರದೈವಗಳ ಭಜಿಸದೆ, ಒಳ್ಳೇಗುಣಂಗಳೆಂಬಫಲಂಗಳಿಂದಲೂ,ಹುವ್ವಿನಿಂದಲೂ, ಪೂಜೆಮಾಡಲು ಕೃತಾರ್ಥನಾಗುತ್ತಿದ್ಧೀಯೆ ||೫||

ವ|| ಯನ್ನಲಾ ವಿಚಾರಪ್ರರೋಹಿತ ನಮಾತ್ಮಲಿಂಗಾರ್ಚನಾ ವಿಧಿಯೆಂತೆಂದುಕೇಳಲನುರಾಗಪೂರ್ವಕದಿಂಪೇಳಿದಪನದಂತೆನೆ. ||ಟೀ|| ಹೀಗೆನ್ನಲು-ವಿಚಾರ ಪುರೋಹಿತನನ್ನು, ಆತ್ಮಸ್ವರೂಪವಾದ ಲಿಂಗಪೂಜೆ ಮಾಡುವ, ವಿಧಾನ ಹ್ಯಾಗೆಯೆಂದು ಕೇಳಲಾಗಿ ವಿಶ್ವಾಸಪೂರ್ವಕದಿಂದ ಹೇಳಿದಂಥಾವನಾದ, ಅದು ಹ್ಯಾಗೆ ಅಂದರೆ ||೧||

ಮೂ|| ತ್ರಿಪುತೆ|| ಕೆಡುವಭುವನಂಗಳೊಳಗಾನೇ,ಕೆಡದೆಮಿಕ್ಕಿಹೆನೆಂಬಭಾವನೆ, ಪಡೆದುದಾವಾಹನಮನಿಕ್ಕು, ದೃಢವಾಗಿತನ್ನಾ. ||ಟೀ|| ನಾಶ

ಹೊಂದಿ ಹೋಗುವಂಥಾ ಮೂರು ಲೋಕಂಗಳಲ್ಲಿಯೂ ಆತ್ಮಸ್ವರೂಪ ವಾದ ನಾನೇಲ್ಲೈಸಿ ಹೋಗದೆ ನಿತ್ಯವಾಗಿ ಇದ್ಧೇನೆಯೆಂದು ತನ್ನ ಭಾವದಲ್ಲಿ ಭಾವಿಸುವ ಧಾರಾಢ್ಯವಾದಂಥಾದ್ದೆ, ಆವಾಹನೆಯೆನಿಸಿ ಕೊಳ್ಳುತ್ತೆ ॥೧॥

ತಿಳಿವುದಾಸನ ತನಗೆ ತೋರದು, ಕಲುಷಪುಣ್ಯಾಸ್ಪೃಷ್ಟಿಯೆಂತೆಂ, ಬಲಘುಮತಿಯೇಪಾದ್ಯ ಬಹುಕಾಲಾದಿಯಾಗಿ. ॥ಟೀ॥ ಯತಾರ್ಥವಾಗಿ ತನ್ನ ಸ್ವರೂಪವಂ ತಾನು ಅರಿತುದೇ ಆಸನ. ಆತ್ಮಸ್ವರೂಪವಾದ ತನಗೆ ಪುಣ್ಯಪಾಪಗಳ ಅಂಟೋಣವಿಲ್ಲವೆಂದು ತಿಳಿಯುವಂಥಾವಿಸ್ತಾರವಾದಬುದ್ಧಿಯೇ ಪಾದೋದಕನು. ಅಧಿಕವಾದಕಾಲವೇಮೊದಲಾಗಿ॥೨॥

ಪೊತ್ತ ಮೂಲಾಜ್ಞಾನಮಂತಾ, ನೊತ್ತರಿಪುದಾರ್ಘ್ಯಂ ಜಗತ್ರಯು, ಮೊತ್ತಿಯೊಳ್ವ ಸುರೇಂದ್ರ ಮುಖರಾಯತ್ತರಾಗಿ॥ ॥ಟೀ॥ ಹೊಂದಿದಂಥಾ ಮೂಲವಾದ ಅಜ್ಞಾನವು ಆತ್ಮಸ್ವರೂಪವಾದ ತನಗೆ ಯಿಲ್ಲವೆಂದುತಿಳಿಯುವದೇಹಸ್ತೋದಕವು. ಮೂರುಲೋಕವನ್ನು ಸ್ವಾಧೀನಮಾಡಿಕೊಂಡು ಪ್ರಭುತ್ವಮಾಡುತ್ತಲಿರುವ ದೇವೇಂದ್ರ ಮೊದಲಾದ ದೇವತೆಗಳು ಪ್ರಯತ್ನಮಾಡಿದಂಥಾವರಾಗಿ ॥೩॥

ಆವಸನ್ಮಯಜಲಧಿಸುಖನಿರಾಣುಲೇಶವ ಪೀರ್ದತೃಪ್ತಿದ, ಪರವಿವಶರಾಗಿರ್ಪರೆಂಬವಿಚಾರವುದಿಸೆ ॥ ॥ಟೀ॥ ಯಾವಸದಾತ್ಮಕವಾದ ಬ್ರಹ್ಮವೆಂಬ ಸಮುದ್ರದಲ್ಲಿರುವ ಸುಖೋದಕದತುಂತುರಿನಕಣವನ್ನು ಪಾನಮಾಡಿ ಸಂತುಷ್ಟ್ಯವಸ್ತೆಯಿಂದ ಪರವಶರಾಗಿದ್ಧಾರೆ ಯೆನ್ನುವ ವಿವೇಕ ಹುಟ್ಟದರೆ ॥೪॥

ಆಚಮಾನವೆನಿಪ ನಾನಾ, ಗೋಚರಾನಂದದಲಿ ಮುಳುಗಿರ್ದ ಲೀಚರಾಚರವಾನುನೆನೆಯೆ ನಹೀನ ಮಹಿಮಂ. ॥ಟೀ॥ ಆಚಮಾನೋದಕವೆನಿಸುವದು. ನಾನಾವಿಧವಾದದಶೇಂದ್ರಿಯ ವಿಷಯಾನಂದದಲ್ಲಿ ಮುಳುಗಿರುವಂಥಾ, ಈಪ್ರಕಾರವಾಗಿರುವ ಜಂಗಮಸ್ಥಾವರ ಪ್ರಪಂಚವನ್ನು, ಅಧಿಕವಾದ ಮಹಿಮೆಯುಳ್ಳ ನಾನುಸ್ಮರಿಸುವದಿಲ್ಲ. ॥೫॥

ಯೆಂದೆಣಿಪುದೇ ಸ್ನಾನಮೂರ್ತಿ, ಯಿಂದಸಿಲುಕದ ನಿಚ್ಚಬೆಳಗಾನೆಂದೆನುವದೇ ವಸ್ತ್ರಗುಣಗಳಿಗರವೆನಿಸುತಾ ॥ ॥ಟೀ॥ ಹೀಗೆಂದು

ತಿಳಿವುದೇ ಸ್ಥಾನವು. ಮಾಯಾವರಣದಿಂದ ಶಿಕ್ಕದೇ ಯಿರುವಂಥಾ ನಿತ್ಯದಲ್ಲಿಯು ಪ್ರಕಾಶಿಸುತ್ತಲಿರುವ ನಾನು ಯೆನಿಸುವದೇ ಸತ್ವರಜಸ್ತಮೋಗುಣಗಳಿರುವದಕ್ಕೆ ಸ್ಥಾನವೆನಿಸಿ ಕೊಳ್ಳುತ್ತೆ. ||೬||

ಭೂತ ಮುಕ್ತಾವಳಿಗಳೊಳುನಾಂ, ಪ್ರೋತವಾಗಿಹ ಸೂತ್ರನೆಂಬಭಿ, ಜಾತಮತಿ ಯಜ್ಞೋಪವೀತಂ ಸಾಧುಗಣ್ಯಂ. ||ಟೀ|| ಪಂಚಭೂತಗಳೆಂಬ ಮುತ್ತಿನ ಮಣಿಗಳಲ್ಲಿ ನಾನು, ಪೋಣಿಸಿರುವ ಧಾರವಾಗಿದ್ದೇನೆ ಯೆಂತೆಂದು ಹುಟ್ಟಿದಂಥಾ ಬುದ್ಧಿ ಭಾವನೆಯೇ, ಸಾಧುಗಳಿಂದ ಯೆಣಿಸಲ್ಪಟ್ಟ ಯಜ್ಞೋಪವೀತದ ಸಮರ್ಪಣೆಯು. ||೭||

ವ|| ಅನೇಕವಾಸನಾ ಮಿಶ್ರವಾದ ಪ್ರಪಂಚವು ಯನ್ನಿಂದಲೇ ಧೃತಮೆಂಬ ಧ್ಯಾನಂ ಗಂಧಮೆನಿಪುದು. ||ಟೀ|| ನಾನಾವಿಧ ವಿಷಯವಾಸನಾ ಸಹಿತವಾದ ಚರಾಚರಪ್ರಪಂಚವು ನನ್ನಿಂದಲೇ ಧರಿಸಲ್ಪಟ್ಟಯಿಧೆಯೆಂಬ ಬುದ್ಧಿಭಾವನೆಯೆ, ವಳ್ಳೇಗಂಧವೆನಿಸಿಕೊಳ್ಳುವದು. ||೧||

ಮೂ ||ಜಂಪೆ|| ಯೆಳ್ಳನಲಿ ಯೆಣ್ಣೆಯವೊ। ಲೆಡೆಬಿಡದೆನಾನುಜಗ। ದಲ್ಲಿಹೆನೆನುವದಕ್ಷತವ್ರಜಂಸತಿಲಂ. ||ಟೀ|| ಯುಲ್ಲಾ ಕಡೆಯೆಲ್ಲಿಯೂ ತಿಲದಲ್ಲಿ ತೈಲವ್ಯಾಪಿಸಿಕೊಂಡು ಇಧೆಯೋಆರೀತಿಯಲ್ಲಿ ಸಂದುಬಿಡದ ಆತ್ಮಸ್ವರೂಪವಾದ ನಾನು ಚರಾಚರ ರೂಪವಾದ ಪ್ರಪಂಚದಲ್ಲಿ ಯಿದ್ದೇನೆಯೆಂಬ ಭಾವನೆಯೇ, ಯೆಳ್ಳಿನಲ್ಲಿಕೂಡಿದ ಅಕ್ಷತ ಸಮರ್ಪಣೆಯು. ||೧||

ಗುರುಶಿವಾತ್ಮತ್ರಯದಿ, ಕೂಡದಿರೆಭೇದವಂ, ಬರದಂ ಶಿರಿಮರದ ತಳಿರೆನುತ ಘನರು. ||ಟೀ|| ತನಗೆ ಸ್ವರೂಪ ಸ್ಥಿತಿಯು ಅನುಭವಕ್ಕೆ ಬರುವಹಾಗೆ ಹೇಳಿದಂಥಾ ಗುರುಗಳಿಗು, ಸಾಕ್ಷಾತ್ಪರಶಿವನಿಗು, ಪ್ರತ್ಯಗಾತ್ಮ ಸ್ವರೂಪವಾದಂಥಾ ತನಿಗು ಕೂಡ ಭೇದವಿಲ್ಲದೆ ತಿಳಿದುದೇ ಬಿಲ್ವಪತ್ರೆಮರದಚಿಗುರಿನ ಸಮರ್ಪಣೆಯೆಂದು ತಿಳಿದಂಥಾ ದೊಡ್ಡವರು ಹೇಳುತ್ತಾರೆ. ||೨||

ಭವಭವಂಗಳೊಳೊಡನೆ ಬಂದವಾಸನೆಯಸಂ, ಗವನಿಶೋಧಿಸುವದೆಯ ಗರುದೂಪಮುಕ್ಕುಂ. ||ಟೀ|| ಜನ್ಮ ಜನ್ಮಂಗಳಕೂಡ ಪ್ರಾಪ್ತವಾದ ವಿಷಯವಾಸನೆಯ ಸಂಬಂಧವು, ಆತ್ಮಸ್ವರೂಪವಾದ ತನಗೆಯಿಲ್ಲವಂ

ಬುದೇ, ಶ್ರೇಷ್ಟವಾಗಿರುವ ಅಗರುಧೂಪ ಸಮರ್ಪಣೆಯಾಗುವದು॥೩॥

ಖಗಪಾದಿಯಿಂದಾಂಪ್ರಕಾಶಿಸೆ ಪ್ರಕಾಶಿಸುವೆ, ಖಗಪಾದಿಗಳನೆಂಬ
ಕಾಂತಿಯೇದೀಪಂ. ॥ಟೀ॥ ಸೂರ್ಯಚಂದ್ರಾದಿಗಳಿಂದ ನಾನು ಪ್ರ
ಕಾಶಿಸುವನಲ್ಲ, ಸೂರ್ಯಚಂದ್ರಾದಿಗಳನ್ನು ನಾನು ಪ್ರಕಾಶ ಮಾಡುತ್ತೇ
ನೆಂಬ ಕಾಂತಿಯೇ ದೀಪಸಮರ್ಪಣೆಯು ॥೪॥

ಉಂಬೆನೀಭುವನದ ಕದಂಬಮಂ ನಿತ್ಯಮಾ।ಗೆಂಬುದೇನೈವೇದ್ಯವೆಂ
ಬುವರು ಪಿರಿಯರ್. ॥ಟೀ॥ ಈ ಲೋಕ ಸಮೂಹವನ್ನು ನಾನು
ಯಾವಾಗಲು ಗ್ರಾಸಮಾಡಿಕೊಳ್ಳುತ್ತಾಲಿದ್ದೇನೆ, ಹೀಗೆಂಬುವದೇ ನೈ
ವೇದ್ಯಸಮರ್ಪಣವೆಂದು ಹಿರಿಯುವರಿಂದ ಹೇಳಲ್ಪಡುತ್ತಾಯಿಧೆ ॥೫॥

ಕರಣತ್ರಯಧ್ಯಾಸ ಕಲ್ಮಷ ಸ್ಥಿತಿಗೆ ನಾಂ, ಪೊರೆಗೆಂಬುದದುವೆ ತಾಂ
ಬೂಲವಾಗಿಹುದು. ॥ಟೀ॥ ಕಾಯವಾಚಮಾನಸವೆಂಬುವಮೂರು
ಕರಣಗಳ ಆರೋಪಣವೆಂಬ ಮಲಿನ ಸ್ಥಿತಿಗೆ ನಾನು ಬೇರೆಯಾಗಿದ್ದೇನೆ
ಯೆಂಬ ಭಾವನಯೇ, ತಾಂಬೂಲ ಸಮರ್ಪಣವಾಗುತ್ತಾಯಿಧೆ, ॥೬॥

ಕೂಟಸ್ಥನಾದೆನ್ನಕುಕ್ಷಿಯಲ್ಲಿಯೆಜಗ।ತ್ಕೋಟಿಗಳ್ತಿರುಗುವವುಕುಂಭ
ಕಾರಕನಾ ॥ಟೀ॥ ಕೂಟಸ್ಥಬ್ರಹ್ಮನಾದ ನನ್ನ ಉದರದಲ್ಲಿಯೇ ಅ
ನೇಕ ಕೋಟಿಗಳಾದ ಲೋಕಗಳು ತಿರುಗುತ್ತಲಿದ್ಧಾವೆ, ಅದು ಹ್ಯಾ
ಗೆಂದರೆ, ಕುಂಬಾರನ. ॥೭॥

ಚಕ್ರಗತೆರದೊಳೆಂಬಚರ್ಚೆಯೆ ಪ್ರದಕ್ಷಿಣಂ, ಚಕ್ರಿಪ್ರಮುಖ ದೇವಸ
ರಣಿಗುಲ್ಲಾನೆ. ॥ಟೀ॥ ಚಕ್ರತಿರುಗುವದು ಹ್ಯಾಗೋಹಾಗೆ ತಿರುಗುತ್ತ
ಲಿಧೆಯೆಂಬ, ಶಾಸ್ತ್ರದವಿಚಾರಣೆಯೆ ಪ್ರದಕ್ಷಿಣಸಮರ್ಪಣೆಯು. ವಿಷ್ಣು
ವೇಮೊದಲಾದ ದೇವತೆಗಳಮಾರ್ಗದಲ್ಲಿ ಆತ್ಮಸ್ವರೂಪವಾದನಾನೇ॥೮॥

ವಂದ್ಯನಲ್ಲದ ತುಚ್ಛವಾದ ಜಗಮೆನ್ನಿಂದ, ವಂದ್ಯವಲ್ಲೆಂಬುದೇವಂದನೆ
ಯೆನಿಪುದು॥ ॥ಟೀ॥ ನಮಸ್ಕಾರಯೋಗ್ಯನಲ್ಲದೆ, ಅಶಾಶ್ವತವಾದ ಜ
ಗತ್ತಿನಲ್ಲಿರುವ ದೇವತೆಗಳು ಆತ್ಮಸ್ವರೂಪವಾದ ನನ್ನಿಂದ, ನಮಸ್ಕಾರ
ಯೋಗ್ಯರಲ್ಲವೆಂಬಭಾವನೆಯೆ, ಪ್ರಣಾಮದಸಮರ್ಪಣೆಯೆನಿಸುವದು॥೯॥

ವ॥ ಆತ್ಮೇಶ್ವರನಿಗೆಂದು ದೃಶ್ಯಭೂತ ಪ್ರಪಂಚವೆಂಕುರಿತು ವಿಧಿ

ಮುಖದಿಂದೆಣಿಸಿದ ಸಪ್ತದಶೋಪಚಾರಮಂ ಪೇಳಿ, ಮತ್ತಂ ದೃಶ್ಯಭೂತ ಪ್ರಪಂಚಮಂಕುರಿತು ನಿಶೇಧರೂಪದಿಂ ಸ್ವರೂಪಲಿಂಗಾರ್ಚನೆಯುಂ ಪೇಳುತಿರ್ದಪನದೆಂತೆನೆ. ॥ಟೀ॥ ಆತ್ಮಸ್ವರೂಪವಾದ ಈಶ್ವರನಿಗೆ, ಇಂತೆಂದು ಕಣ್ಣಿಗೆಕಾಣಿಸುವಂಥಾ ಪ್ರಪಂಚವನ್ನು, ಲಕ್ಷ್ಯಾಮಾಡಿಕೊಂಡು ವಿಧಾನಪ್ರಕಾರದಿಂದ, ಲೆಕ್ಕಕ್ಕೆಬಂದ ಹದಿನೇಳುಪ್ರಕಾರವಾದ, ಉಪಚಾರಂಗಳನ್ನು ಹೇಳಿ, ಮತ್ತಿನ್ನು ಪ್ರತ್ಯಕ್ಷವಾಗಿರುವ ಜಗತ್ತನ್ನು ಹೇತುಮಾಡಿಕೊಂಡು, ಜಗತ್ತಿರಸ್ಕಾರದಿಂದ, ಆತ್ಮಸ್ವರೂಪವಾದ ಲಿಂಗದಪೂಜೆಯನ್ನು ಹೇಳುತ್ತಲಿದ್ದಾನೆ, ಅದು ಹ್ಯಾಗೆಅಂದರೆ. ॥೧॥

ಗದ್ಯ॥ ಇತಿ ಶ್ರೀಮತ್ಸಮಸ್ತತತ್ವತಾತ್ವಿಕವಿಚಾರ
ಪಾರೀಣಶಾಲ್ಯ ಕ್ಷಿತಿಪಾಲಕೃಷ್ಣಪ್ರಭುವಿರಚಿ
ತಮಾದ ನಿಜದಿಪೀಕಾ ರತ್ನಗ್ರಂಥದಲ್ಲಿ ಆತ್ಮ
ಲಿಂಗಾರ್ಚನಾ ಪದ್ಧತಿ ಪ್ರಥಮೋಧ್ಯಾಯಂ
ಸಂಪೂರ್ಣಂ॥

(ಇತಿಪದ್ಧತಿ ೧ ಆತ್ಮಲಿಂಗಾರ್ಚನೆಯಂ ಪೇಳ್ದಿಲ್ಲಿಗೆಪದಂಗಳಂ)

## ೨ ಶಿವಪೂಜಾಪದ್ಧತಿ ಪ್ರಾರಂಭವು.

ಯೇಕತಾಳ ॥ ಊಹಿಸಲಖಿಲದೊಳಗೊಡನಿಹುದಕ್ಕೆ । ವಾಹನೆಯೇಸರ್ವವಾಸಮಾಗಿರುವ॥ ಟೀ॥ ವಿಚಾರಮಾಡಿದರೆ ಚರಾಚರಾತ್ಮಕವಾದ ಪ್ರಪಂಚದೊಡನೆ, ಕೂಡಿಕೊಂಡಿರುವ ಆತ್ಮಲಿಂಗಕ್ಕೆ ಆವಾಹನೆಯೆಂಬ ಉಪಚಾರಕೆಲಸವಿಲ್ಲ॥ ॥೧॥

ಮೂ॥ ವಸ್ತುಮಾತ್ರಕೆ ಪಟ್ಟವಣೆಯೇಭಾವನಿ, ರಸ್ತಕಲುಷಕೆಪಾದಾರ್ಘ್ಯಾಚಮನವೆ॥ ಟೀ॥ ಆತ್ಮಸ್ವರೂಪವಾದ ಲಿಂಗಕ್ಕೆ ಆಚಮನವೆಂಬ ಉಪಚಾರಕೆಲಸವಿಲ್ಲಾ, ಸದ್ರೂಪವಾದ ಭಾವದಿಂದ ಹೋಗಾಡಿ

ಸಲ್ಪಟ್ಟ ಮಾಯಾಮಲಿನಉಳ್ಳ ಆತ್ಮಸ್ವರೂಪಲಿಂಗಕ್ಕೆ, ಪಾದಪ್ರಕ್ಷಾಳನೋದಕವನ್ನು, ಹಸ್ತಪ್ರಕ್ಷಾಳನೋದಕವನ್ನು, ಆಚಮಾನವು ಕೆಲಸವಿಲ್ಲವೆಂದು ನಿಶೇಧಿಸುವದೆ ಉಪಚಾರ. ||೨||

ಕೇವಲಚಿನ್ಮಯಕೆ ಸ್ನಾನವೆಮುಂತ, ಜೀವಿತವಿಶ್ವಕೆಚೇಲವೆಚಾರು||

||ಟೀ|| ಅತ್ಯಂತ ನಿರ್ಮಲವಾದ ಚಿತ್ಸ್ವರೂಪಕ್ಕೆ ಸ್ಥಾನವೇ ವಳಗೆಯಿದ್ದುಕೊಂಡು, ಪ್ರಪಂಚವನ್ನು ಬದುಕಿರುವಹಾಗೆ ಮಾಡಿಕೊಂಡುಯಿರುವ ಅತ್ಮಸ್ವರೂಪಲಿಂಗಕ್ಕೆ ಮನೋಹರವಾದ ವಸ್ತ್ರವಿಲ್ಲವೆಂಬ ನಿಶೇಧವೇ, ವಸ್ತ್ರಸಮರ್ಪಣೆಯೆಂಬಉಪಚಾರ. ||೩||

ಗೋತ್ರಾತಿಗಕ್ಕೆ ಯಜ್ಞೋಪವೀತವೆಚ್ಯುತ, ಗಾತ್ರಕ್ಕೆ ಗಂಧವೆ ಘನವಾದಕ್ಷತವೆ. ||ಟೀ|| ಗೋತ್ರವೆ ಯಿಲ್ಲದಂಥಾ ವಸ್ತುವಿಗೆ, ಯಜ್ಞೋಪವೀತ ಧಾರಣೆಯುಂಟೆ; ಬಿಡಲ್ಪಟ್ಟಂಥಾ ಶರೀರಉಳ್ಳ ವಸ್ತುವಿಗೆ ಗಂಧವೆಂಬುವದುಂಟೆ, ಘನವಾದಂಥಾ ಅಕ್ಷತೆಯೆಂಬುವದುಂಟೆ. ||೪||

ಯೆಡದೆರಪಿಲ್ಲದ ಮೃಡಕೆ ಕುಸುಮಗಳೆ, ಜಡಜಗತ್ಕರ್ತವ್ಯದೆಡರಳಿದುದಕೆ. ||ಟೀ|| ಕಾಲಪರಿಚ್ಛೇದ, ದೇಶಪರಿಚ್ಛೇದ, ವಸ್ತುಪರಿಚ್ಛೇದ, ಶೂನ್ಯವಾದ ವಸ್ತುವಿಗೆಪುಷ್ಪಸಮರ್ಪಣೆ ಕೆಲಸವಿಲ್ಲ, ಅಚೇತನಸ್ವರೂಪವಾದ ಚರಾಚರರೂಪ ಪ್ರಪಂಚದಿಂದ ಮಾಡಲ್ಪಟ್ಟ ಕ್ರಿಯಾಸಂಬಂಧವಿಲ್ಲದೆ, ಯಿರುವ ವಸ್ತುವಿಗೆ. ||೫||

ದೂಪವೆ ನಿರ್ಗತದೂಪಕ್ಕೆ ಸಾಕ್ಷಿಗೆ, ದೂಪವೆ ತೃಪ್ತಕ್ಕೆದಿವ್ಯೋದನ್ನವೆ. ||ಟೀ|| ಹೋಗಲ್ಪಟ್ಟ ಮಾಯಾಸಂಬಂಧವುಳ್ಳ ವಸ್ತುವಿಗೆ ಸುವಾಸನೆಯುಳ್ಳಂಥಾ ದೂಪಕೆಲಸವಿಲ್ಲ. ಸರ್ವಪ್ರಕಾಶವಾದ ಸಾಕ್ಷಿಸ್ವರೂಪವಸ್ತುವಿಗೆ, ದೀಪೋಪಚಾರಕೆಲಸವಿಲ್ಲ, ನಿತ್ಯತೃಪ್ತವಾದ ಆತ್ಮಲಿಂಗಕ್ಕೆ, ದಿವ್ಯಾನ್ನ ನೈವೇದ್ಯುಪಚಾರಕೆಲಸವಿಲ್ಲ. ||೬||

ಮೂಲವಾಗಿಹ ಭೇದವೊಂದಿರ್ಪುದಕೆತಾಂ, ಬೂಲವೆ ಯಂತವಪೊಂದಿರ್ಪುದಕೆ. ||ಟೀ|| ಜಗದಧಿಷ್ಟಾನವಾಗಿರುವದಾಗಿಯೂ, ಯರಡೆಂಬ ಭೇದಹೊಂದದೆ ಯಿರುವ ವಸ್ತುವಿಗೆ, ತಾಂಬೂಲವೆಂಬ ಉಪಚಾರ ಕೆಲಸವಿಲ್ಲ, ಆದ್ಯಾಂತಂಗಳಿಲ್ಲದ ವಸ್ತುವಿಗೆ ||೭||

ಬಲಗೊಂಬುದೇ ವೇದಪಟಲಾಗವ್ಯಕೆ, ಲಲಿತನುತಿಯೆಯೆ ತಲ್ಲಷೆ ಣಾವುಳ್ಳ ಟೀ॥ ಪ್ರದಕ್ಷಿಣವೊಳ್ಪ ಮುಪಚಾರಕೆಲಸವಿಲ್ಲ, ವೇದಗಳ ಸಮೂಹದಿಂದ, ಸ್ತೋತ್ರಮಾಡುವದಕ್ಕೆ ಅಶಕ್ಯವಾದವಸ್ತುವಿಗೆಮನೋಹರವಾದ ಸ್ತೋತ್ರವಮಾಡುವ ಉಪಚಾರಕೆಲಸವಿಲ್ಲ, ಈ ಪೂರ್ವೋಕ್ತ ಲಕ್ಷಣಲಕ್ಷಿತವಾದಂಥಾ ... ॥೮॥

ತನಗೆಂಬುದೇ ಪೂಜೆತಾತ್ವಿಕರನುಭವ, ಘನವಿದು ನೀನೀದ ನನುದಿನ ನಡಸು. ॥ಟೀ॥ ಆತ್ಮಸ್ವರೂಪವಾದಂಥಾತನಗೆ ಕ್ರಿಯಾರೂಪವಾದ ಸಪ್ತದಶೋಪಚಾರ ಪೂಜೆಯು ಕೆಲಸವಿಲ್ಲವೆಂದು ನಿಶೇಧವಮಾಡುವದೇ ಆತ್ಮಲಿಂಗಾರ್ಚನೆಯೆಂದು ತತ್ವವನ್ನು, ತಿಳಿದಂಥಾವರ ಅನುಭವದಪೂಜೆಯಿದು, ಯಿದೇದೊಡ್ಡದಾದಪೂಜೆಯುನೀನು ಪ್ರತಿದಿನದಲ್ಲಿಯೂ ಈ ಆತ್ಮಲಿಂಗ ಪೂಜೆಯನ್ನು ಮಾಡು ॥೯॥

ವ॥ ಇಂತೆಂದು ಸ್ವರೂಪಶಿವಪೂಜಾಪದ್ಧತಿಯಂ ಪೇಳಿಸಂತೋಷಚಿತ್ತದಿಂದಿನ್ನೊಂದುಪ್ರಕಾರಮಂ ಪೇಳುತ್ತಿರ್ದಪನದೆಂತೆನೆ. ॥ಟೀ॥ ಈಪ್ರಕಾರವೆಂದು ತನ್ನಸ್ವರೂಪವಾದ ಶಿವನಪೂಜೆಯ ಮಾರ್ಗವನ್ನುಹೇಳಿ ಆನಂದವನ್ನುಹೊಂದಿದ ಚಿತ್ತದಿಂದ ಇನ್ನೊಂದುರೀತಿಯಾಗಿ ಹೇಳುತ್ತಲಿದ್ಧಾನೆ ಅದು ಹ್ಯಾಗೆಅಂದರೆ॥ ಅನಾತ್ಮಾಭಿಮಾನಿಗಳಾದವರ ಮತಗಳ ನಿರಾಕರಣೆಯನ್ನುಮಾಡಿ ಹೇಳುತ್ತಾಯಿದ್ಧಾನೆ. ... ॥೧॥

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕವಿ
ಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣಪ್ರಭು
ವಿರಚಿತಮಾದ ನಿಜದೀಪಿಕಾ ರತ್ನಗ್ರಂಥ
ದಲ್ಲಿ ಶಿವಪೂಜಾಪದ್ಧತಿ ದ್ವಿತಿಯೋ
ಧ್ಯಾಯಸಂಪೂರ್ಣಂ॥

(ಇತಿಪದ್ಧತಿ ೨ ಶಿವಪೂಜಾರ್ಚನೆಯಂ ಪೇಳಿದಿಲ್ಲಿಗೆ ಮಂಗಳಂ)

---

# ಶ್ರೀ ಅನಾತ್ಮ ನಿರಸನ ಪದ್ಧತಿ ಪ್ರಾರಂಭವು.

ಮೊ॥ ಜಂಪೆ॥ ಸುತನಾತ್ಮನೆಂಬವರಸುದ್ಧಿಯಂಗೈಯದಿರು ।
ಕುತನುತಾನೆಂಬವರಕೂಟವೈದದಿರು ॥ ॥ಟೀ॥ ತಾನೇ ತನ್ನಮ
ಗನಾದನೆಂಬವರಮಾತುಗಳನ್ನು ನೀನುಕೇಳಬೇಡ, ಜಡವಾದಂಥಾದೇ
ಹವೇ ಆತ್ಮಸ್ವರೂಪವೆಂದು ಹೇಳುವಂಥಾವರಗುಂಪಿನಲ್ಲಿ ಸೇರಬೇಡ॥೧॥

ತಾನೆಂಬರಿಂದ್ರಿಯ ವಿತಾನಮಂನಂಬದಿರು; ಪ್ರಾಣಗಳನಾತ್ಮನೆಂಬ
ವರಪ್ಪೊಂದದಿರು. ॥ಟೀ॥ ದಶೇಂದ್ರಿಯಗಳೆ ಆತ್ಮಸ್ವರೂಪವೆಂದು ಹೇ
ಳುವರಮಾತಿನಲ್ಲಿ ನಂಬಿಗೆಕೆಲಸವಿಲ್ಲ, ಪ್ರಾಣ, ಅಪಾನ, ಉದಾನ,
ವ್ಯಾನ। ಸಮಾನಗಳೆಂಬಪಂಚವಾಯುಗಳೆ, ಆತ್ಮಯಂಬವರಹೊಂದುವಿ
ಕೆಕೆಲಸವಿಲ್ಲ ... ... ॥೨॥

ಅಂತರಂಗದನಾತ್ಮನೆಹುದೆಂಬರೆಳಸದಿರು, ಇಂತಿವರಸಂಗದಿಂದಿಹುದಾ
ತ್ಮನಲ್ಲಿ. ॥ಟೀ॥ ಅಹಂಕಾರವೆಆತ್ಮಸ್ವರೂಪವೆಂದು ಹೇಳುವಂಥಾವರ
ನ್ನು ಬಯಸಬೇಡ. ಹೀಗೆಹೇಳುವಂಥಾವರ ಸಂಬಂಧದಿಂದಯಿರುವದು॥
ಆತ್ಮಸ್ವರೂಪದಲ್ಲಿ ॥ ... ॥೩॥

ಗುಣದೋಷವೆಂಬವರಕುಲಪಥವಮೆಟ್ಟದಿರು, ಯೆಣಿಸುನಾನಾರೆನ್ನ
ಲೀಶ್ವರನೆನುತ್ತ॥ ಟೀ॥ ಗುಣತ್ವದೋಷತ್ವಂಗಳ ಹೇಳುವಂಥಾವರ
ಸಮೂಹದಮಾರ್ಗವನ್ನು ತುಳಿಯದಿರು, ನಾನುಯಾರುಯೆಂದರೆ ಪರ
ಬ್ರಹ್ಮಸ್ವರೂಪವೆಂದು ಅರಿತುಕೊ ॥ ... ॥೪॥

ಪ್ರತ್ಯಗಾತ್ಮನೆನುತ್ತ ಪರಮಾತ್ಮನೆಂದೆನುತ । ಸತ್ಯನೆಂದೆನುತ ನಿ
ಸ್ಸಂಗನೆಂದೆನುತ ॥ಟೀ॥ ಸಾಕ್ಷಿಸ್ವರೂಪನಾನು ಯೆಂತಲೂ, ಕೂ
ಟಸ್ಥಸ್ವರೂಪ ನಾನುಯೆಂತಲೂ, ಯತಾರ್ಥಸ್ವರೂಪ ವಾದಂಥಾವನು
ನಾನು, ಮಾಯಾಸಂಬಂಧವಿಲ್ಲದವನುನಾನುಯನ್ನುವದಾಗಿತಿಳಿದುಕೊ॥೫॥

ವ॥ ಇಂತನಾತ್ಮ ನಿರಸನ ಪದ್ಧತಿಯಂ ಸೂಚಿಸಿ । ಇನ್ನೊಂದು
ಪ್ರಕಾರಮಂ ಪೇಳುತಿರ್ದಪನದೆಂತೆನೆ. ॥ಟೀ॥ ಈರೀತಿಯಾಗಿ ಆತ್ಮ

ಸ್ವರೂಪವಲ್ಲದ ಪದಾರ್ಥಗಳ ಬಿಡುಗಡೆಯ ಮಾರ್ಗವನ್ನು ಹೇಳಿ।
ಇನ್ನೊಂದು ವಿಧವಾಗಿ ಹೇಳುತ್ತಾಲಿದ್ದಾನೆ।ಅದುಹ್ಯಾಗೆಅಂದರೆ ॥೩॥

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವ ತಾತ್ವಿಕ
ವಿಚಾರ ಪಾರೀಣಶಾಲ್ಯ ಕ್ಷಿತಿಪಾಲ ಕೃಷ್ಣ
ಪ್ರಭು ವಿರಚಿತವಾದ ನಿಜದೀಪಿಕಾರ
ತ್ನಗ್ರಂಥದಲ್ಲಿ ಅನಾತ್ಮನಿರಸನಪದ್ಧ
ತಿ ತ್ರಿತಿಯೋಧ್ಯಾಯಸಂಪೂರ್ಣಂ॥

ಇತಿ ಪದ್ಧತಿ ೩ ಅನಾತ್ಮನಿರಸನ ಪೇಳಿದಲ್ಲಿಗೆ ಮಂಗಳಂ.

## ದೃಗ್ದೃಶ್ಯ ವಿವೇಕ ಪದ್ಧತಿ ಪ್ರಾರಂಭವು.

ಮೂಲ—ಅಟತಾಳ॥

ತೋರುವೀಸಚರಾಚರಂಗಳು।ಕೋರ್ಕೆಗಾಹವುದೃಶ್ಯವು।ತೋರಿಸು
ವೆಕಣ್ಣಿದನುದೃಕ್ಕೆಂದೋದಲೆಸೆಗುಂ॥ ॥ಟೀ॥ ಕಾಣುತ್ತಲಿರುವಸ್ಥಾ
ವರಜಂಗಮಾತ್ಮಕವಾದ ಲೋಕಂಗಳು, ಕಾಣುವದಕ್ಕೆ ಆಗುತ್ತಲಿರುವ
ದೃಶ್ಯವು ಅನ್ನಿಸಿಕೊಳ್ಳುತ್ತೆ, ಈ ಪ್ರಪಂಚವನ್ನು ನೋಡುವಹಾಗೆ ಮಾ
ಡುವಕಣ್ಣು ದೃಕ್ಕುಯೆಂಬು ಹೇಳುವದಕ್ಕೆ ಆಗುತ್ತೆ॥ ... ॥೧॥

ಅದರ ಪಟುಮಾಂದ್ಯಾದಿಗಳು ದೃಶ್ಯಾಭಿದಾನದಿಂದಿಹ, ವದರನೋ
ಡುವಬುದ್ಧಿ ದೃಕ್ಕಹುದರ್ಥಗಳನು ॥ಟೀ॥ ಆಕಣ್ಣಿನ ಪಟುತ್ವಮಾಂ
ದ್ಯತ್ವಾದಿಗಳು ದೃಶ್ಯಾಯೆಂಬುವಹೆಸರಿನಿಂದ ಯಿರುತ್ತಾ ಇವೆ. ಪಟುತ್ವ
ಮಾಂದ್ಯತ್ವಾದಿಗಳಾದ ವಿಷಗಳನ್ನು ತಿಳಿಯುತ್ತಲಿರುವ ಬುದ್ಧಿಯುದೃ
ಕ್ಕುಯೆಂದೆನಿಸಿಕೊಳ್ಳುವದಾಗುತ್ತೆ॥ ... ॥೨॥

ಅಲ್ಲಿರುವ ಕಾಮಾದಿಗಳು ದೃಶ್ಯಾಖ್ಯದಿಂದಲಿ ರಾಜಿಸೆ, ಲೆಲ್ಲವೆಂನಿದಿರಿಟ್ಟವಂತಾನೇಕವಾಗಿ॥ ॥ಟೀ॥ ಆ ಬುದ್ಧಿಯಲ್ಲಿಯಿರುವ ಕಾಮಕ್ರೋಧ ಲೋಭಾದಿಗಳು ದೃಶ್ಯಗಳುಯೆಂಬುವ ಹೆಸರಿನಿಂದ ಪ್ರಕಾಶಿಸುತ್ತಲಿರುವವಾಗಿ, ಈ ಪೂರ್ವೋಕ್ತಗಳಾದ ದೃಶ್ಯರೂಪ ಪದಾರ್ಥಗಳನ್ನು ಯೆದುರಾಗಿ ಯಿಟ್ಟುಕೊಂಡು, ತಾನು ಅವರೊಳಗೆ ಕೂಡಿದಹಾಗೆ ಯಿದ್ದು ಕೊಂಡು ತಾನು ಒಂದಾಗಿ॥ ... ... ॥೩॥

ಕಾಬಚಿತ್ತೆ ದೃಕ್ಕೆ ನಿಪುದದ।ಕಾಬೆ ದೃಕ್ಕಂತೋರದು, ಯೇಬಗೆಯೊಳಾದರೆ ಯಿದಂನೀನೆನ್ನಲುಚಿತಂ॥ ॥ಟೀ॥ ಅರಿವುವೆಂಥಾ ಅರಿವೆದೃಕ್ಕು ಯೆನಿಸಿಕೊಳ್ಳುತ್ತಲಿಥೆ. ಆಮೂಲದೃಕ್ಕಾದ ಚಿತ್ತಿನಿಂದ ಮೇಲೆದೃಕ್ಕು ಯೆನ್ನುವ ವಸ್ತು ಹೇಳುವದಕ್ಕೆ ಯಿಲ್ಲವಾದ್ದರಿಂದ, ಯಾವಪ್ರಕಾರದಿಂದಲಾದರೆಯು,ಆಚಿತ್ಸ್ವರೂಪವೆನೀನುಯೆಂದುತಿಳಿಯುವದೇಯೋಗ್ಯವು॥೪॥

ನಾನೆನುತ ದೃಶ್ಯಕ್ಕಸಂಗತಿ, ನಾಟಲಾಗಾನೀನಹೆ,ಭಾನುಮಾತ್ರನಪಾವರಣನನುಭಾವಸಿದ್ಧಂ॥ ॥ಟೀ॥ ಆ ಚಿತ್ಸ್ವರೂಪವೆ ನಾನುಯೆಂದು ತಿಳಿದಿದ್ದರಿಂದ, ದೃಶ್ಯರೂಪ ಪ್ರಪಂಚವಿಲ್ಲದೆ ಹೋಗುತ್ತಿರಲಾಗಿ, ಸೂರ್ಯನಹಾಗೆ ಸ್ವಪ್ರಕಾಶನೀನಾಗುತ್ತಿದ್ದೀಯೆ, ತ್ರಿಪುಟಿ ಆವರಣರಹಿತನಾಗಿಯೂ ಅನುಭವಕ್ಕೆ ತೋರುತ್ತಲಿರುತ್ತೀಯೆ ... ॥೫॥

ವ॥ ವಿಜ್ಞಾನ ಭಾನಗಳಿಗೆ ಜನ್ಯಜನಕತ್ವವುಂಟೋಯಿಲ್ಲವೋಯೆಂದು ಆಕ್ಷೇಪಿಸಲಾಗಿ ಯಿಲ್ಲವೆಂಬದಾಗಿ ಹೇಳುತ್ತಲಿದಾನೆ॥ ॥೧॥

ಕಂ॥ ವಿಜ್ಞಾನಜನ್ಯಮಾಗದು । ವಿಜ್ಞಾನೇಭಾನಂಸುಭಾನಜನ್ಯವೆನಿಸವೈ । ಯಜ್ಞಾನಮಿಲ್ಲಿಭಾನವೆ । ವಿಜ್ಞಾನಸ್ಥಲಕೆಸೇರದೈಪರಿಣಾಮಂ ॥೧॥

॥ಟೀ॥ ಯೆಲೈಚೆನ್ನಾಗಿತಿಳಿದ ಮನಃಪ್ರಭುವೆ, ಪ್ರಕಾಶಮಾತ್ರವಾದಂಥಾ ಆತ್ಮಸ್ವರೂಪವು, ವಿಜ್ಞಾನದಿಂದ ಹುಟ್ಟಿದಂಥಾದ್ದು ಆಗುವದಿಲ್ಲ, ಜ್ಞಾನಸ್ವರೂಪವಾದ ವಸ್ತುವು ಪ್ರಕಾಶಮಾತ್ರದಿಂದ ಹುಟ್ಟಿದ್ದು ಯೆನಿಸಿಕೊಂಬುವದಿಲ್ಲವೈಯು, ಈಸ್ಥಲದಲ್ಲಿ ಪ್ರಕಾಶಮಾತ್ರನೆ ವಿಜ್ಞಾನ, ಜ್ಞಾನಸ್ವರೂಪವಾದ ವಸ್ತುವಿಗೆ, ಪರಿಣಾಮತ್ವವು ಶೇರುವದಿಲ್ಲವೈಯ್ಯ॥

ಕಂ॥ ಮಾನಸನ್ನಪನೇಕೇಳಿ, ಜ್ಞಾನಂ ಮೇಣಾಗದಾಗವಾರಂಭಕವಿಾ, ಭಾನಕ್ಕೆಭಾಸಮೆವಿ, ಜ್ಞಾನಂ ವಿಜ್ಞಾನಲೇಸು ಭದ್ರಂಭಾನಂ ॥

॥ಟೀ॥ ಯೆಲೈ ಮನಃಪ್ರಭುವೆ ಕೇಳಯ್ಯಾ, ಜ್ಞಾನಸ್ವರೂಪನ್ನುಮತ್ತು ಭಾನಮಾತ್ರವಸ್ತುವಿನಿಂದ ಆರಂಭಿಸಲ್ಪಟ್ಟದ್ದಾಗುವದಿಲ್ಲ, ಈ ಪ್ರಕಾಶಮಾತ್ರ ವಸ್ತುವಿಗೆ ಪ್ರಕಾಶವಾದಂಥಾದ್ದು, ಜ್ಞಾನ, ಜ್ಞಾನಸ್ವರೂಪನ್ನು, ವಿಜ್ಞಾನನ್ನು, ಒಳ್ಳೇ ಶ್ರೇಯಸ್ಕರವಾದ ಪ್ರಕಾಶಮಾತ್ರ ವಸ್ತುವು ॥ ... ॥೨॥

ವ॥ ಇಂತೆಂದು ದೃಗ್ದೃಶ್ಯವಿಭಾಗ ಪದ್ಧತಿಯನರುಹಿ ಇನ್ನೊಂದು ಪ್ರಕಾರಮಂ ಪೇಳುತ್ತಿರ್ದಪನದೆಂತೆನೆ. ॥ಟೀ॥ ಈಪ್ರಕಾರವಾಗಿ ದೃಕ್ಕು ದೃಶ್ಯ ರೂಪಗಳ ರೀತಿಯಾಗಿ ಹೇಳುತ್ತಿದ್ದಾನೆ, ಅದು ಹ್ಯಾಗೆಅಂದರೆ. ... ... ॥೧॥

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವ ತಾತ್ವಿಕ
ವಿಚಾರ ಪಾರೀಣಶಾಲ್ಯ ಕ್ಷಿತಿಪಾಲ ಕೃಷ್ಣ
ಪ್ರಭು ವಿರಚಿತವಾದ ನಿಜದೀಪಿಕಾರ
ತ್ನ ಗ್ರಂಥದಲ್ಲಿ ದೃಗ್ದೃಶ್ಯ ವಿವೇಕ
ಪದ್ಧತಿ ಚತುರ್ಥೋಽಧ್ಯಾಯ
ಸಂಪೂರ್ಣಂ॥

(ಇತಿ ಪದ್ಧತಿ ೪ ದೃಗ್ದೃಶ್ಯ ಪೇಳಿದಲ್ಲಿಗೆ ಮಂಗಳಂ.)

---

## ಅಹಾಂಕಾರಪದ್ಧತಿಪ್ರಾರಂಭವು.

---

ಮೂಲ ಜಂಪೆ.

ತನಯನೊಳ ಹಂಕಾರ ತಗುಲಿದರು ಜನ್ಯಾದಿ, ಜನರ ಸಂಗತಿಯಿಂದ ಜನಿಸುವದು ಭೇದಂ ॥ಟೀ॥ ಪುತ್ರನಲ್ಲಿ ಹಾಂಕಾರವೆಂಬ ಕರಣ ಸಂಬಂಧ ವಿದ್ದಾಗ್ಯೂ, ಇವನು ಹುಟ್ಟಿಸಿದವನು, ಇವನು ಹುಟ್ಟಿದವನು, ಜನ್ಯಜನಕವೆಂಬ, ಜನರ ಸಂಗತಿಯಿಂದ ಹಾಂಕಾರ ಕರಣಕ್ಕೆ ಭೇದವಾಗುತ್ತಲಿಧೆ॥ ... ॥೧॥

ವಪುವಿನೊಳ ಹಾಂಕಾರ ವರ್ತಿಸಿದರು ಮೃತಿಮೂ, ಛ್ಯಪದಂಗೆ ಳಲ್ಲಿ ಸಂಗಕ್ಕೆಹುದುಭೇದಂ ||ಟೀ|| ಶರೀರದಲ್ಲಿ ಅಭಿಮಾನ ರೂಪವಾದ ಹಾಂಕಾರ ಪ್ರವರ್ತಿಸಿದಾಗ್ಯೂ, ಮರಣ ಮೂರ್ಛೆಸುಷುಪ್ತಿ ಸ್ಥಾನಂಗಳಲ್ಲಿ, ಹಾಂಕಾರ ಸಂಬಂಧವಿಲ್ಲವಾದ್ದರಿಂದ, ಶರೀರಕ್ಕೆ ಸಂಬಂಧವಿಲ್ಲದೆ ಹೋಗುತ್ತೆ || ... ||೨||

ಇಂದ್ರಿಯದಿ ಹಂಮಿನಿರವನಿಸಿದರುತದಪಕಾ, ರಂದ್ರವದಿನೆನೆವ ಕಾರಣ ಮಕ್ಕುಭೇದಂ ||ಟೀ|| ದಶೇಂದ್ರಿಯಗಳಲ್ಲಿ ಹಾಂಕಾರ ವಿರೋಣ ಪ್ರವರ್ತಿಸಿದಾಗ್ಯೂ, ಆ ಇಂದ್ರಿಯಗಳ ಹಾನಿಯನ್ನು ಬಯಸುವ ಹೇತುವಿನಿಂದ, ಹಾಂಕಾರಕ್ಕು ಇಂದ್ರಿಯಗಳಿಗು ಭೇದವಾಗುತ್ತೆ ||೩||

ಅಸುವಿನೊಳ ಹಾಂಕಾರವಂಟಿರ್ದರುಸ್ಸುರ, ದ್ವ್ಯಸನದಿಂ ಕಳಿವೆನೆಂಬಲ್ಲಹುದುಭೇದಂ ||ಟೀ|| ಪ್ರಾಣಗಳಲ್ಲಿ ಹಾಂಕಾರ ಸಂಬಂಧ ಅಂಟಿಕೊಂಡಿದ್ದಾಗ್ಯೂ, ಪ್ರಕಾಶವಾಗಿ ಬಂದ ಅತಿದುಃಖದಿಂದ, ಪ್ರಾಣಗಳನ್ನಾದರು ತ್ಯಾಗವಂ ಮಾಡಿಬಿಡುತ್ತೇನೆಯೆಂಬ ಹೇತುವಿನಿಂದ, ಹಾಂಕಾರ ಕರಣಕ್ಕು, ಪ್ರಾಣಗಳಿಗುಭಿನ್ನತ್ವವಾಗುತ್ತೆ. ||೪||

ಅಂತರಂಗದಲಿ ಹಂಮಡಸಿರ್ದರು ಸುಷುಪ್ತಿ, ಯಂತಿಳಿಯೆನೇನನೆಂದೆನಲಕ್ಕು ಭೇದಂ ||ಟೀ|| ಅಂತಃಕರಣದಲ್ಲಿ ಹಾಂಕಾರರೂಪ ಕರಣ ಹೊಂದಿಯಿದ್ದಾಗ್ಯೂ, ಚೆನ್ನಾಗಿ ನಾನು ನಿದ್ದೆಮಾಡಿದ್ದರಿಂದ, ಯಾವಪದಾರ್ಥಂಗಳನ್ನು ನಾನು ಅರಿಯೆ ಆದದ್ದರಿಂದ, ಅಂತಃಕರಣಕ್ಕು ಹಾಂಕಾರ ಕರಣಕ್ಕು ಭಿನ್ನತ್ವವಾಗುತ್ತಲಿಧೆ ... ||೫||

ಇದಮಿಗರ್ಥಂಗಳಾಗಿರ್ಪವಿವ್ರಹಮ್ಮಿಗಾ, ಸ್ಪದವಾಗವಾವುದೆನೆ ಪದವದಕೆಕೇಳು ||ಟೀ|| ಚೆನ್ನಾಗಿ ಕಾಣಿಸುವಂಥಾ ದೃಶ್ಯರೂಪುಗಳಾಗಿರುವ ಶರೀರಾದಿ ಪದಾರ್ಥಗಳು, ಹಾಂಕಾರಕ್ಕೆ ಸ್ಥಾನಗಳಾಗಲಾರವು, ಆ ಹಾಂಕಾರಕ್ಕೆ ಸ್ಥಾನಯಾವದಂದರೆ, ಹಾಂಕಾರಕ್ಕೆ ಸ್ಥಾನಹೇಳುತ್ತೇನೆಕೇಳೈಯ್ಯಮನಃಪ್ರಭುವೆ || ... ||೬||

ನಿಷ್ಕಲನಿರಾವರಣ ನಿಜತತ್ವಮದಕರ್ಥ, ಪುಷ್ಕಲಮದೆಂದಿಗು ಪೊರಗನೊಂದಿರದು ||ಟೀ|| ಕಳಾರಹಿತವಾದ, ಪಂಚಕೋಶಾವರಣ

ಶೂನ್ಯವಾದ, ಯತಾರ್ಥವಾದ ಸಚ್ಚಿದಾನಂದ ಸ್ವರೂಪವೆ, ಹಾಂಕಾರಕ್ಕೆ ಅರ್ಥವಾದ್ದರಿಂದ, ಸಂಪೂರ್ಣವಾಗಿ ಹೊರಗೆ ಯಿರುವ ಶರೀರಾದಿ ಪದಾರ್ಥಗಳನ್ನ ಹಾಂಕಾರ ಕರಣಯೆಂದಿಗು ಹೊಂದಿಯಿರುವದಿಲ್ಲ॥೭॥

ಕಂ॥ ಬಹಿರಂತಭಾವ್ಗೊಲ್ಲಸ, ದಹವಾತ್ಮ ತೋರ್ಪರೆಂತೆನಲ್, ಚಿತ್ತದಿನಿ, ವರ್ಹಿಸಿ ಯದರ್ಥನುಮಣಿ, ಮಹಗಳ ಹಾಗಿರ್ಪರೆಂದು ಮಥಿಸಿಯೆಮತಿಯೊಳ್ ॥೮॥ ವಳಹೊರಗಣ ಭಾವಗಳಲ್ಲಿ ಪ್ರಕಾಶವಾಗಿ, ಹಾಂಕಾರಾತ್ಮರು ತೋರುತ್ತಲಿದ್ದಾರೆ, ಅದುಹ್ಯಾಗೆ ಅಂದರೆ, ಈಗ ಹೇಳಿದಂಥಾ ಅರ್ಥವನ್ನು ಚಿತ್ತದಲ್ಲಿ ಚನ್ನಾಗಿ ಧರಿಸಿ, ಬುದ್ಧಿಯಲ್ಲಿಚನ್ನಾಗಿ ವಿಚಾರಣೆಮಾಡಿ, ರತ್ನಕ್ಕು ರತ್ನಕಾಂತಿಗು ಹ್ಯಾಗೆ ಭೇದವಿಲ್ಲವೋ ಹಾಗೆ, ಅಭೇದವಾಗಿಧೆಯೆಂದು ತಿಳಿಯತಕ್ಕದ್ದು ॥

ವ॥ ಇಂತ ಹಾಂಕಾರ ಪದ್ಧತಿಯಂ ಕಿವಿಗೊಳಿಸಿ, ಇನ್ನೊಂದು ಪ್ರಕಾರಮಂ ಪೇಳುತ್ತಿರ್ದಪನದೆಂತೆನೆ ॥೮॥ ಈ ಪ್ರಕಾರವಾಗಿಹಾಂಕಾರ ಸ್ವರೂಪ ಮಾರ್ಗವನ್ನು ಕೇಳುವಹಾಗೆಮಾಡಿ, ಇನ್ನೊಂದು ಪ್ರಕಾರವಾಗಿ ಹೇಳುತ್ತಲಿದ್ದಾನೆ, ಅದುಹ್ಯಾಗೆ ಅಂದರೆ ॥೫॥

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವ ತಾತ್ವಿಕ
ವಿಚಾರ ಪಾರೀಣಶಾಲ್ಯ ಕ್ಷಿತಿಪಾಲ ಕೃಷ್ಣ
ಪ್ರಭು ವಿರಚಿತವಾದ ನಿಜದೀಪಿಕಾ
ರತ್ನ ಗ್ರಂಥದಲ್ಲಿ ಹಾಂಕಾರನಿರ
ಸನ ಪದ್ಧತಿ ಪಂಚಮೋ
ಧ್ಯಾಯ ಸಂಪೂರ್ಣಂ.

(ಇತಿ ಪದ್ಧತಿ ೫ ಹಾಂಕಾರಪದ್ಧತಿ ಪೇಳಿದಲ್ಲಿಗೆ ಮಂಗಳಂ.)

# ಶ್ರೀ ಪಂಚಕೋಶಪದ್ಧತಿ ಪ್ರಾರಂಭವು.

## ಮೂಲ—ತ್ರಿಪುಡೆ॥

ಐದುಪದರದಚೀಲದೊಳಗಣ । ನರ್ಘ್ಯರತ್ನದತೆರದಿನಿಜದೀ । ಐದುಕೋಶಗಳಂತರಾಳದೊಳಡಗಿರುವದು॥ ॥ಟೀ॥ ಪಂಚಪ್ರಕಾರವಾದ ಪದರಗಳುಳ್ಳಂಥಾ ಚೀಲದೊಳಗೆ ಯಿರುವ ಶ್ರೇಷ್ಠವಾದ ರತ್ನದಹಾಗೆ, ಯಿತಾರ್ಥಸ್ವರೂಪವಾದ ಬ್ರಹ್ಮವು, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯವೆಂಬ, ಕೋಶಗಳ ಮಧ್ಯಪ್ರದೇಶದಲ್ಲಿ, ಅಡಕವಾಗಿಧೆ ... ... ॥೧॥

ಧಾತುಸಪ್ತಕದಿಂದ ಕೂಡಿಹ।ತನುವೆನಿಪುದನ್ನಮಯಕೋಶವು, ಪ್ರೇತಮಲನಿಚಯಂಪ್ರಥಮಮೆಂದೆಣಿಕೆವಡೆಗುಂ॥ ॥ಟೀ॥ ಪಂಚಕೋಶಗಳವಿವರಹ್ಯಾಗೆಅಂದರೆ, ರಸದಾತು, ರಕ್ತದಾತು, ಮಾಂಸದಾತು, ಮೇಧಸ್ಸುದಾತು, ಅಸ್ತಿಧಾತು, ಮಜ್ಜಧಾತು, ಶುಕ್ಲಧಾತುಗಳೆಂಬವೆ ಸಪ್ತಧಾತುಗಳು ಇದರಿಂದ ಸಮೇತವಾದಂಥಾ, ಶರೀರವೆಂಬುದೇ ಅನ್ನಮಯಕೋಶವು, ಹೊಂದಲ್ಪಟ್ಟ ಮಲಿನತ್ವದ ಸಮೂಹಉಳ್ಳಂಥಾದ್ದಾಗಿ, ಮೊದಲನೆ ಕೋಶವೆಂದು ಲೆಕ್ಕಉಳ್ಳಂಥಾದ್ದು॥ ... ॥೨॥

ಇದರ ಮಧ್ಯದಲಿಂಗದೇಹದ।ಲಿರುವ ಕರ್ಮೇಂದ್ರಿಯಗಳುಂ ಪ್ರಾಣದನಿಕರಮಂಗೂಡಿ ಗಾಳಿಯಪದರಮಕ್ಕುಂ॥ ॥ಟೀ॥ ಈ ಸ್ಥೂಲ ಶರೀರದಮಧ್ಯಪ್ರದೇಶದಲ್ಲಿಯಿರುವ,ಲಿಂಗದೇಹದಲ್ಲಿ ಯಿರುವಂಥಾ,ವಾಕ್ಕು, ಪಾಣಿ,ಪಾದ, ಗುಹ್ಯ, ಪಾಯು, ಯೆಂಬಕರ್ಮೇಂದ್ರಿಪಂಚಕವನ್ನು, ಪ್ರಾಣ, ಅಪಾನ, ಉದಾನ, ವ್ಯಾನ,ಸಮಾನ।ವೆಂಬವಾಯು ಪಂಚಕವನ್ನು, ಸೇರಿಯರಡನೆಯ ಪ್ರಾಣಮಯ ಕೋಶವಾಗುತ್ತೆ ... ॥೩॥

ಈವರಣದವಲಗ್ನದೊಳ್ ಜ್ಞಾ।ನೇಂದ್ರಿಯಂಗಳು ಮನವ್ವವೊಂದಿರೆ, ಕೋವಿದರುಪೇಳ್ವರು ಮನೋಮಯಕೋಶವೆಂದು॥ ಟೀ॥ ಈಪ್ರಾಣಮಯಕೋಶದಾವರಣಮಧ್ಯದಲ್ಲಿ,ಶಬ್ದ, ಸ್ಪರುಶ, ರೂಪು, ರಸ, ಗಂಧವೆಂಬ ಜ್ಞಾನೇಂದ್ರಿಯ ಪಂಚಕವು, ಮನಸ್ಸುಕೂಡಿ ಯಿರುವಂಥಾದ್ದೆತಿಳಿ

ದಂಥಾವೆರುಮೂರನೆಯು ಮನೋಮಯಕೋಶವೆನ್ನುತ್ತ ಹೇಳುತ್ತಾರೆ||೪||

ಆಪ್ರೌರಿಯಗರ್ಭದಲಿ ನಾಲ್ಕನೆ|ಯದು ಚಿದಿಂದ್ರಿಯಹಂಕೃತಿಗಳಿಂ, ರೂಪನಾಂತಿರುತಿಹುದು ಕೋಶಂ ರೂಢಮಾಗಿ|| ಟೀ|| ಮನೋಮಯಕೋಶವೆಂಬ ಪದರದ ಮಧ್ಯಪ್ರದೇಶದಲ್ಲಿ, ಚಿತ್ತುಯೆನ್ನಿಸಿಕೊಂಬ, ಆತ್ಮಸ್ವರೂಪದಿಂದಲೂ, ಹಾಂಕಾರವೆಂಬ ಅಂತಃಕರಣದಿಂದಲೂ ಕೂಡಿ, ನಾಲ್ಕನೆಯದಾದ ವಿಜ್ಞಾನಮಯಕೋಶವೆಂದು ಪ್ರಸಿದ್ಧವಾಗಿ ಯಿರುತ್ತಲಿಧೆ ||೫||

ದಾತುಜನ್ಯಗಳಾದ ಪ್ರಿಯಮೋ|ದಪ್ರಮೋದಗಳುಂ ಪ್ರಕೃತಿಯುಂ, ವ್ರೋತಿರಲ್ಕಾನಂದ ಮಯಮೆಂದೊಪ್ಪುವಡೆದಾ|| ಟೀ|| ಸಪ್ತದಾತುಗಳಿಂದ ಹುಟ್ಟಿದ ವಸ್ತುದರ್ಶನ ಕಾಲದಲ್ಲಿ ಹುಟ್ಟಿದ ಸಂತೋಷವನ್ನು, ನೋಡಿದಂಥಾ ವಸ್ತು ಸಮೀಪಕ್ಕೆ ಬಂದಾಗ ತೋರಿದ ಅಧಿಕಸಂತೋಷವನ್ನು, ಸಮೀಪಕ್ಕೆ ಬಂದವಸ್ತುವಿನನುಭವಕಾಲದಲ್ಲಿ ಹುಟ್ಟಿದ ನಿರವಧಿಕವಾದ ಆನಂದವನ್ನು, ಪ್ರಕೃತಿಯು ಕೂಡಾ ಕೂಡಿಕೊಂಡು ಇರುವಂಥಾದ್ದು, ಐದನೆಯದಾದ ಆನಂದಮಯಕೋಶವೆಂದು ಒಪ್ಪಿಕೊಳ್ಳವಣ ಉಳ್ಳಂಥಾದ್ದು|| ... ... ||೬||

ಅಂಡವಹುದಾಮಧ್ಯದಲಿತದ|ವಾಪ್ತಿಯಿಂಭೋಕ್ತೃತೆಯಪೂರ್ದದ|ಖಂಡಚಿತ್ತೇನಾನೆನುತ ಮುಂಕೊಂಡು ಜೈಸು|| ||ಟೀ|| ಈ ಪಂಚಕೋಶವುಕೂಡಿ ಒಂದುಅಂಡವಾಗುತ್ತೆ, ಆ ಅಂಡದ ಮಧ್ಯಪ್ರದೇಶದಲ್ಲಿ ಆ ಅಂಡವನ್ನು ಹೊಂದಿದ್ದರಿಂದ, ಭೋಗವನನುಭವಿಸುವಂಥಾವನ ಭಾವವನ್ನು ಹೊಂದದೆಯಿರುವ, ಆಪರಿಪೂರ್ಣವಾದ, ಚಿದಾತ್ಮಕವಾದ ಆತ್ಮಸ್ವರೂಪವೆ ತಾನುಯೆನ್ನುತ್ತ, ಈ ಪಂಚಕೋಶಗಳನ್ನು, ಮುಂಚಿತವಾಗಿ ಜೈಸುವಂಥಾವನಾಗು|| ... ... ||೭||

ಗೀತೆ|| ಕವಚಗುಣವೆವಿಪಂಚಿಕಾಗಾನಮಲ್ಲ ಮೋದರೀಕೋಶನಿಷ್ಠಾಗುಣಾವಳಿಗಳುಆತ್ಮನಿಷ್ಠಮೆ ಯಲ್ಲವೆಂದರಿದುನಾನೆನುತ್ತಂ, ಭಾವಿಸಲ್ಬಂಧವೆತ್ತಲಿಹುದು|| ||ಟೀ|| ವೀಣೆಯಗಾನವು ವೀಣೆಗಹಾಕಿ ಹೊದ್ದಿಸಿಯಿರುವಂಥಾ, ಗೌಸಣಿಗೆ ಸಂಬಂಧವಾದ ಗುಣವಾದೀತೆಯಂದರೆ ಅಲ್ಲ

ವು, ಅದರೋಪಾದಿಯಲ್ಲಾದರೆ, ಈ ಪಂಚಕೋಶಗಳಲ್ಲಿ ಯಿರುವಂಥಾ, ಗುಣಸಮೂಹಗಳು, ಅಖಂಡ ಚಿತ್ಸ್ವರೂಪವಾದ ಆತ್ಮಸ್ವರೂಪವಾದೀತೆ, ಆಗುವದಿಲ್ಲವೆಂದು ತಿಳಿದು, ಆಚಿನ್ಮಾತ್ರವಸ್ತುವೆ ತಾನೆಂದು ಪರಿಭಾವನೆ ಮಾಡಿದಂಥಾವನಾದರೆ ಅಜ್ಞಾನದಿಂದಾದ ಸಂಸರಣ ರೂಪಬಂಧವೆಲ್ಲಿಯಿದ್ದೀತು, ಯಿರಲಾರದು॥

ವ॥ ಇಂತೆನ್ನಲೀಕೋಶಂಗಳ್ಯಾತಕ್ಕಾತ್ಮನಾಗದೆನ್ನಲು ॥ಟೀ॥ ಈ ಪ್ರಕಾರವಾಗಿ ಹೇಳಲಾಗಿ, ಈ ಪಂಚಕೋಶಂಗಳು, ಯಾತಕ್ಕೆ ಆತ್ಮಸ್ವರೂಪವಾಗಲಾರವು ಯೆಂದು ಕೇಳಲಾಗಿ, ಹೇಳುತ್ತಾಲಿದ್ದಾನೆ, ಪೃಥ್ವಿ, ಅಪ್ಪು, ತೇಜಸ್ಸುಗಳೆಂಬ, ಮೂರು ಭೂತಗಳಿಂದಲೆ, ತ್ರಿವೃತ್ಕರಣವಾಗಿ ಪಂಚಕೋಶಗಳು ಹುಟ್ಟಿದಕಾರಣ, ಆತ್ಮಸ್ವರೂಪವಾಗಲಾರವು ಯೆಂದು ಹೇಳುತ್ತಲಿದ್ದಾನೆ॥ ... ॥೧॥

ಮೂ॥ಸಾಂಗತ್ಯ॥ ಆನಂದಕೀಟ್ಟ ಮಧ್ಯಮನಿರ್ಮಲಾಂಶವು, ತ್ವನ್ನವಾಗುವದುತ್ರಿವಿಧದಿ ॥ ಚೆನ್ನಾಗಿ ಮಲಮಾಂಸ ಮಾನಸರೂಪದಿಂ, ದಿನ್ನು ಪೂರ್ವೋಕ್ತರೀತಿಯಲೀ॥ ॥ಟೀ॥ ಪೃಥ್ವೀಪರಿಣಾಮ ರೂಪವಾಗಿ ಉಂಡಂಥಾಅನ್ನದ ಉತ್ತಮಾಂಶವೆಂದು, ಮಧ್ಯಮಾಂಶವೆಂದು, ಅಧಮಾಂಶವೆಂದು, ಈ ಶರೀರದಲ್ಲಿ ಮೂರುಪ್ರಕಾರವಾಗಿ ಹುಟ್ಟುತ್ತಲಿಥೆ, ಸೊಗಸಾಗಿ ವಿಷ್ಟರೂಪದಿಂದಲೂ, ಮಾಂಸರೂಪದಿಂದಲೂ ಮನೋರೂಪದಿಂದಲೂ, ಇದಲ್ಲದೆ ಪೂರ್ವೋಕ್ತಪ್ರಕಾರವಾಗಿಯೂ, ಹುಟ್ಟುತ್ತಲಿಥೆ ... ... ॥೧॥

ತೋಯದಕೀಟ ಮಧ್ಯಮನಿರ್ಮಲಾಂಶವೆ, ಕಾಯಮಾನುವದುತ್ರಿವಿಧದಿ ॥ ನೋಯದೆಮೂತ್ರರುಧಿರಪ್ರಾಣರೂಪದಿಂ । ದೀಯಕಾರದ ಪಾಂಗನೈದಿ॥ ॥ಟೀ॥ ಕೂಡಿದಂಥಾನೀರಿನ, ಕೀಟಾಂಶ, ಮಧ್ಯಮಾಂಶ, ನಿರ್ಮಲಾಂಶಂಗಳೆ, ಶರೀರವನ್ನುಹೊಂದಿ, ಮೂರುವಿಧವಾಗಿ ಹುಟುತ್ತಾಲಿದ್ದಾವೆ, ಕೆಡದೆಮೂತ್ರರೂಪದಿಂದಲೂ, ರಕ್ತರೂಪದಿಂದಲು, ಪ್ರಾಣರೂಪವೆಂಬ ಈ ಆಕಾರದ ಪ್ರಕಾರವನ್ನು ಹೊಂದಿ॥ ... ॥೨॥

ತೇಜದ ಕೀಟಮಧ್ಯಮ ನಿರ್ಮಲಾಂಶವೆ, ರಾಜಿಸುತಿಹುದುತ್ರಿವಿಧದಿ ॥ ಈ ಜಗದೊಳಗಸ್ತಿಮಜ್ಜವಾಗ್ರೂಪದಿಂ, ಸೋಜಿಗವೆಸೆಯೆ ನೋಳ್ಪರಿಗೆ ॥ಟೀ॥ ಅಗ್ನಿಯು ಸಂಬಂಧವಾದ, ಕೀಟಾಂಶವೆಂಬ, ಮಧ್ಯಮಾಂಶವೆಂಬ, ನಿರ್ಮಲಾಂಶವೆಂಬ, ಹೆಸರುಗಳಿಂದ ಪ್ರಕಾಶಿಸುತ್ತಲಿರುತ್ತಾವೆ, ಮೂರುವಿಧವಾಗಿ, ಈ ಶರೀರವೆಂಬ ಜಗತ್ತಿನೊಳಗಿರುವ, ಅಸ್ತಿಯೆಂಬ, ಮಜ್ಜೆಯೆಂಬ, ವಾಕ್ಕೆಂಬ ಸ್ವರೂಪುಗಳಿಂದ ನೋಡುವಂಥಾವರಿಗೆ ಆಶ್ಚರ್ಯತೋರುವಹಾಗೆ ಯಿರುತ್ತಲಿವೆ. ॥೩॥

ಇದಿರಿಟ್ಟು ತೋರಿಕೆಡುವ ಮೂರು ಭೂತದೊಳುದಿಸಿದ ವಿವುಕಾಣಲಿವರಿಂ ॥ ದುದಿಸಿದ ಕೋಶಂಗಳೆಂತಹ ವಿದರಲ್ಲಿ, ಚದರದನಿತ್ಯಚೈತನ್ಯ ॥

॥ಟೀ॥ ಪ್ರತ್ಯಕ್ಷವಾಗಿ ಕಾಣಿಸಿಕೊಂಡು ಕೆಟ್ಟು ಹೋಗುತ್ತಲಿರುವಂಥಾ, ಪೃಥ್ವಿ, ಜಲ, ಅಗ್ನಿ, ಯಂಬ ಮೂರು ಮಹಾಭೂತಗಳಿಂದ, ಹುಟ್ಟಿದಂಥಾವುಗಳಂ ನೋಡಲು, ಇವು ಮೂರುಭೂತಗಳಿಂದ ಹುಟ್ಟಿದಂಥಾ ಪಂಚಕೋಶಂಗಳು, ಆತ್ಮಸ್ವರೂಪ ಹ್ಯಾಗೆ ಆದೀತು, ಆಗಲಾರವು, ಈ ಪಂಚಕೋಶಗಳಲ್ಲಿ ಖಂಡವಿಲ್ಲದೆ, ಕೋಶಗಳಲ್ಲಿಯೂ, ಕೋಶಗಳ ಸಂದಿಗಳಲ್ಲಿಯೂ, ಅಖಂಡವಾಗಿರುವ ಚೈತನ್ಯ ರೂಪವಾಗಿರುವಚಿತ್ತು. ... ... ॥೪॥

ಜಲದಿಂದ ನಾದದ ಸೂತದಂದದಿ ಮೇಘ, ಕುಲದಿಂದ ವಿಕೃತಿಯುಪಡೆದು ॥ ನಿಲದಗಗನದಂತೆ ನಿಂದಿರ್ದರಿದರಿಂದ, ಮಲಿನವಾಗದು ಪರವಸ್ತು ॥ಟೀ॥ ನೀರಿನಿಂದ ನೆನೆಯದ ಪಾದರಸದಹಾಗೆ, ಮೋಡಗಳ ಗುಂಪಿನಿಂದ ವಿಕಾರವನ್ನು ಹೊಂದಿಯಿರದೆ ಇರುವಂಥಾ ಆಕಾಶದಹಾಗೆ, ಈ ಪಂಚಕೋಶಗಳಲ್ಲಿ ನಿಂತಿದ್ದಾಗ್ಯು, ಈ ಪಂಚಕೋಶಗಳಿಂದ ಮಲಿನ ವಾಗದೆ ಇರುವಂಥಾದ್ದು, ಈ ಪರತತ್ವ ಸ್ವರೂಪವು ॥೫॥

ಬಾಳೆಯು ಪಟ್ಟೆಯತೆರದಿ ಕೋಶಂಗಳು, ಮೇಲೆ ಮೇಲೆಣಿಸೆ ಧಾರ್ಢ್ಯಗಳು ॥ ಈ ಲೀಲೆಯಿಂ ದೊಳಗೊಳಗೆ ಸೂಕ್ಷ್ಮಗಳುವಿ, ಶಾಲಕರ್ಮಕೆ ಸಾಧನಗಳು ॥ಟೀ॥ ಬಾಳೆಯು ಕಂಬದ ಪಟ್ಟೆಗಳಹಾಗೆ, ಈ ಅನಂದಮಯಾದಿ ಕೋಶಂಗಳು, ಒಂದರಮೇಲೆ ಒಂದು ದಪ್ಪವಾಗಿ ಇರು

ತ್ತಲಿವೆ, ಪೂರ್ವ ಹೇಳಿದ ಪ್ರಕಾರ ಹ್ಯಾಗೋಹಾಗೆ, ಒಳಗೆಹೋಗುತ್ತಾ ಹೋಗುತ್ತ ಸಂಣಸಾಗಿ ವಿಸ್ತಾರವಾದಂಥಾ ಕರ್ಮಗಳಿಗೆ ಸಹಕಾರಿಗೆಳಾಗಿ ಇರುತ್ತಲಿದ್ಧಾವೆ. ... ||೬||

ಅದರೊಳ ದಿಂಡಿನಂದದೊಳಾತ್ಮ ತನ್ನಲ್ಲಿ, ಪದರವಿಲ್ಲದೆ ತೋರುತಿಹನೂ || ಯಿದನು ವಿಂಗಡಿಸಿದಕಾಲದಿತಾಪಸ, ಹೃದಯನುಭವವೇದ್ಯನಹನೂ ||೭|| ಆ ಬಾಳೇಕಂಬದಲ್ಲಿ ಯಿರುವ ದಿಂಡಿನೋಪಾದಿಯಲ್ಲಿ, ಆತ್ಮನು ತನ್ನಲ್ಲಿ ಭೇದವಿಲ್ಲದೆ, ಅಖಂಡವಾಗಿ ತೋರುತ್ತಲಿದ್ಧಾನೆ. ಈ ಪಂಚಕೋಶಗಳನ್ನು ವಿವರ ಮಾಡಿದಂಥಾ ಸಮಯದಲ್ಲಿ, ಅನುಭವಿಗಳಾದಂಥಾ ಜ್ಞಾನಿಗಳ ಹೃದಯಾನುಭವಕ್ಕೆ, ತಿಳಿಯಲ್ಪಡುವದಕ್ಕೆ ಯೋಗ್ಯನಾಗಿರುತ್ತಾನೆ. ... ... ||೭||

ವ|| ಇಂತೆಂದಾತ್ಮನಿಗೆ ಪಂಚಕೋಶ ವಿಲಕ್ಷಣ ಪದ್ಧತಿಯಂ ಕೇಳ್ಕೆಗೊಳಿಸಿ, ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ ||

||೭|| ಈರೀತಿಯಾಗಿ ಸಚ್ಚಿದಾನಂದ ಸ್ವರೂಪಲಕ್ಷಣವುಳ್ಳ ಆತ್ಮನಿಗು, ಅನೃತಜಡದುಃಖಾತ್ಮ ಲಕ್ಷಣ ಸ್ವರೂಪವಾದ ಪಂಚಕೋಶಂಗಳಿಗು, ವಿಲಕ್ಷಣ ಮಾರ್ಗವನ್ನು ಕೇಳುವಹಾಗೆ ಮಾಡಿ, ಇನ್ನೊಂದು ವಿಧವಾಗಿ ಹೇಳುತ್ತಲಿದ್ಧಾನೆ, ಅದು ಹ್ಯಾಗೆ ಅಂದರೆ, ||೬||

ಗದ್ಯ|| ಇತಿ ಶ್ರೀವತ್ಸಮಸ್ತ ತತ್ವ ತಾತ್ವಿಕ
ವಿಚಾರ ಪಾರೀಣಶಾಲ್ಯ ಕ್ಷಿತಿಪಾಲ ಕೃಷ್ಣಪ್ರಭು
ವಿರಚಿತವಾದ ನಿಜದೀಪಿಕಾ ರತ್ನಗ್ರಂಥದಲ್ಲಿ
ಪಂಚಕೋಶ ವ್ಯತಿರೇಕಾ ಪದ್ಧತಿ
ಷಷ್ಠಮೋಧ್ಯಾಯ ಸಂಪೂರ್ಣಂ||

ಇತಿ ಪದ್ಧತಿ ೬ ಪಂಚಕೋಶ ವ್ಯತಿರೇಕಾ ಪೇಳಿದಲ್ಲಿಗೆ ಮಂಗಳಂ.

## ೭ ಅಧ್ಯಾರೋಪ ಅಪವಾದ ಪದ್ಧತಿ ಪ್ರಾರಂಭವು.

ಕಂದ॥ ಆವಸ್ತುವಲ್ಲದರ್ಥದೊ। ಳಾವಸ್ತುತೆಯ್ಯೆದಿವುರೆವ ಮತಿಯು ಧ್ಯಾಸಂ ॥ ಈವಿಧವಾದಧ್ಯಾಸಂ । ಭಾವಿಸೆನಾಲ್ಕೆನಿಪುದಿಲ್ಲಿ ಕೆಲಬರ ಪಕ್ಷಂ ॥ ಟೀ ॥ ಆತ್ಮವಸ್ತುವಲ್ಲದಂಥಾ, ಅನಾತ್ಮ ಪದಾರ್ಥದಲ್ಲಿ, ಆತ್ಮಸ್ವರೂಪವೇ ಯಿದುಯೆಂದು ಪ್ರಕಾಶಿಸುತ್ತಲಿರುವಂಥಾ ಬುದ್ಧಿಯೇ ಆರೋಪವು, ಈಪ್ರಕಾರವಾದ ಆರೋಪಣೆಯು, ಭಾವನೆ ಮಾಡಿದರೆ ಈ ಆತ್ಮ ಸ್ವರೂಪದಲ್ಲಿ ನಾಲ್ಕು ಪ್ರಕಾರ ವೆನಿಸಿಕೊಳ್ಳುಂಬುದು, ಕೆಲವುಮತಾಂತರ ಪಕ್ಷವು, ... ... ॥೧॥

ವ॥ ಅದಾವುದೆನೆ, ಮಿಥ್ಯಾಧ್ಯಾಸವೆಂದು, ಇತರಾಧ್ಯಾಸವೆಂದು, ಇತರೇತರಧ್ಯಾಸವೆಂದು, ಸತ್ಯಾಧ್ಯಾಸವೆಂದು, ಇವಕ್ಕೆ ವಿಷಯಂಗಳಾವಾವನೆ, ಕೃಶೋಹಂ, ಸ್ಥೂಲೋಹಂ, ಯಂಬಲ್ಲಿ ಶರೀರವು, ಅಹಂಶೃಣೋಮಿ, ಅಹಂಸ್ಪೃಶಾಮಿ, ಅಹಮದ್ಮಿ, ಅಹಂಜಿಘ್ರಾಮಿಯಂಬಲ್ಲಿ ಜ್ಞಾನೇಂದ್ರಿಯಂಗಳು, ಅಹಂಸಂಕಲ್ಪಯಾಮಿ, ಅಹಂನಿಶ್ಚಿನೋಮಿ, ಅಹಮವಧಾರಯಾಮಿ,ಅಹಮಭಿಮನ್ಯೆಯಂಬಲ್ಲಿ ಅಂತಃಕರಣಂಗಳು,ಅಹಂಜಾನಾಮಿಯಂಬಲ್ಲಿಚಿತ್ತು, ಈಚಿತ್ತಿನೊಡನೆ ಸಂಬಂಧವಾಪ್ರ ಪಂಚಾಂತವಾಗಿ, ವ್ಯಾವಹಾರಿಕದಿಂದಿರ್ಪುದಾಗಿ ವಿಚಾರಿಸಲು ಈ ಚಿತ್ತೆಯಹಂ ಪದಕ್ಕೆ ರ್ಥವಪ್ಪುದರಿಂ ಸತ್ಯಾಧ್ಯಾಸವಾಯ್ತು, ಇನ್ನು ಕೆಲಂಬರ ಪಕ್ಷದಲ್ಲಿ ಮೂರುತೆರನಾಗಿರ್ಪುದು ಅದೆಂತೆನೆ, ನಿರುಪಾಧಿಕಧ್ಯಾಸವೆಂದು, ತದ್ಧರ್ಮತಾಧ್ಯಾಸವೆಂದು, ಸಂಬಂಧವಾತ್ರಾಧ್ಯಾಸವೆಂದು, ಇವಕ್ಕೆ ದೃಷ್ಟಾಂತಂಗಳಾವಾವೆನೆ, ರಜ್ಜುಸರ್ಪವು, ಜಲಪ್ರತಿಬಿಂಬವು, ಆತ್ಮ ಕುಟುಂಬವು, ಇನ್ನು ಕೆಲಂಬರ ಪಕ್ಷದಲ್ಲಿ, ಗೌಣ, ಮಿಥ್ಯ, ಮುಖ್ಯಂಗಳೆಂಬುವು ಪದಂಗಳಿಂದ ಧ್ಯಾಸಂತ್ರಿ ಪ್ರಕಾರವಾಗಿರ್ಪುದು, ಅದೆಂತೆನೆ, ದೇವದತ್ತನೆ ಸಿಂಹಯಂಬಲ್ಲಿ, ದೇವದತ್ತನಿಷ್ಠಾ ಪರಾಕ್ರಮವಮಂ ಕುರಿತು ಸಿಂಹಾರೂಪಂಬಂದುದು, ವನುಷ್ಯನೆನಾನೆಂಬಲ್ಲಿ, ಸುಪ್ತಿ, ಮೂರ್ಛಾ, ಮರಣಂ

ಗಳಲ್ಲಿ, ತನ್ನ ಶರೀರಂ ಬಿದ್ದಿರ್ದುದಾವುದೊಂದಂ ತಿಳಿಯದೆಯೆಂದು, ತಾ ನೆ ಮಾಡುತ್ತಿರ್ದು, ತಾನೆ ಮನುಷ್ಯನೆಂಬಲ್ಲಿ ವಿಚಾರಬಾಧಿತಮಿಥ್ಯೆ ಯೆಂದು, ಪೂರ್ವಾಚಾರ್ಯರು ಲಕ್ಷಣಮಂ ಹೇಳಿದರಾಗಿ, ವ್ಯವಹಾರಕಾ ಲದಿ ತೋರುತ್ತಿರ್ಪುದರಿಂ ಮಿಥ್ಯಾರೋಪಂ ಬಂದುದು, ಶಿವೋಹಂಯೆಂ ಬಲ್ಲಿ ನಿರುಪಾಧಿಕ ಸೋಪಾಧಿಕ ಚೈತನ್ಯಂಗಳಿಗೈಕ್ಯಂ ಘಟಿಸದಿರ್ದೊ ಡಂ, ಉಪಾಧಿತ್ಯಾಗದಿಂ ಬುದ್ಧಿಯಲ್ಲಿ ಉಪಾಧಿನಾಶದಿಂದ ವಸ್ತುಗಳಲ್ಲಿ ಭೇ ದಂ ತೋರದಾಗಿ ಮುಖ್ಯಾರೋಪಂಬಂದುದು ‖ಟೀ‖ ಅದು ಯಾವ ದು ಅಂದರೆ, ಅನ್ಯತಾರೋಪಣೆಯೆಂದು, ಇತರಾರೋಪಣೆಯೆಂದು, ಇತ ರಿತರಾರೋಪಣೆಯೆಂದು, ಯತಾರ್ಥಾರೋಪಣೆಯೆಂದು, ಈ ಅಧ್ಯಾ ಸಂಗಳಿಗೆ ಗೋಚರಂಗಳು ಯಾವುದಾವುಬಂದರೆ, ನಾನು ಸಣ್ಣನಾಗಿ ಯಿ ದ್ದೇನೆ, ನಾನು ದಪ್ಪನಾಗಿ ಯಿದ್ದೇನೆ ಯೆಂದು ಹೇಳುವಲ್ಲಿ ಸ್ಥೂಲ ಶರೀ ರವು, ನಾನು ಕೇಳುತ್ತೇನೆ, ನಾನು ಮುಟ್ಟಿ ನೋಡುತ್ತೇನೆ, ನಾನು ಜ ಗಜ್ಜನ್ಯಪದಾರ್ಥಗಳನ್ನು ನೋಡುತ್ತಾ ಯಿದ್ದೇನೆ, ನಾನು ಉಣ್ಣತಕ್ಕ ಪದಾರ್ಥಂಗಳೆಲ್ಲವನ್ನು ಉಣ್ಣುತ್ತಾ ಯಿದ್ದೇನೆ, ನಾನು ವಾಸನೆಯುಳ್ಳ ಪದಾರ್ಥಗಳ ಸುಗಂಧ ದುರ್ಗಂಧವಾಸನೆಗಳ ತೆಗೆದುಕೊಳ್ಳುತ್ತಾ ಯಿ ದ್ದೇನೆ, ಯೆಂದೆನ್ನುವಲ್ಲಿ ಸ್ಥೂಲದೇಹದಲ್ಲಿ ಇರುವ ಜ್ಞಾನೇಂದ್ರಿಯಂಗಳು, ನಾನು ಸಂಕಲ್ಪಮಾಡುತ್ತೇನೆ, ನಾನು ನಿಶ್ಚಯಮಾಡುತ್ತೇನೆ, ನಾನು ಹೀಗೆ ಧರಿಸಿ ಇದ್ದೇನೆ, ನಾನು ಹೀಗೆ ಅಭಿಮಾನಿಸಿಕೊಂಡಿದ್ದೇನೆ, ಈ ಪ್ರಕಾರವಾಗಿ ಹೇಳುತ್ತಲಿರುವದರಿಂದ, ಲಿಂಗದೇಹದಲ್ಲಿ ಇರುವ ಅಂತರಿಂ ದ್ರಿಯಗಳಾದ, ಮನೋಬುದ್ಧಿ ಚಿತ್ತ ಹಾಂಕಾರಗಳು, ನಾನು ಯಲಾ ಬಲ್ಲೆನು ಯಂಬದಾಗಿ ಹೇಳುವಲ್ಲಿ, ಕೇವಲಚಿತ್ತು, ಈ ಚಿತ್ಸ್ವರೂಪ ದೊಡನೆ ಕೂಡಿಕೊಂಡು, ಹಾಂಕಾರವು ಜಗದಂತವಾಗಿ ವ್ಯಾವಹಾರಿ ಕ ಜೀವರೂಪದಿಂ ವ್ಯವಹರಿಸುತ್ತಲಿಥೆ ಯಾದಕಾರಣ, ತಿಳಿಯಲು ಈ ಚಿತ್ತ ಅಹಂ ಯೆನ್ನುವ ಪದಕ್ಕೆ ಅರ್ಥವಾದ್ದರಿಂದ, ಯತಾರ್ಥವಾದ ಆ ರೋಪಣವೆನ್ನಿಸಿಕೊಳ್ಳುವದು, ಇನ್ನು ಕೆಲವು ಮತಾಂತರಗಳಲ್ಲಿ ತ್ರಿವಿಧ ಪ್ರಕಾರವಾಗಿ ಯಿರುವದು, ಅದು ಹ್ಯಾಗೆ ಅಂದರೆ, ಉಪಾಧಿಯಿಲ್ಲದಂಥಾ ಆರೋಪಣವೆಂದು ವಸ್ತು ಅಂತರ ಧರ್ಮವಾದ ಗುಣಾರೋಪಣವೆಂದು,

ಸಂಬಂಧ ಜನರುಗಳೆಮಾತ್ರ ಅಧ್ಯಾರೋಪಣವೆಂದು, ಇವಕ್ಕೆ ಉಪಯೋಗವಾದ ದೃಷ್ಟಾಂತಂಗಳ್ಯಾವ ದ್ಯಾವದೆಂದರೆ, ಅಧಿಷ್ಟಾನ ಜ್ಞಾನವಿಲ್ಲದೆಹಗ್ಗದಲ್ಲಿ ತೋರಿದ ಭ್ರಾಂತಿ ಸರ್ಪವು ಜಲದಲ್ಲಿ ತೋರಿದ ಸೂರ್ಯ ಪ್ರತಿಬಿಂಬದಲ್ಲಿ ಆರೋಪಿಸಲ್ಪಟ್ಟ ಜಲಧರ್ಮವಾದ ಕಂಪ ಕಲುಷಗಳು, ತನ್ನ ಸಂಬಂಧವಾದ ಭಾರ್ಯ ಪುತ್ರಾದಿಗಳು, ಇನ್ನು ಕೆಲಂಬರ ಮತದಲ್ಲಿ, ಗುಣ ಸಂಬಂಧಾರ್ಥಕವಾದ ಉಪಪದ ಪೂರ್ವದಿಂದಲೂ, ಅಪದಾರ್ಥಕವಾದ ಉಪಪದ ಪೂರ್ವಕದಿಂದಲೂ, ಯತಾರ್ಥಕವಾದ ಉಪಪದ ಪೂರ್ವಕದಿಂದಲೂ, ಅಧ್ಯಾಸವು ಮೂರು ಪ್ರಕಾರವಾಗಿ ಇರುತ್ತಲಿಧೆ, ಅದು ಹ್ಯಾಗೆ ಅಂದರೆ, ಈ ಬ್ರಾಹ್ಮಣನು ಸಿಂಹಕ್ಕೆ ಸಮಾನವಾದಂಥಾವನುಯೆಂದು ಹೇಳುವಲ್ಲಿ, ಅವನಲ್ಲಿ ಇರುವ ವಿದ್ಯಾನಿಷ್ಟವಾದ ಪರಾಕ್ರಮವನ್ನು ಹಿಡಿದು ಸಿಹ್ಮಯೆಂಬುವಂಥಾ ಆರೋಪಣಬಂದುದು, ಸ್ವಾತಸಿದ್ಧ ಸಿಂಹವಲ್ಲ, ನಾನು ಮನುಷ್ಯನುಯೆಂದು ಹೇಳುವಲ್ಲಿ, ಸುಷುಪ್ತಿಯಲ್ಲಿಯು, ಮೂರ್ಛೆಯಲ್ಲಿಯು, ಮರಣವೆಂಬ ಇವರುಗಳಲ್ಲಿ, ತನ್ನ ಶರೀರಬಿದ್ದು ಇದ್ದದ್ದನ್ನು, ತಾನು ಆ ವೇಳ್ಯೆಯಲ್ಲಿ ಯಾವದನ್ನು ತಿಳಿಯದೆ ಯೆದ್ದು, ತಾನೆ ಹೇಳುತ್ತಲಿದ್ದು, ತಾನೆ ಮನುಷ್ಯನುಯೆಂಬ ಸಮಯದಲ್ಲಿ, ಯತಾರ್ಥ ಮನುಷ್ಯತ್ವ ಉಂಟಾದವನಾದರೆ ತಿಳಿಯದೆ ಇರುವದಕ್ಕೆ ಇಲ್ಲವಾಗಿ, ಚನ್ನಾಗಿ ವಿವರಿಸಿದ್ದರಿಂದ, ಮನುಷ್ಯತ್ವವು ಅಬದ್ಧವಾದ್ದರಿಂದ, ಪೂರ್ವಾಚಾರ್ಯರು ಮಿಥ್ಯಲಕ್ಷಣವನ್ನು ಹೇಳಿದಂಥಾವರಾಗಿ ಇದ್ದ ಕಾರಣ ಜಾಗ್ರತ್ಕಾಲದಲ್ಲಿ ತಿಳಿಯುತ್ತಲಿದ್ದದ್ದರಿಂದ, ಮಿಥ್ಯವಾದ ಆರೋಪಣಬಂದುದು, ಶಿವನೆ ನಾನುಯೆಂದು ಸ್ಥೂಲ ದೇಹೋಪಾದಿ, ಸೂಕ್ಷ್ಮದೇಹೋಪಾದಿಯಿಂದ ಕೂಡಿಕೊಂಡು ಹೇಳುತ್ತಲಿದ್ದದ್ದರಿಂದ, ನಿರುಪಾಧಿಕವಾದ ಪರೋಕ್ಷ ಬ್ರಹ್ಮ ಚೈತನ್ಯಕ್ಕು, ಸೋಪಾಧಿಕವಾದ ಪ್ರತ್ಯಗಾತ್ಮ ಸಾಕ್ಷಿ ಚೈತನ್ಯಕ್ಕು, ಐಕ್ಯವಾಗದೆ ಇದ್ದಾಗ್ಯು, ನಿರ್ಮಲವಾದ ವೈರಾಗ್ಯೋಪ ರತಿಗಳಿಂದ, ಸ್ಥೂಲಶರೀರ, ಸೂಕ್ಷ್ಮಶರೀರ, ಕಾರಣಶರೀರ, ಕಾರಣ ಶರೀರವಲ್ಲ, ನಾನು ಪ್ರತ್ಯಕ್ಷ ಬ್ರಹ್ಮಸ್ವರೂಪವೆಯೆಂದು ಬುದ್ಧಿಯಲ್ಲಿ ತಿಳಿದದ್ದರಿಂದ, ದೇಹತ್ರಯವೆಂಬ ಉಪಾಧಿ ನಾಶದಿಂದ, ಅಪರೋಕ್ಷ ಪ್ರತ್ಯಕ್ಷ ಸ್ವರೂಪಗಳೆರಡು ಒಂದಾದ್ದರಿಂದ,

ಭೇದವಿಲ್ಲವಾಗಿ ಮುಖ್ಯಾರೋಪವಾಯಿತು. ... ...

ಜಂಪೆ. ಧ್ರುವದಲ್ಲಿ ಚೋರರಜ್ಜುವಿನಲ್ಲಿ ಸರ್ಪಸಂಭವವೇಂ ವಿವೇಕದಿಂ ಬಂದುದೇನಿತ್ಯಂ ||ಟೀ|| ಮೋಟುಮರದಲ್ಲಿ ಇವಕಳ್ಳನು ಯೆಂಬ ಭ್ರಾಂತಿ ಜ್ಞಾನವನ್ನು, ಹಗ್ಗದಲ್ಲಿ ಹಾವುಯಂಬದಾಗಿ ಹುಟ್ಟಿದ ಭ್ರಾಂತಿ ಜ್ಞಾನವನ್ನು ವಿಚಾರಿಸಿ ತಿಳಿದು, ಯತಾರ್ಥವಾಗಿ ಬಂದದ್ದಾಯಿತೆ ಬರಲಿಲ್ಲ ... ||೧||

ಅಲ್ಲದಿರಲಾ ಯಾಪದಾರ್ಥಗಳಾಗೆವವೆ, ಇಲ್ಲದಿರುವಿವು ತೋರ್ಪವೇಯುವೆಂಬಿಟ್ಟು ||ಟೀ|| ಯತಾರ್ಥವಾದ ಮೋಟುಮರವು, ಹಗ್ಗವು ಇರದೆಹೋದರೆ, ಈ ಭ್ರಾಂತಿಜನ್ಯವಾದ ಇಲ್ಲದೆ ಇರುವ ಚೋರನು, ಇಲ್ಲದೆ ಇರುವ ಸರ್ಪನು ಆ ಮೋಟು ಮರ ಹಗ್ಗಗಳಂ ಬಿಟ್ಟು ಕಾಣುವದಕ್ಕೆ ಆದೀತೆ ಆಗುವದಿಲ್ಲ ... ||೨||

ಯೆಂತೆಂತು ವಸ್ತುವಿನೊಳಿಹುದೀ ಪ್ರಪಂಚದೃಷ್ಟಾಂತರಾಯುದ ಬಲದಿ ಸತ್ವದಿಂ ತಿಳಿಯೆ ||ಟೀ|| ಈಗ ಹೇಳಿದ ಅರ್ಥ ಹ್ಯಾಗೋಹಾಗೆ, ಆ ಬ್ರಹ್ಮವೆಂಬ ವಸ್ತುವಿನಲ್ಲಿ, ಅಧಿಷ್ಟಾನವಿಲ್ಲದ ಭ್ರಾಂತಿ ದೃಷ್ಟಿಯಿಂದ, ಈ ಪ್ರಪಂಚವಿಧೆ, ಉಪಮಾನ ಪದಾರ್ಥಗಳ ಗುರುತಿನ ಬಲದಿಂದಲೂ, ಸತ್ವಗುಣದೊಳ್ಕೂಡಿದ ಬುದ್ಧಿಯಿಂದಲೂ, ಚನ್ನಾಗಿ ವಿಚಾರಿಸಿ ನೋಡಿದರೆ ... ||೩||

ಇಲ್ಲದಿಹುದಿಲ್ಲವಾಗಿರುವ ದಿರುತಿಹುದು ಕಡೆ, ಯಲ್ಲವಿದ್ಯೆಯೆ ಬಾಧಿವಶವರ್ತಿನೀಯು ||ಟೀ|| ಇಲ್ಲದಂಥಾ ಈ ಜಗದ್ರೂಪ ವಸ್ತುವು ಇಲ್ಲದೆ ಹೋಗುವದ್ದರಿಂದ, ಸದ್ರೂಪ, ಚಿದ್ರೂಪ, ಆನಂದರೂಪವಾದ ಬ್ರಹ್ಮಸ್ವರೂಪವೆ ಇರುತ್ತಲಿಧೆ, ಕಡೆಯಲ್ಲಿ ಯೇನಾಯಿತ್ಯೆಯ್ಯ ಯಂದರೆ, ಆ ಅಜ್ಞಾನ ಒಂದೇ ಹೋಗುವದಾಯಿತು ... ||೪||

ಅನುಪಪತ್ತಿಯು ದಶೆಯೊಳಾಯುತ್ತು ವಿಕಾರವಾ, ತ್ಮನು ನಿರ್ವಿಕಲ್ಪನಾನೆನೆ ನಿರ್ಕೃತಾರ್ಥ ||ಟೀ|| ತಿಳಿಯದೆ ಇದ್ದ ದಶೆಯಿಂದ, ಆದಿಯಲ್ಲಿ ಇಲ್ಲದ, ಮಧ್ಯದಲ್ಲಿ ಇಲ್ಲದ, ಅಂತ್ಯದಲ್ಲಿಯೂ ಇಲ್ಲದೆ ಇರುವಂಥಾ

ಈ ಜಗದ್ರೂಪ ವಿಕಾರವು, ಭ್ರಾಂತಿ ದ್ರಿಷ್ಟಿಯಿಂದ ತೋರಿತು. ಭ್ರಾಂತಿಯಿಲ್ಲದೆ ಯಿದ್ದರೆ, ಆ ಆತ್ಮಸ್ವರೂಪವು ವಿಕಲ್ಪರಹಿತವಾಗಿ ಯಿರುವದು. ಅಂಥಾ ನಿರ್ವಿಕಲ್ಪವಾದ, ಸಚ್ಚಿದಾನಂದ ಸ್ವರೂಪವಾದ, ಆತ್ಮನೇನಾನೆಂಬದಾಗಿ ತಿಳಿದರೆ, ನೀನು ಕೃತಕೃತ್ಯನಾಗುತ್ತಲಿದ್ಧೀಯೋ ॥೫॥

ವ॥ ಇಂತೆಂದಧ್ಯಾರೋಪವಾದ ಪದ್ಧತಿಯಂ ಶೃತಂಗೊಳಿಸಿ, ಇನ್ನೊಂದು ಪ್ರಕಾರಮಂ ಪೇಳುತಿರ್ಪನದೆಂತೆನೆ॥ ಟೀ॥ ಈ ರೀತಿಯಾಗಿ ಅಧ್ಯಾರೋಪಣ ಮಾರ್ಗವನ್ನು, ಆರೋಪಣವಿಲ್ಲದೆ ಹೋಗುವ ಮಾರ್ಗವನ್ನು ಸಹ ತಿಳಿಯುವಹಾಗೆ ಹೇಳಿ, ಇನ್ನೊಂದು ರೀತಿಯಾಗಿ ಹೇಳುತ್ತಲಿದ್ಧಾನೆ, ಅದು ಹ್ಯಾಗೆ ಅಂದರೆ ॥

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕವಿ
ಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣಪ್ರಭು
ವಿರಚಿತವಾದ ನಿಜದೀಪಿಕಾ ರತ್ನಗ್ರಂಥ
ದಲ್ಲಿ ಅಧ್ಯಾರೋಪಾಪವಾದ ಪದ್ಧತಿ
ಸಪ್ತಮೋಧ್ಯಾಯ ಸಂಪೂರ್ಣಂ॥

(ಇತಿಪದ್ಧತಿ ೭ ಅಧ್ಯಾರೋಪಾಪವಾದ ಪೇಳಿದಿಲ್ಲಿಗೆ ಮಂಗಳಂ)

---

## ೮ ಜ್ಞಾನಸ್ವರೂಪಪದ್ಧತಿ ಪ್ರಾರಂಭವು.

---

ಸೀಸಪದ್ಯ॥ ಪಂಚಭೂತಂಗಳುಂ ಪ್ರಾಣ ಪಂಚಕಮುಂದ ಶೇಂದ್ರಿಯುಮುಂ ಮನಶ್ಚಿತ್ತಬುದ್ಧ್ಯಾ । ಹಾಂಕಾರಮುಂ ಸ್ಥೂಲಮಾದ ದೇಹಾದಿಕೂಡಲಧಿ ದೇವತೆಯೆ ವಿಷ್ಣುವಾಕ್ಷರಂಗು । ಣವೆಸಾತ್ವಿಕಂ ಲೋಚನಂ ಸ್ಥಾನಂ ಹೃತ್ಪದ್ಮದಳ ಗತಿಯಿಂದೆ ಕಾಂತಾದಿವಿಷಯ । ರಾಜಯು ವಿಶ್ವಂ ವಿರಾಟ್ಪುರುಷಂ ಗೂಡಿ ಭೋಗಿಪ್ಪುದೊಪ್ಪ ಗುಂಜಾಗರಣ ಮ

ನಿಸುವ । ನಾಮದಿ ಧಾಮವಮಾ ನೆಲೆಯೊಳಖಿಲ, ಕರಣಸಾಮಗ್ರಿ ಯಿಂದಿಪ್ಪುದರಿವ್ರುದಾವ್ರು, ದನಿಕಂಪಿತ ಪಲ್ಲವ ಪ್ರಾಣಿಹಿತೇಂದು, ಕಿರಣದಂತಿರ್ಪುದದನೆ ನೀನ್ ಸ್ಥಿರದಿವರಿಸು ॥೬॥ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶಂಗಳೆಂಬ, ಪಂಚಭೂತಂಗಳನ್ನು, ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನಂಗಳೆಂಬ ಪಂಚಪ್ರಾಣಂಗಳನ್ನು, ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣಂಗಳೆಂಬ ಜ್ಞಾನೇಂದ್ರಿಯ ಪಂಚಕವನ್ನು, ವಾಕ್ಕು, ಪಾಣಿ, ಪಾದ, ಗುಹ್ಯ, ಪಾಯುಗಳೆಂಬ, ಕರ್ಮೇಂದ್ರಿಯಪಂಚಕವನ್ನು, ಮನಸ್ಸು, ಬುದ್ಧಿ, ಚಿತ್ತ, ಹಾಂಕಾರಂಗಳೆಂಬ ನಾಲ್ಕು ಅಂತಃಕರಣಗಳನ್ನು, ಸ್ಥೂಲವಾದ ಶರೀರದ ಕೂಡ ಶೇರಿ ಇರಲು, ಅಧಿದೇವತೆವಿಷ್ಣು, ಅಕಾರವೇ ಬೀಜಾಕ್ಷರ, ಸಾತ್ವೀಕವೆ ಗುಣ, ನೇತ್ರಗಳೆಸ್ಥಾನ, ಹೃದಯದಲ್ಲಿ ಇರುವ ಕಮಲದ ಯಸಳುಗಳಲ್ಲಿ, ಸಂಚಾರ ಮಾಡುವ ಹೇತುವಿನಿಂದ, ಸ್ತ್ರೀ ಅನ್ನ ಪಾನಾದಿ ವಿಚಿತ್ರ ಭೋಗ ಸಮೂಹವನ್ನು, ಜಾಗ್ರದವಸ್ಥಾಕಾಲದಲ್ಲಿ ಪ್ರತಿಬಿಂಬವಾದ, ವಿಶ್ವನೆಂಬ ಹೆಸರುಳ್ಳ, ಸ್ಥೂಲ ದೇಹವ್ಯಷ್ಟ್ಯಭಿಮಾನಿಯಾದ ಜೀವನು, ಸ್ಥೂಲ ದೇಹ ಸಮಷ್ಟ್ಯಭಿಮಾನಿಯಾದ ಬಿಂಬ ಭೂತನಾದ ವಿರಾಟ್ ಸಂಜ್ಞಕನಾದ ಈಶ್ವರನು ಇಬ್ಬರುಕೂಡಿ ಅನುಭವಿಸುವದು ಒಪ್ಪಿಗುತ್ತಲಿರುತ್ತೆ, ಆಜಾಗ್ರ ದವಸ್ಥೆಯೆನಿಸುವ ಹೆಸರು ಉಳ್ಳಂಥಾ, ಸ್ಥೂಲವಾದ ನೇತ್ರಸ್ಥಾನದಲ್ಲಿ ಸಮಸ್ತ ಇಂದ್ರಿಯಗಳೆಂಬ ಸಾಧನೆಗಳಿಂದ, ಕೂಡಿದಂಥಾ ಅರಿವು ಯಂಥಾದ್ದು ಅಂದರೆ, ಘಾಳಿಯಿಂದ ಕದಲಿಸಲ್ಪಟ್ಟಂಥಾ, ಚಂದ್ರಕಿರಣಗಳೋಪಾದಿಯಲ್ಲಿ ಇರುತ್ತಲಿಧೆ, ಆ ಅರಿವನ್ನು ನೀನು ಚಂಚಲವಿಲ್ಲದೆ ಇರುವದುಯೆಂದು ಆ ಅರಿವೆ ನೀನೆಂದುಭಾವಿಸು.

## ಉತ್ಪಲ ಮಾಲಿಕಾ ವೃತ್ತ.

ಭೂತಗಳೈದು ಚಿತ್ತಮತಿಗಳ್ಪೊರಗಾಗಿರೆ ಮಿಕ್ಕತತ್ವಸಂ, ಘಾತದಿ ಸೂಕ್ಷ್ಮದೇಹದೊಳು ಕಾರ ರಜೋಗುಣ ಧಾತೃ ದೈವಕಂ, ಠಾತಿನಿವೇಶ ಹೃತ್ಕಮಲ ಕೇಸರ ಚಾರಗಳಿಂದೆ ವಾಸನಾ, ಜಾತ ಸಮಸ್ತಗೋಚರಮ ನುಣ್ಣುವದೇ ಮನವೆಂಬ ವೃತ್ತಿಯಿಂ ॥೬॥ ಪೃಥ್ವಿ, ಅ

ಪ್ಪು, ತೇಜಸ್ಸು, ವಾಯು, ಆಕಾಶಗಳೆಂಬ ಐದುಭೂತಂಗಳು, ಚಿತ್ತ, ಬುದ್ಧಿಗಳೆರಡು, ಈ ಯೇಳುತತ್ವಂಗಳನ್ನು ಬಿಟ್ಟು, ಮಿಕ್ಕಿರುವ ಹದಿನೇಳು ತತ್ವ ಸಮೂಹ ಉಳ್ಳಂಥಾ, ಲಿಂಗದೇಹದಲ್ಲಿ, ಉಕಾರವೆ ಬೀಜಾಕ್ಷರ, ರಜೋಗುಣ, ಚತುರ್ಮುಖ ಬ್ರಹ್ಮನು ಅಧಿದೇವತೆ, ಕಂಠಸ್ಥಾನದಲ್ಲಿ, ಹೃದಯ ಕಮಲದಲ್ಲಿ ಇರುವ ಕೇಸರಗಳಲ್ಲಿ ಜೀವನ ಸಂಚಾರಗಳಿಂದ, ಜಾಗ್ರದ್ವಾಸನೆಯಿಂದ ಹುಟ್ಟಿದ ಸಕಲವಾದ ಇಂದ್ರಿಯ ವಿಷಯಗಳಾದ ಸುಖ ದುಃಖಗಳನ್ನ ಮನೋವೃತ್ತಿಯಿಂದ ಅನುಭವಿಸುವದೆ॥ ...

ವ॥ ತೈಜಸಜೀವನು, ಸೂತ್ರಾತ್ಮಕ ಸಂಜ್ಞಕೇಶ್ವರನು, ಸ್ವಪ್ನಾವಸ್ಥೆಯೆನಿಪುಗದರಲ್ಲರಿವು, ತಟತರುಶಾಲಾಶಾವರುದ್ಧವಾತು ಲಕ್ಷಪಿತಸರೋವರೋದಕದಂತಿರ್ಪುದದರಿನೀನ್ ಸುಬುದ್ಧಿಯಿಂವರಿಸು॥

॥ಟೀ॥ ವ್ಯಷ್ಟಿಲಿಂಗಶರೀರಾಭಿ ಮಾನಿಯಾದ ತೈಜಸನೆಂಬ ಹೆಸರು ಉಳ್ಳಂಥಾಜೀವನು, ಸಮಷ್ಟಿಲಿಂಗ ಶರೀರಾಭಿಮಾನಿಯಾದ ಸೂತ್ರಾತ್ಮಕನೆಂಬ ಹೆಸರುಉಳ್ಳ ಈಶ್ವರನುಕೂಡಿ ಮನೋವೃತ್ತಿಯಿಂದ ಅನುಭವಿಸುವದೆ ಸ್ವಪ್ನಾವಸ್ಥೆಯೆನಿಸಿಕೊಂಬುವದು, ಆ ಸ್ವಪ್ನಾವಸ್ಥೆಯಲ್ಲಿ ಅರಿವುಹ್ಯಾಗೆ ಯಿರುವದೆಂದರೆ, ಭಾವಿತಡಿಯಲ್ಲಿಯಿರುವ ಮರದಿಂದ ಉದುರಿದ ಯೆಲೆಗಳಿಂದ ಮುಚ್ಚಿಕೊಂಡಿರುವಂಥಾ ಯೆಲೆಗಳನ್ನು, ಘಾಳಿಇಂದ ಒತ್ತರಿಸಲ್ಪಟ್ಟಂಥಾ ಭಾವಿಯಲ್ಲಿರುವ ನೀರಿನಂತೆ ಯಿರುತ್ತಲಿಧೆ, ಆ ಅರಿವನ್ನು ನೀನು ಒಳ್ಳೇಸೂಕ್ಷ್ಮವಾದ ಬುದ್ಧಿವೃತ್ತಿಯಿಂದ ಆ ಅರಿವನಾನೆಂದು ತಿಳಿದುಕೋ॥ ... ...

ಮೂಲ॥ ಯಕತಾಳ॥ ಪರೆದುಮೇಯುತ್ತಿರ್ದ ಮರಿಗಳನೆಲ್ಲವಾಗರಿಯೊಳಡಗಿಸಿದ ಚರಣಾಸ್ತ್ರಿಯಂತೆ॥ ॥ಟೀ॥ ವಿಸ್ತಾರವಾಗಿ ಓಡ್ಯಾಡಿ ಮೇಯುತ್ತಲಿರುವ ಮರಿಗಳನ್ನೆಲ್ಲ ತನ್ನರೆಕ್ಕೆಗಳಿಂದ ಸಕ್ಕಲ್ಲಿ ಅಡಗಿಸಿಕೊಂಡುಯಿರುವ ಹೆಣ್ಣುಕೋಳಿಯಹಾಗೆ॥ ... ॥೧೦॥

ತತ್ವಂಗಳೆಲ್ಲವ ತನೊಳ್ಳಕಿಂಬಿಡುವಮಾ। ಹತ್ವವುಳ್ಳ ಕಾರಣವಾದ ದೇಹದಲಿ॥ ॥ಟೀ॥ ಇಪ್ಪತ್ತುನಾಲ್ಕು ತತ್ವಂಗಳನ್ನು ತನ್ನಲ್ಲಿ ಅಡಗಿ

ಸಿಕೊಳ್ಳುವ ಸಾಮರ್ಥ್ಯವುಳ್ಳಂಥಾ, ಕಾರಣ ರೂಪವಾದ ಅಜ್ಞಾನ ದೇಹದಲ್ಲಿ॥ ... ... ... ॥೧॥

ತಮವೆಗುಣಂ ರುದ್ರನೆ ದೈವಮೌಪ್ಪವಂ। ಚಮವೆವರ್ಣಂ ಹೃತ್ತೆಸ್ಥಾನವಾಗಿರಲೂ॥ ॥ಟೀ॥ ತಮೋಗುಣ, ರುದ್ರನೆ ಅಧಿದೇವತೆ. ಪಕಾರಾದಿಯಾದ ಅಕ್ಷರಗಳಿಗೆ ಅಂತ್ಯವಾದಂಥಾ, ಮಕಾರವೆ ಬೀಜಾಕ್ಷರ. ಹೃದಯಕಮಲವೆ ಸ್ಥಾನವಾಗಿರುವದ್ದರಿಂದ ... ॥೩॥

ಗತಿಯಿಂ ಹೃತ್ಕಂಜಕರ್ನಿಕ ಮಧ್ಯದ ಪ್ರಾಜ್ಞನು, ಪತಿಯಾದಂತರ್ಯಾಮಿಯು ಪರಮಾನಂದವನು॥ ॥ಟೀ॥ ಆ ಕಮಲದ ಸಂಚಾರದಿಂದ, ಆ ಕಮಲ ಕರ್ನಿಕಾಮಧ್ಯದಲ್ಲಿಯಿರುವ ಪ್ರಾಜ್ಞನೆಂಬ ಹೆಸರುಳ್ಳ ಜೀವನು, ಸ್ವಾಮಿಯಾದ ಅಂತರ್ಯಾಮಿಯೆಂದು ಹೆಸರುಳ್ಳ ಈಶ್ವರನುಸಹ ಕೂಡಿಕೊಂಡು, ಉತ್ಕೃಷ್ಟವಾದ ಮಹಾನಂದವನ್ನು॥೪॥

ಉಣ್ಣುವದೆ ಮಾಯೆಯೋಪಾಧಿಯಿಂಸುಪ್ತಿ, ಯೆನ್ನುವರಾಪುರದಿರವರಿದವರು॥ ॥ಟೀ॥ ಅನುಭವಿಸುತ್ತಲಿರುವದೆ ಮಾಯಾವೃತ್ತಿಯಿಂದ ಸುಷುಪ್ತ್ಯಾವಸ್ಥೆಯೆಂದು ಅನ್ನುವರು, ಆಕಾರಣ ಶರೀರವೆಂಬ ಪಟ್ಟಣದ ಸ್ಥಿತಿಯನ್ನು ತಿಳಿದವರು॥ ... ... ॥೫॥

ಕಂ॥ ಇರುತಿಹುದಾಬಳಿಯಲಿಜ। ರ್ಝರದೋಷತ್ಯಕ್ತಚಂದ್ರಕಾಂತೋತ್ಪಲದೋ। ಬ್ಬೆರಸಿದಚಂದ್ರಿಕೆಯಂದದ। ಲರಿವದನನುಭೂತಿಮಾತ್ರದಿಂನೀನ್ ವರಿಸ್ಯೆ॥ ॥ಟೀ॥ ಯಿರುತ್ತಲಿಥೆ ಆಕಾರಣಶರೀರದಲ್ಲಿ ಪಟಲಾದಿದೋಷಂಗಳು। ಯಿಲ್ಲದಂಥಾಚಂದ್ರಕಾಂತಶಿಲೆಯಲ್ಲಿ। ಬಿದ್ದುಚಿರದುಕೊಂಡುಯಿರುವಂಥಾಬೆಳದಿಂಗಳಹಾಗೆ। ಯಿರುವಂಥಾಅರಿವುಯಾವದುಂಟೊ। ಆಅರಿವಾದಚಿತ್ಸ್ವರೂಪವನ್ನು । ನೀನುಅನುಭವಮಾತ್ರದಿಂದನಾನುಯೆಂದುತಿಳಿಯ್ಯೆ॥ ... ... ...

ಮೂ॥ ಜಂಪೆ॥ ಯಿರುತಿಹುದುಮಿಕ್ಕಜಾಗರಣದಲಿನಿದ್ರೆಯಲಿ। ಅರಿವಿಲ್ಲವೆಂಬುದೊತ್ತರಿಸುಷುಪ್ತಿಯಲಿ॥ ॥ಟೀ॥ ಅರಿವ್ರುಯೆಂಬುದು ಹೆಚ್ಚಾಗಿಯಿರುತ್ತೆ, ಜಾಗ್ರದವಸ್ಥೆಯಲ್ಲಿಯೂ, ಸ್ವಪ್ನಾವಸ್ಥೆಯಲ್ಲಿಯೂ. ಅಂಥಾಅರಿವುಗಾಢಸುಷುಪ್ತಿಯಲ್ಲಿಯಿಲ್ಲವೆಂತೆಂಬುವಹಾಗೆತೋರುತ್ತಲಿಥೆ॥೧॥

ಆದರೆಚ್ಚತ್ತು ನಾನಾನಂದದಿಂದಿರ್ದೆ, ಯೋದೆಶೆಯು ಕಾಣೆನೆಂಬೆಣಿ
ಕೆ ತತ್ಪರದಿ ||ಟೀ|| ಅರಿವು ಇಲ್ಲವೆಂಬುವ ಹಾಗೆ ತೋರಿದ್ದಾದರೆ,
ತನಗೆ ಜಾಗ್ರದವಸ್ಥೆ ಬಂದಮೇಲೆ, ನೀನೇನು ಮಾಡುತ್ತಲಿದ್ದೀ ಅಂದರೆ,
ನಾನು ಆನಂದವಾಗಿ ಇದ್ದೆನೇ ಹೊರ್ತು, ಇನ್ನೇನು ನಾನು ಕಾಣೆನೆಂ
ಬುವ ವಿವೇಕ ಹುಟ್ಟುತ್ತೆ, ಆ ಪಟ್ಟಣದಲ್ಲಿ ... ||೨||

ಇಲ್ಲದೇ ಪೋಗೆ ತನಗೆಲ್ಲಿ ಬಂದುದು ಕರಣ, ಇಲ್ಲದಿರಲಿಲ್ಲದ ವೊಲಲ್ಲಿ
ತೋರಿದುದು ||ಟೀ|| ಅರಿವಾದ ತಾನು ಇಲ್ಲದ ಹಾಗೆ ಹೋದರೆ,
ಈ ಸುಖವನ್ನು, ಅಜ್ಞಾನವನ್ನು, ತಿಳಿದು ಹೇಳುವಂಥಾವನಾರು; ಅಂತಃ
ಕರಣವಾದ ಹಾಂಕಾರವು ಇಲ್ಲದೆ ಹೋದ್ದರಿಂದ, ತಾನು ಇಲ್ಲದ ಹಾಗೆ
ಆಕಾರಣ ದೇಹದಲ್ಲಿ, ಅರಿವಿಲ್ಲದ ಹಾಗೆ ತೋರಿದಂಥಾದ್ದಾಯಿತಲ್ಲದೆ,
ಆ ಅರಿವು, ತಾಮಸಸಾಕ್ಷಿ ಸರ್ವಸ್ಯ ಸಾಕ್ಷಿಯುಂಬ ಶೃತ್ಯುಕ್ತಾರ್ಥಾ
ನುಭವದಿಂದ, ಅರಿವು ಉಂಟೆಂಬುದೆ ನಿಶ್ಚಯವು ||೩||

ಆದರಿಂದಖಿಲರನುಭವದ ಪದ್ಧತಿಯು ಸಿದ್ಧ, ವದು ನಿತ್ಯವದು ಸತ್ಯವ
ದು ಸುಖಾತ್ಮಕವೂ ||ಟೀ|| ಅದರಿಂದ ಸಮಸ್ತವಾದ ದೇಹಧಾರಿಗ
ಳ, ಅನುಭವ ಮಾರ್ಗಕ್ಕೆ ಯತಾರ್ಥವಾಗಿ ಇರುತ್ತಲಿರುವ, ಯಾವ ಅರಿ
ವು ಅದೇನಿತ್ಯಸ್ವರೂಪು, ಅದೇಸ್ವಸ್ವರೂಪು, ಅದೇ ಆನಂದ ಸ್ವರೂಪ
ವಾದದ್ದು ಯಾವದೋ|| ... ||೪||

ಆ ಅರಿವೆ ನಾನೆನುತ್ತವಧರಿಸಿ ನಿನಗಂತ, ರಾಯುವಿನ್ನಿರದು ವೈರಾ
ಜ್ಯಪತಿನೀನೆ ||ಟೀ|| ಹಿಂದೆ ಹೇಳಲ್ಪಟ್ಟಂಥಾ ಅರಿವಾದ ಚಿತ್ಸ್ವರೂ
ಪವೆ ನಾನುಯೆಂದು ತಿಳಿದರೆ, ನಿನಗೆ ಅವಿದ್ಯಾಕೃತವಾದಂಥಾ ಬಂಧ
ತ್ವ ಇನ್ನುಮೇಲೆ ಯಿರದು, ವಿರಾಟ್ ಸ್ವರೂಪವಾದ ಈಶ್ವರನು ನೀ
ನೆ ಆಗುತ್ತಲಿದ್ದೀಯೆ|| ... ||೫||

ವ|| ಇಂತೆಂದವಸ್ಥಾತ್ರಯ, ಮಚ್ಛಿನ್ನ ನಿಜಜ್ಞಾನ ಪದ್ಧತಿಯಂ ಶ್ರ
ವಿಪಂತೆ ಮಾಡಿ, ಇನ್ನೊಂದು ಪ್ರಕಾರಮಂ ಪೇಳುತ್ತಿರ್ದಪನದೆಂತೆನೆ.

||ಟೀ|| ಈ ಪ್ರಕಾರವಾಗಿ ಹೇಳಿ ಜಾಗ್ರ ಸ್ವಪ್ನ ಸುಷುಪ್ತಿಗಳೆಂಬ
ಮೂರವಸ್ಥೆಗಳಲ್ಲಿಯೂ ಕೂಡಿಕೊಂಡು ಇರುವ, ಯತಾರ್ಥವಾದ

ಜ್ಞಾನಸ್ವರೂಪ ಮಾರ್ಗವನ್ನು ಕೇಳುವ ಹಾಗೆ ಮಾಡಿ, ನಿನ್ನೊಂದು ರೀತಿಯನ್ನು ಹೇಳ್ತಾ ತಲಿದ್ದಾನೆ, ಅದು ಹ್ಯಾಗೆ ಅಂದರೆ॥

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವ ತಾತ್ವಿಕ
ವಿಚಾರ ಪಾರೀಣಶಾಲ್ಯ ಕ್ಷಿತಿಪಾಲ ಕೃಷ್ಣ
ಪ್ರಭು ವಿರಚಿತವಾದ ನಿಜದೀಪಿಕಾರ
ತ್ನ ಗ್ರಂಥದಲ್ಲಿ ಜ್ಞಾನಸ್ವರೂಪ ಪ
ದ್ಧತಿ ಅಷ್ಟಮೋಧ್ಯಾಯ
ಸಂಪೂರ್ಣಂ॥

(ಇತಿ ಪದ್ಧತಿ ೮ ಜ್ಞಾನಸ್ವರೂಪಮುಂ ಪೇಳಿದಲ್ಲಿಗೆ ಮಂಗಳಂ.)

---

## ೯ ಸದ್ರೂಪಲಕ್ಷಣ ಪದ್ಧತಿ ಪ್ರಾರಂಭವು.

---

ಮೂ॥ ಅಟತಾಳ॥ ಮಾಘ ಫಾಲ್ಗುಣಗಳಲಿ ಮೇಘದ ಮಾಲೆಯು ಲ್ಲಾ ಮೇಲೆಯು । ಮೇಘ ಸುರಭಿಯೊಳುಂಟಹುದು ರಸಮುಖ ಮೆನಿಸುತಾ ॥ಟೀ॥ ಮಾಘಮಾಸದಲ್ಲಿಯೂ, ಫಾಲ್ಗುಣ ಮಾಸದಲ್ಲಿಯೂ, ಮೋಡಗಳ ಗುಂಪಿಲ್ಲ, ಬಳಿಕ ಮಾಘ ಫಾಲ್ಗುಣ ಮಾಸಗಳು ಕಳೆದಮೇಲೆ ವ್ಯರ್ಥವಾಗದೆ ಇರುವಂಥಾ ವಸಂತರುತು ಕಾಲವಾದ ಚೈತ್ರವೈಶಾಖ ಮಾಸಗಳಲ್ಲಿ ಉದುಕನೇ ಮುಖದಲ್ಲಿ ಉಳ್ಳಂಥಾದ್ದು ಯೆನ್ನಿಸಿ ಕೊಳ್ಳುತ್ತಲಿರುತ್ತಲವೆ ... ॥೧॥

ಬಳಿಕ ಘರ್ಮ ಪ್ರಾವೃಡುದ್ಯದ್ವಾಸರಗಳಾಕಾಲದಿ । ಬಲವನೊಳಕೊಂಡಿಹುದು ಕತ್ತಲೆಬಳಗವಾಗಿ ॥ಟೀ॥ ವಸಂತರುತುವಾದಮೇಲೆ, ಗ್ರೀಷ್ಮರುತುಕಾಲದಲ್ಲಿಯೂ, ವರ್ಷರುತುಕಾಲದಲ್ಲಿಯೂ, ಸಾಮರ್ಥ್ಯವನ್ನು ಹೊಂದಿ ಇರುವಂಥಾವುಗಳಾಗಿ ಅಂದಕಾರಕ್ಕೆ ಬಂದವುಗಳಾಗಿ ಮೇಘಗಳು ಇರುತ್ತಲಿವೆ ... ॥೨॥

ಶಾರದೆದಲಿಶಿಥಿಲತ್ವಮಂತವಸಾರುವದುಹ್ಯೆಮನದಲಿ, ತೋರಲಾಗದ ತೋರಿರಲುಕಾಂತೋರದಿರಲೂ॥ ॥ಟೀ॥ ಶರಧೃತುಕಾಲವಾದ ಆ ಶ್ವೀಜಮಾಸ, ಕಾರ್ತೀಕಮಾಸಗಳ ಕಾಲಗಳಲ್ಲಿ ಜೀರ್ಣತ್ವವನ್ನುಹೊಂದಿ ಮೋಡಗಳು ಯಿರುತ್ತಲಿವೆ, ಹಿಮಂತರುತುವಾದ ಮಾರ್ಗಶಿರ, ಪುಷ್ಯ ಮಾಸಗಳ ಕಾಲಗಳಲ್ಲಿ ಹಿಮರೂಪಿನಿಂದ ತೋರದೆಯಿದ್ದಾಗ್ಯೂ, ಮೇಘರೂಪಿನಿಂದ ತೋರಿದಾಗ್ಯೂ, ಮೇಘಗಳು ಕಾಣಪಡದೆಯಿದ್ದಾಗ್ಯೂ ॥೩॥

ಆದುನಭದೊಳಿದರಿಂದಗಗನಕೆಪುದಿದುದೇನೂವ್ಯಕ್ತ । ಮಿದರಪಾಂಗಿಂದಾತ್ಮನಪ್ಪನು।ಸಥವಬೋಧಂ॥ ॥ಟೀ॥ ಈ ಮೋಡಗಳ ವಿಕಾರಗಳು ಆಕಾಶದಲ್ಲಿ ಆಗುತ್ತಿರಲಾಗಿ, ಆ ಆಕಾಶಕ್ಕೆ ಈ ಮೋಡಗಳಿಂದ ಆದಂಥಾ ಕಪ್ಪಿನಿಂದ ಮಲಿನವಾಯಿತುಯೆಂಬ, ಮಿಂಚಿನಿಂದ ಬಣ್ಣವೇರಿತುಯೆಂಬ, ಮಳೆಗಳಿಂದ ನೆನೆಯಿತುಯೆಂಬ, ವಿಕಾರಗಳು ಹ್ಯಾಗೆ ಹೊಂದಲಿಲ್ಲವೋ; ಈ ಆಕಾಶದೋಪಾದಿಯಲ್ಲಿ ಸದ್ರೂಪ ಚಿದ್ರೂಪವಾದ ಆತ್ಮನು, ಜಗದಾಕಾರವಾದ ಸ್ಥೂಲಶರೀರ, ಸೂಕ್ಷ್ಮಶರೀರ, ಕಾರಣಶರೀರಗಳಲ್ಲಿ, ಅಧಿಷ್ಠಾನಸ್ವರೂಪವಾಗಿ ಯಿದ್ದಾಗ್ಯೂ, ದೇಹತ್ರಯದ ಮಲಿನತ್ವನು, ಆತ್ಮಸ್ವರೂಪವಾದ ಅನುಭವಿಗೆಯಿಲ್ಲ॥ ... ॥೪॥

ಮಾಯೆಯಾತನಚೆರಸಲಾಗದುಮರಸಲಾಗದನಳಿಯದು, ಕಾಯಬಲಮಾನದುವಿಕೃತಿಸಂಸಾಧ್ಯಮಾಗಿ॥ ॥ಟೀ॥ ಕಾರ್ಯರೂಪವಾದ ಮಾಯೆಯು, ಆತ್ಮನವಡಗೂಡಿ ಬೆರಸುವದಕ್ಕು. ಆತ್ಮನನ್ನು ಆಚ್ಛಾದನೆ ಮಾಡುವದಕ್ಕು, ಆತ್ಮನ ಕೆಡಿಸುವದಕ್ಕು, ಶರೀರಬಲವನ್ನು ಹೊಂದುವದಿಲ್ಲ. ಯಾತಕ್ಕೆಂದರೆ, ತಾನು ಯಿಲ್ಲದೆ ಹೋಗುವದಕ್ಕೆ ಸ್ಥಾನವಾದ್ದರಿಂದ॥ ... ... ॥೫॥

ಗೀತಾ॥ ರೂಪುನಾಮಂಗಳೆರಡುಮಾಯಾಪದಾರ್ಥಗಳೆನಿಪವಾತಾವಿನಲ್ಲಿ, ಸಂಜನಿಪ ಸತ್ವಮಾವುದದು, ಬ್ರಹ್ಮತತ್ವಮೆಂದೇವಿವೇಕಜನರಿಗಂಗೀಕೃತಮಾದ ನಾನೆನೆ, ನೀನ್ಕೃತಾರ್ಥಂ॥ ॥ಟೀ॥ ಆಕಾರವು, ಹೆಸರು, ಯೆಂಬಯೆರಡೆ ಮಾಯಾಸಂಬಂಧವಾದ ವಸ್ತುಗಳೆನಿಸಿಕೊಳ್ಳುತ್ತಾಲಿದ್ಧಾವೆ. ಆರೂಪನಾಮಗಳ ಸ್ಥಲದಲ್ಲಿ ಯಿರುವಂಥಾ, ಸದ್ರೂಪಯಾವ

ದುಂಟೋ, ಆಸದ್ರೂಪವೆ ಬ್ರಹ್ಮದಯತಾರ್ಥಸ್ವರೂಪವೆಂದು, ಬ್ರಹ್ಮಾನುಭವಿಗಳಿಗೆ ಸಮ್ಮತವಾಗಿರುವದು, ಅಂಥಾಸತ್ಸ್ವರೂಪ ಬ್ರಹ್ಮವೆನಾನುಯೆಂದು, ನೀನುತಿಳಿದಂಥಾವನಾದರೆ, ಮಾಡಿಕೊಳ್ಳತಕ್ಕ ಪ್ರಯೋಜನವುಳ್ಳಂಥಾವನು॥ ... ... ॥೧॥

ವ॥ ಆ ಸದ್ವಸ್ತುವೆ ತ್ರಿವಿಧಪ್ರಕಾರವಾಗಿರ್ಪುದು. ವ್ಯಾವಹಾರಿಕಸತ್ತೆಯೆಂದು, ಪ್ರಾತಿಭಾಷಿಕಸತ್ತೆಯೆಂದು, ಪಾರಮಾರ್ಥಿಕಸತ್ತೆಯೆಂದು॥

ಟೀ॥ ಆ ಸತ್ಸ್ವರೂಪವಾದ ವಸ್ತುವೆ, ಮೂರುಪ್ರಕಾರವಾಗಿಇರುವದು. ವ್ಯಾವಹಾರಿಕ ನಾಮಕನಾದ ಜೀವನ ಜಾಗ್ರದವಸ್ಥಾ ಕಾಲದಲ್ಲಿ, ಯತಾರ್ಥಸ್ವರೂಪವಾಗಿರುವದಾಗಿಯೂ, ಪ್ರಾತಿಭಾಷಿಕನಾಮಕಜೀವನ ಸ್ವಪ್ನಾವಸ್ಥಾ ಕಾಲದಲ್ಲಿ ಯತಾರ್ಥಸ್ವರೂಪವಾಗಿರುವದಾಗಿಯೂ, ಪಾರಮಾರ್ಥಿಕ ನಾಮಕನಾದ ಜೀವನ ಸುಷುಪ್ತ್ಯಾವಸ್ಥಾ ಕಾಲದಲ್ಲಿ ಯತಾರ್ಥ ಸ್ವರೂಪವಾಗಿರುವದಾಗಿಯೂ॥ ... ॥೧॥

ಮೂ॥ ಜಂಪೆ॥ ಮೊದಲುಕಾಣಿಸಿದಂತೆಮೋಸವಿಲ್ಲದೆತಿರುಗಿ। ಯಿದಿರಿಟ್ಟುಕಾಣೆಕಾಂಬುದೆಪ್ರಾಥಮಿತವು॥ ॥ಟೀ॥ ಪೂರ್ವದಿನದಲ್ಲಿ ಯಾವಪದಾರ್ಥಗಳನೋಡಿದೆವೊ, ಆಪದಾರ್ಥಗಳು ಇದ್ದಂತೆ ಯಿದ್ದುಕೊಂಡು, ಮರಳಿ ಯರಡನೆದಿವಸದಲ್ಲಿ ನೋಡಿದರೆ ಪ್ರತ್ಯಕ್ಷವಾಗಿ ಕಾಣಿಸುವಂಥಾದ್ದು, ಯಾವದುಂಟೋ, ಅದುಮೊದಲಿನಲ್ಲಿಹೇಳಿದಂಥಾ ವ್ಯಾವಹಾರಿಕ ಜೀವನಸತ್ತಾಸ್ವರೂಪವು॥ ... ... ॥೧॥

ತೋರಿಯೊಂದೇಕಾಲದೊಳಗೆಮತ್ತದಕಾಣೆ। ತೋರಪಡದುದೆಲೋಕದೊಳಗೆ ದ್ವಿತೀಯಂ॥ ॥ಟೀ॥ ಒಂದೇಸ್ವಪ್ನಕಾಲದಲ್ಲಿ, ಪ್ರತ್ಯಕ್ಷವಾಗಿಕಂಡಂಥಾ ಒಂದು ಪದಾರ್ಥವು, ಪುನಃ, ಅದೇಸ್ವಪ್ನಕಾಲದಲ್ಲಿ ನೋಡಿದರೆ, ಆಪದಾರ್ಥಕಾಣದೆಹೋಗುವದು ಯಾವದುಂಟೋ, ಅದು ಪ್ರಪಂಚದಲ್ಲಿ ತೈಜಸನಾಮಕಜೀವನ ಸತ್ತಾಸ್ವರೂಪವು॥ ... ॥೨॥

ತೋರದಡಗದೆಸಕಲದೊಳುತೋರ್ಪುದೇಜ್ಞಾನ। ಚಾರುನೇತ್ರದೆಶಾಸ್ತ್ರಸಾದ್ಯಂತೃತೀಯಂ॥ ॥ಟೀ॥ ಒಂದುವೇಳೆ ತೋರುವದನ್ನು, ಒಂದುವೇಳೆತೋರದೆಯಿರುವದನ್ನು, ಈ ಯರಡುಯಿಲ್ಲದೆ ಸಮಸ್ತದಲ್ಲಿ

ಯೂ ಅರಿವಾಗಿಯಿರುವಜ್ಞಾನ. ಅದುಮನೋಹರವಾದ ವಿಚಾರವೆಂಬ
ನೇತ್ರದಿಂದ, ಶಾಸ್ತ್ರದಲ್ಲಿ ಸಾಧಿಸಿಕೊಳ್ಳತಕ್ಕ ಪಾರಮಾರ್ಥಿಕಜೀವನ,
ಮೂರನೆಯುಸತ್ತಾ ಸ್ವರೂಪವು॥ ... ... ॥೩॥

ವ॥ ಅನ್ಯತಕ್ಕೆ ತೆರವಸ್ತು ಸತ್ಪದಾರ್ಥವೆಂದುಸುರ್ದೆಯಾಗಿ, ಯಾ
ವದ್ರವ್ಯದಿಂದ ಕೋರಿತೋ, ಬಳಿಕಾದ್ರವ್ಯದ ವಿಲಯಾವಸ್ಥೆಯಲ್ಲಿ, ಈ
ಸತ್ಪದಾರ್ಥವೆಲ್ಲಿರ್ದುದು, ಹಾಗಾದರೆ ಕೇಳು, ಪೃಥ್ವಿಯೊಂದರಲ್ಲಿ ಕಾ
ಠಿಣ್ಯಂ ಪಿಂಗಲಾಗಿ ಜಲವೊಂದೇ ತೋರ್ಪುದು, ಜಲವೊಂದರಲ್ಲಿ ದ್ರ
ವತ್ವಂ ಕಡೆಸಿಡಿಯಲಾಗಿ ಯಗ್ನಿಯೊಂದೇ ತೋರ್ಪುದು, ಅಗ್ನಿಯೊಂದ
ರಲ್ಲಿ ರೂಪಂ ಪೊರಗಾಗಲಾಗಿ ವಾಯುವೊಂದೇ ತೋರ್ಪುದು, ವಾ
ಯುವೊಂದರಲ್ಲಿ ಚಲನಂ ತಪ್ಪಲಾಗಿ ಗಗನೇವೊಂದೇ ತೋರ್ಪುದು,
ಗಗನವೊಂದರಲ್ಲಿ ಶಬ್ದಂ ವಿಲಯಂ ಪೊಂದಲಾಗಿ ಗುಣತ್ರಯಂಗಳೆ ನಿ
ಲ್ಲುವವು, ಗುಣತ್ರಯಂಗಳಲ್ಲಿ ಯುತ್ಪತ್ತಿಸ್ಥಿತಿ, ಸಂಹಾರರೂಪ ಕೃತ್ಯಂ
ಗಳಿಲ್ಲದರಲ್ಲಿ ಮಾಯೆಯೊಂದೇ ನಿಲ್ಲುವದು, ಹಾನಿಗೂಢವಾದ, ಕಾರ್ಯಗ
ಮ್ಯವಾದ ಮಾಯಾಶಕ್ತಿಯಡಗಲಾಗಿ ಸದ್ರೂಪಕ್ಕಭಿವ್ಯಕ್ತಿ ಯಿರದೆಂ
ಬುದು, ನಿನ್ನಮತಿಯೊಳ್ಪೊಳೆದುದು. ಇದಕ್ಕೆ ನಿವೃತ್ತಿಯಾವುದೆನೆ;
ಭೂಮಿಯುದೆಯುಂಬಾಗ ಭೂನಿಷ್ಟಕಾಠಿಣ್ಯಂ ಪೋಗಲಾಗಿ, ತಾನದರೊ
ಡನೆ ಪೋಗದೆ, ಭೂಮ್ಯಾಂತಿಷ್ಟ ಜಲದಲ್ಲಿರ್ದುದು, ಜಲಮುದೇಯುಂ
ಬಾಗ ಜಲನಿಷ್ಟದ್ರವತ್ವಂ ಪೋಗಲಾಗಿ ತಾನದರೊಡನೆ ಪೋಗದೆ ಜ
ಲಾಂತಶಿಷ್ಟಗ್ನಿಯಲ್ಲಿರ್ದುದು, ಇದೇಪ್ರಕಾರದಿಂದಗ್ನಿ, ವಾಯು, ಗಗ
ನ, ಗುಣ, ಮಾಯಾಶಕ್ತಿಗಳಂ ನೋಡಲಾಗಿ, ತಾನವರೊಳ್ಪೋಗದೆ,
ತದಂತಃ ಸತ್ವಮಾಗಿರ್ಪುದರಿಂ, ಭೂಮ್ಯಸ್ತಿತ್ವ ಕಾಲದಲ್ಲಿ ಜಲದಲ್ಲಿ
ಯೂ ಇರ್ದುದಾಗಿ, ಭೂಮಿ ಜಲಂಗಳಿಗೆ ಗುಣ ಭೇದಂಗಳಿರ್ದರೂ,
ತಾನವರೊಳಿರ್ಪುದಕ್ಕೆ ಭೇದವಿಲ್ಲವಾಗಿ, ಭೂಜಲೋಭಯ ದ್ರವ್ಯಗ
ಳಾಶ್ರಯಿಸಿದ ತನ್ನ ನೈಮಿತ್ತಿಕದ್ವಿತ್ವದೊಳ್ಭೇದವಿಲ್ಲವಾಗಿ, ತಂತುವೇ
ಸ್ವರೂಪವಾದ ಪಟಕ್ಕೆ ತಂತುಮಾತ್ರ ನಿರೀಕ್ಷಣದಿಂ, ಪೃಥಕ್ತ್ವವಂ
ಪೇಳುವರೆಂಬ ದೋಷಮಿಲ್ಲಿ ವರ್ತಿಸದು. ಯಾಕೆನೆ, ಭೂಮ್ಯಾಂಶವಾ
ದ ರೇಣುಗಳಲ್ಲಿಯೂ, ಜಲಾಂಶವಾದ ತುಷಾರಗಳಲ್ಲಿಯೂ, ಸತ್ತಿಗೆ ಪೃ

ಥಕ್ತ್ವಂ ಘಟಿಸದಾಗಿ, ಹಾಲು, ಹುಣಸೆಯ ಹಣ್ಣು ಮೊದಲಾದ ಹುಳಿಯ ಬೆರಕೆಯಿಂ ಮೊಸರಾದುದೆಂಬ ಪರಿಣಾಮ ದೋಷವಿಲ್ಲಿ ವರ್ತಿಸದು, ಯಾಕೆನೆ,ಭೂಮಿಗೆದಾತತ್ವ ಮೊಳವಟ್ಟಾಗಲು,ಜಲಕ್ಕೆ ಫಲರಸಾದಿತ್ವಮೈದಿದಾಗಲು.ಚರ್ಮವದೆಮಾಂಸವದೆಯೆಂದು,ಕಬ್ಬಿನಹಾಲದೆ, ಮಾವಿನಹಂಣಿನ ರಸವದೆಯೆಂದು,ಸತ್ತಿಗೆ ವಿಕಾರಂಘಟಿಸದಾಗಿ,ಶಿಥಿಲಾಂದಕಾರ ಸಹಾಯದಿಂ ರಜ್ಜುವಿನಲ್ಲಿ ಸರ್ಪಂ ಪುಟ್ಟಿಸಿದ ವಿವರ್ತದೋಷ ವಿಲ್ಲಿ ವರ್ತಿಸದು. ಯಾಕೆನೆ, ಅಜ್ಞಾನ ಯೋಗದಿಂದಲಾದರು, ಭೂಮಿ ಜಲಂಗಳಲ್ಲಿರುವ ಸತ್ತಿಗೆ ಸದ್ಭಿನ್ನಂ ಒಂದು, ಇಲ್ಲದೆ ತೋರಿದ ಸರ್ಪನಿಂ ಭಯಂ ಬಂದಂತೆ, ಭೂಮಿಯಲ್ಲಿ ಚಲನಮಂ, ಜಲದಲ್ಲಿ ಕಾಠಿಣ್ಯಮಂ, ಪುಟ್ಟಸದಾಗಿ, ಸದ್ರೂಪವೇ ಸತತೋದಿತ, ನಿರ್ವಿಕಾರ, ನಿರ್ಭೇದ, ನಿರಾಂಶಮಾದ ಪರಬ್ರಹ್ಮ ಮೆಂದರಿವುದು. ಇದಕ್ಕೆ ಗುರುತೇನು, ಹೀಗೆ ವಿನಾಶಮಂ ಕುರಿತು ಕಳಿಯಲ್ಪಡುವ ಪ್ರಪಂಚ ಜಾಲದಲ್ಲಿ, ಕಳಿಯಲ್ಪಡದೆ ನಿಂತ ಚಿದಾನಂದವೆ ಈ ಸದ್ರೂಪಕ್ಕಭಿವ್ಯಕ್ತಿ ಯೆಂಬುದೇ ಶಾಸ್ತ್ರಾಚಾರ್ಯ ಸಮ್ಮತಮಾಗಿರ್ಪುದು ||ಟೀ|| ಅಬದ್ಧವಾದ ಪದಾರ್ಥಕ್ಕೆ ಯೆರಡನೆಯದಾದ ವಸ್ತುವನ್ನು ಯಥಾರ್ಥ ಸ್ವರೂಪವಾದ ಪದಾರ್ಥವೆಂದು ಹೇಳಿದಿರಾಗಿ, ಯಾವ ದೃಶ್ಯರೂಪೋಪಾದಿ ಪದಾರ್ಥದಿಂದ ಸದ್ರೂಪ ತೋರಿತೋ, ಆ ಮೇಲೆ ಆ ಪದಾರ್ಥಕ್ಕೆ ಹಾನಿಬಂದ ಕಾಲದಲ್ಲಿ, ನಿಮ್ಮ ಸತ್ಪದಾರ್ಥ ಯೆಲ್ಲಿಯಿಧೆ, ಹಾಗಾದರೆ ಕೇಳತಕ್ಕದ್ದು; ಪೃಥ್ವಿಯೆಂಬ ಮಹಾ ಭೂತದಲ್ಲಿ ಕಾಲಾಗ್ನಿಯಿಂದ ಕಾಠಿಣ್ಯತ್ವ ಧರ್ಮಕ್ಷಯವಾಗುತ್ತಲಿರಲಾಗಿ ಅಪ್ಪುಯೆಂಬ ಮಹಾಭೂತ ಒಂದೇ ತೋರುವದು, ಅಪ್ಪುಯೆಂಬ ಮಹಾ ಭೂತದಲ್ಲಿ ಶ್ರವಿಸುವ ಧರ್ಮ ಇಲ್ಲದಾಗತೇಜಸ್ಸೆಂಬ ಮಹಾ ಭೂತ ಒಂದೇ ತೋರುವದು, ತೇಜಸ್ಸೆಂಬ ಮಹಾಭೂತದಲ್ಲಿ ಪ್ರಕಾಶ ಧರ್ಮನಾಶವಾಗುತ್ತಲಿರಲಾಗಿ ವಾಯುವೆಂಬ ಮಹಾಭೂತ ಒಂದೇ ಕಾಣಿಸುತ್ತಲಿಧೆ, ಈ ವಾಯುವೆಂಬ ಮಹಾಭೂತದಲ್ಲಿ ಬೀಸುವ ಧರ್ಮ ನಿಲ್ಲಲಾಗಿ ಆಕಾಶವೆಂಬ ಮಹಾಭೂತ ಒಂದೇತೋರುತ್ತಯಿಧೆ, ಆಕಾಶವೆಂಬ ಮಹಾ ಭೂತದಲ್ಲಿ ಶಬ್ದಗುಣ ಧರ್ಮನಾಶನ ಹೊಂದಿ ಹೋಗುತ್ತಿರಲಾಗಿ ಸತ್ವ ರಜಸ್ತಮೋಗುಣಂಗಳೇ ನಿಲ್ಲುವಂ

ಥಾವುಗಳಾಗುತ್ತಲಿವೆ, ಆ ಮೂರು ಗುಣಂಗಳೊಳಗೆ, ಹುಟ್ಟಿಸುವ ರೂಪವು, ಇರುವ ರೂಪವು, ನಾಶಮಾಡುವ ರೂಪವೆಂಬ ಕೆಲಸಗಳು ಇಲ್ಲದಿರುವಲ್ಲಿ ಮಾಯಾಶಕ್ತಿ ಒಂದೇ ನಿಲ್ಲುವದು, ಅದು ಹೇಳುವದಕ್ಕೆ ಕೂಡದಂಥಾ, ಅದರ ಕಾರ್ಯದಿಂದ ತಿಳಿಯತಕ್ಕಂಥಾದ್ದಾದ ಮಾಯಾಶಕ್ತಿನಾಶವಾಗಲಾಗಿ ಯತಾರ್ಥ ಸ್ವರೂಪವಾದ ಸದ್ರೂಪ ಬ್ರಹ್ಮಕ್ಕೆ ಪ್ರಕಾಶತ್ವ ಇಲ್ಲವೆಂಬುದು ನಿನ್ನ ಬುದ್ಧಿಯಲ್ಲಿ ತೋರಿತು ಈ ಸಂಶಯವಿಲ್ಲದೆ ಹೋಗುವದಕ್ಕೆ ಉಪಾಯ ಯಾವದು ಅಂದರೆ, ಪೃಥ್ವಿ ಇದೆಯೆಂಬ ಸಮಯದಲ್ಲಿ, ಪೃಥ್ವಿಯಲ್ಲಿ ಇರುವ ಕಠಿಣತ್ವವು ಹೋಗಲಾಗಿ ಸದ್ರೂಪವಾದ ತಾನು ಕಠಿಣತ್ವದ ಕೂಡೆ ಹೋಗದೆ, ಭೂಮಿನಾಶ ಕಾಲದಲ್ಲಿ ಮಿಕ್ಕಿರುವಂಥಾ ಉದಕದಲ್ಲಿ ಇರುತ್ತಾಯಿದೆ, ಉದಕ ಇದೆಯೆಂಬುವ ಕಾಲದಲ್ಲಿ ಉದಕದಲ್ಲಿ ಇರುವಂಥಾ ಶ್ರವಿಸುವಣ ಹೋಗಲಾಗಿ ಸದ್ರೂಪವಾದ ತಾನು ಆ ದ್ರವತ್ವದ ಕೂಡ ಹೋಗದೆ, ಆ ಉದಕಾಂಶದಲ್ಲಿ ಇರುವ ತೇಜಸ್ಸು ತತ್ವದಲ್ಲಿ ಅರುತ್ತಲಿಧೆ, ಈ ರೀತಿಯಿಂದ ಪೃಥ್ವಿ ಜಲಂಗಳ ವ್ಯತಿರೇಕ ಕ್ರಮದಿಂದ ಹ್ಯಾಗೆ ತಿಳಿದೆವೊ ಆ ರೀತಿಯಾಗಿ ತೇಜಸ್ಸತತ್ವ, ವಾಯುತತ್ವ, ಗಗನತತ್ವ, ಗುಣತತ್ವ, ಮಾಯಾಶಕ್ತಿಗಳಂನು ವ್ಯತಿರೇಕಕ್ರಮದಿಂದ ತಿಳಿಯಲಾಗಿ, ಇವುಗಳ ಕೂಡ ತಾನುಹೋಗದೆ, ತೇಜೋ, ವಾಯು, ಗಗನ, ಗುಣ, ಮಾಯಾಶಕ್ತಿಗಳೆಂಬ ಇವರುಗಳಿಗೆ ಅಧಿಷ್ಠಾನವಾಗಿ ಒಳಗೆ ಬಲವಾಗಿ ಇರುವದ್ದರಿಂದ, ಭೂಮಿಯುದೆಯೆಂಬ ಕಾಲದಲ್ಲಿ ಉದಕದಲ್ಲಿಯೂ ಇರ್ದುದಾಗಿ, ಭೂಮಿಗು ಉದಕಕ್ಕು ಗುಣಗಳ ಭೇದವು ಇದ್ದಾಗ್ಯು ಅದರೊಳಗೆ ಇರುವ ಸದ್ರೂಪವಾದ ತನಗೆ ಯೆರಡೆಂಬುದು ಇಲ್ಲವಾಗಿ, ಭೂಮಿಯೆಂಬ, ಉದಕವೆಂಬ, ಯೆರಡುಪದಾರ್ಥಗಳನ್ನು ಹೊಂದಿದಂಥಾ, ಸದ್ರೂಪವಾದ ತನ್ನ ಭೂನಿಮಿತ್ತಕವಾದ, ಜಲನಿಮಿತ್ತಕವಾದ, ಯೆರಡರಲ್ಲಿಯೂ ಕೂಡ ಭಿನ್ನತ್ವಯಿಲ್ಲವಾಗಿ, ನೂಲುಯೆಳೆಗಳೆ ಆಕಾರವಾದ ಬಟ್ಟೆಗೆ ಯೆಳೆಮಾತ್ರನೋಡುವ ಕಾಲದಲ್ಲಿ, ತಂತುಗಳು ಬೇರೆಬೇರೆಯೆಂಬ ಉಪಕ್ರಮದೋಷ ಈ ಬ್ರಹ್ಮದಲ್ಲಿ ವರ್ತಿಸದು, ಯಾತಕ್ಕಂದರೆ, ಪೃಥ್ವಿ ಅಂಶವಾದ ದೂಳುಗಳಲ್ಲಿಯೂ, ಉದಕಾಂಶವಾದ ತುಂತುರಿಗಳಲ್ಲಿಯೂ, ಸಸ್ವರೂಪಕ್ಕೆ ಭಿನ್ನತ್ವ ಕೂ

ಡುವದಿಲ್ಲವಾಗಿ, ಕ್ಷೀರವೆ, ಹುಳಿಹಣ್ಣು ಮೊದಲಾದ ಹುಳಿಯನ್ನು ಕೂಡಿಸಿದ್ದರಿಂದ, ಮೊಸರಾದುದು ಯಂತೆಂಬ ಕಾಲಕೃತ ಪರಿಪಕ್ವದೋಷವು ಈ ಸಸ್ವರೂಪವಾದ ಪರಬ್ರಹ್ಮದಲ್ಲಿ ಇರದು ಯಾತಕ್ಕೆಂದರೆ, ಭೂರೂಪವಾದ ಅನ್ನಕ್ಕೆ ಶರೀರದಲ್ಲಿ ಧಾತುರೂಪತ್ವ ಸಿಕ್ಕಿದಾಗಲು, ಜಲಕ್ಕೆ ಹಣ್ಣಿನಲ್ಲಿ ಹುಳಿಯು, ಸೀಯ್ಯುಯೆಂಬುದೇ ಮೊದಲಾದ ರಸತ್ವ ಹೊಂದಿದ ಕಾಲದಲ್ಲಿಯೂ, ಚರ್ಮವುಯಿದ್ಧೆ, ಮಾಂಸವುಯಿದ್ಧೆಯೆಂದು, ಕಬ್ಬಿನ ಹಾಲುಯಿದ್ಧೆ, ಮಾವಿನ ಹಣ್ಣಿನಲ್ಲಿ ರಸವು ಇದೆಯೆಂದು॥

ಸದೇವಸೌಮ್ಯೇ ಇದಮಗ್ರಮಾಸೀತ್॥ ॥ಟೀ॥ ಯೆಂಬಶೃತ್ಯರ್ಥಾನುಸಾರವಾಗಿ ಯಿರುವ, ಅನಾದಿಯಾದ ಸದ್ರೂಪಬ್ರಹ್ಮಕ್ಕೆ ವಿಕಾರಕೊಡದಾಗಿ, ನಸುಗತ್ತಲೆ ಸಂಬಂಧದಿಂದ ಹಗ್ಗದಲ್ಲಿ ಹಾವನ್ನುಹುಟ್ಟಿಸಿದ ರೂಪಾಂತರದೋಷವು ಈ ಸದ್ರೂಪದಲ್ಲಿ ಪ್ರವರ್ತಿಸದು, ಯಾತಕ್ಕೆಂದರೆ, ಅಜ್ಞಾನದ ಸಂಬಂಧದಿಂದ ಆದಾಗ್ಯು, ಪೃಥ್ವಿ ಉದಕಂಗಳಲ್ಲಿಯೂ ಯಿರುವ ಸದ್ರೂಪಬ್ರಹ್ಮಕ್ಕೆ ಬೇರೊಂದುಅಸದ್ರೂಪತ್ವ ಪ್ರಾಪ್ತವಾಗಿ, ಕಲ್ಪಿತವಾಗಿತೋರಿದ ಹಾವಿನಿಂದ ಭೀತಿಪ್ರಾಪ್ತವಾದಂತೆ, ಭೂಮಿಯಲ್ಲಿ ಕಂಪನವು, ಉದಕದಲ್ಲಿ ಘಟ್ಟಿಯಾಗಿ ಯಿರೋಣವು, ಹುಟ್ಟಿಸಲಿಲ್ಲವಾದ್ದರಿಂದ, ಸದ್ರೂಪವೆ ಭೂತ ಭವಿಷ್ಯದ್ವರ್ತಮಾನ ಕಾಲತ್ರಯದಲ್ಲಿಯೂ, ಪ್ರಕಾಶಿಸುತ್ತಿರುವ ಮಾಯಾವಿಕಾರ ರಹಿತವಾದ ಅಖಂಡಸ್ವರೂಪವಾಗಿಯಿರುವ ಸತ್ಪದಾರ್ಥವೆ ಪರಬ್ರಹ್ಮವೆಂದು ತಿಳಿಯುವದು. ಯಿದಕ್ಕೆ ಕುರುಹುಯೇನೆಂದರೆ, ಈ ಪ್ರಕಾರವಾಗಿ ನಾಶವಾಗಿ ಹೋಗುವ ಪದಾರ್ಥಗಳನ್ನು ವುದ್ದೇಶ್ಯಮಾಡಿ, ನೇತಿನೇತಿಯೆಂಬ ವಾಕ್ಯಗಳಿಂದ ವಿಸರ್ಜಿಸಲ್ಪಟ್ಟು, ಜಗಸ್ಸಮೂಹದಲ್ಲಿ ತೆಗಿಯಲ್ಕೊಡದೆ ನಿಂದಿರುತ್ತಲಿರುವ, ಚಿದಾನಂದಂಗಳೆ ಈ ಸದ್ರೂಪಬ್ರಹ್ಮಕ್ಕೆ ಪ್ರಕಾಶವೆನ್ನುವದೆ, ಶಾಸ್ತ್ರಕ್ಕು, ಗುರುಗಳಿಗು, ಅಭಿಮತವಾಗಿಯಿರುವದು॥

ಕಂ॥ ನೀನೆರೆಮಾನಸನ್ನೃಪನೆನಿ । ಧಾನಿಸಿವಿಶ್ವಕ್ಕಧೇಯಧಿಷ್ಠಾನಪದಂ। ಯೇನದತೋರದನಲ್ಕೀ। ನೀನಾರೆಂಬುಕ್ತಿಯುದಕೆವಜ್ರಪ್ರಾಯಂ॥

॥ಟೀ॥ ಯೆಲೈ ಮನಃಪ್ರಭುವೇ, ನೀನುಚನ್ನಾಗಿನೋಡಿ ಸದ್ರೂಪಾ

ನುಭವ ಮಾಡಿಕೊಂಡು, ಈ ಪ್ರಪಂಚಕ್ಕೆ ಆದೇ ಆಧಾರಭೂತವಾದ ಸಾಧನವುವೆನ್ನುತ್ತ ತಿಳಿದುಕೋ, ಅಂಥಾವಸ್ತುಯಾಕೆ ತೋರಲಿಲ್ಲ ವೆಂದು ಸಂಶಯುಂಬಂದರೆ, ಆ ಸಂಶಯು ಪರಿಹಾರಕ್ಕೆ, ಈ ಪ್ರತ್ಯಕ್ಷ ವಾಗಿರುವ ನೀನು, ಯಾರುಯೆಂದು ವಿಚಾರಿಸುವಮಾತು, ಆ ಸಂಶಯು ವೆಂಬ ಪರ್ವತಕ್ಕೆ ವಜ್ರಾಯುಧ ಸಮಾನವಾದಂಥಾದ್ದು ||

ವ|| ಇಂತೆಂದು ಸದ್ರೂಪ ಲಕ್ಷಣಪದ್ಧತಿಯುಂ ಶ್ರವಣಂಗೈಸಿ ಇನ್ನೊಂದುಪ್ರಕಾರಮಂ ಪೇಳುತ್ತಿರ್ದಪನದೆಂತೆನೆ|| ||ಟೀ|| ಈರೀತಿಯಾಗಿ ಸತ್ಸ್ವರೂಪಮಾರ್ಗವನ್ನು ಕೇಳುವಹಾಗೆಮಾಡಿ, ಇನ್ನೊಂದು ವಿಧವಾಗಿಹೇಳುತ್ತಲಿದ್ದಾನೆ, ಅದು ಹ್ಯಾಗೆಅಂದರೆ|| ...

ಗದ್ಯ|| ಇತಿ ಶ್ರೀಮತ್ಸಮಸ್ತ ತತ್ವ ತಾತ್ವಿಕ
ವಿಚಾರ ಪಾರೀಣಶಾಲ್ಯ ಕ್ಷಿತಿಪಾಲ ಕೃಷ್ಣ
ಪ್ರಭುವಿರಚಿತಮಾದ ನಿಜದೀಪಿಕಾ ರತ್ನ
ಗ್ರಂಥದೋಳ್ ಸದ್ರೂಪಲಕ್ಷಣ
ಪದ್ಧತಿ ಸಂಪೂರ್ಣಂ||

ಇತಿ ಪದ್ಧತಿ ೯ ಸದ್ರೂಪಲಕ್ಷಣ ಪೇಳಿದಲ್ಲಿಗೆ ಮಂಗಳಂ.



## ೧೦ ಚಿದ್ರೂಪ ವಿಚಾರ ಪದ್ಧತಿ ಪ್ರಾರಂಭವು.



ಮೂ|| ಜಂಪೆ|| ಯಾವವಸ್ತುವಿಗೆಮಾಯಾವರಣವಿಲ್ಲ ಜಗ|ಮಾವವಸ್ತುವಿನಿಂದಭಾವಿತಮೆನಿಸಿತು|| ||ಟೀ|| ಯಾವ ಚಿದ್ರೂಪಕ್ಕೆ ಮಾಯೆಯುಸುತ್ತು ಬಳಸಿಲ್ಲವೊ, ಈ ಜಗತ್ತು ಯಾವ ಚಿದ್ರೂಪದಿಂದ ತಿಳಿಯುವ್ಯಕ್ತವಾದ್ದು ಯೆನಿಸಿತೊ|| ... ... ||೧||

ಅದರ ಚೈತನ್ಯದಿಂದಲ್ಲದೇ ವ್ಯವಹಾರ್ಯ ಪದವ್ಯೈದಖಿಳಪ್ರಪಂಚಮಾಕ್ರಾಂತಂ॥ ॥ಟೀ॥ ಆ ಚೈತನ್ಯದ ಬಲದಿಂದಲೆ ಸಮಸ್ತವಾದ ಗಟಪಟಾದಿಪ್ರಪಂಚವು ಶ್ರಮವಿಲ್ಲದೆ ವ್ಯವಹರಿಸುವದಕ್ಕೆ ಸ್ಥಾನವಾಗಲಾರದು॥ ... ... ॥೨॥

ಅದರಬಲವದರಭೋಗದಬೀಡದರವೊಗಂ।ಯಿದಮಿಗರ್ಥವತಾಳಿದಿ॥ ನಿಖಿಲದೃಶ್ಯಂ॥ ॥ಟೀ॥ ಆ ಚಿತ್ತಿನ ಬಲವುಂಟಾದಂಥಾದ್ದನ್ನು, (ಆತ್ಮನಸ್ತುಕಾಮಾಯಸರ್ವಂಪ್ರಿಯಂಭವತಿ) ಯೆಂಬ ಶೃತ್ಯರ್ಥಾನುಸಾರವಾಗಿ ಆ ಚಿತ್ತಿನ ಆನಂದಕ್ಕೆ ಸ್ಥಾನವಾಗಿಯಿರುವಂಥಾದ್ದನ್ನು, ಆ ಚಿತ್ತೆಮುಂದಾಗಿಉಳ್ಳಂಥಾದ್ದನ್ನು, ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುವದಕ್ಕೆ ಹೊಂದಿದಂಥಾ ಈ ಸಕಲವಾದ ದೃಶ್ಯಪದಾರ್ಥಗಳು॥ ... ॥೩॥

ನೀನಯಿಪಿಂಡಪಿಜ್ಞಾನಮಲ್ಲಿರುವವ್ಯೆ।ಶ್ವಾನರನದರಮಹಾಭಾನವಂಪಿಡಿದು॥ ॥ಟೀ॥ ಯೆಲೈಮನೋನೃಪನೆ, ರಜೋಗುಣವಿಶಿಷ್ಟವಾದ ನೀನೇಕಬ್ಬಿಣದಮುದ್ದೆ ನಿನ್ನಲ್ಲಿ ವ್ಯಾಪಿಸಿಯಿರುವ ಜ್ಞಾನವೇಅಗ್ನಿ, ಆಜ್ಞಾನವೆಂಬ ಅಗ್ನಿಯು ಅಧಿಕಪ್ರಕಾಶವನ್ನು ಆಧಾರಮಾಡಿಕೊಂಡು॥ ॥೪॥

ಇಂದ್ರಿಯಶರೀರಂಗಳೆಡೆಯಾಡುತಿಹವದೇ। ಇಂದ್ರಂಸದಾತ್ಮಕಮಹೀನತಾದ್ರವ್ಯಂ॥ ॥ಟೀ॥ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು ಸ್ಥೂಲಸೂಕ್ಷ್ಮಶರೀರಗಳು, ಸುಳಿದಾಡುತ್ತ ಯಿರುವವಾದ್ದರಿಂದ, ಆ ವಿಜ್ಞಾನವೆ ಅಧಿಪತಿಯು. ಅದು ಸತ್ಪದಾರ್ಥ ಶರೀರಉಳ್ಳಂಥಾದ್ದು. ಕೆಡದೆಯಿರುವಂಥಾ ವಸ್ತುವು॥ ... ... ... ॥೫॥

ಕಂ॥ ಕ್ಷೀರಸ್ಥನಮನಾನಹೆ। ನೀರಸಮೇಕ್ಷ್ಯತಪ್ರದೇಶವೆಂದರಿದದನೇ। ಸಾರಲ್ನಾನೆಂದೀಸಂ। ಸಾರಾಂಬುಧಿನಿನಗೆಗೋಷ್ಪದಾಂಬೋಮಾತ್ರಂ॥ ॥ಟೀ॥ ಕ್ಷೀರದೃಷ್ಟಾಂತಮಾದ ಸತ್ಪದಾರ್ಥಸ್ಥಾನವೆ ನಾನಾಗುತ್ತಲಿದ್ದೇನೆ, ಆ ಕ್ಷೀರದಲ್ಲಿಯಿರುವ ಸವಿಯೆ ದೃಷ್ಟಾಂತಭೂತವಾಗಿ ವ್ಯಾಪಿಸಿಕೊಂಡುಯಿರುವ ತುಪ್ಪದೋಪಾದಿಯಲ್ಲಿ ತೋರುವಜ್ಞಾನ ಯಾವದುಂಟೋ, ಆ ಜ್ಞಾನವೆ ನಾನೆಂದುಹೇಳಲು ಈ ಜನನಮರಣ ಪ್ರವಾಹರೂಪವಾದ ಸಮುದ್ರಕ್ಕೆ, ಜ್ಞಾನಸ್ವರೂಪವಾದ ನಿನಗೆ ಗೋವಿನ ಹೆಜ್ಜೆಯಲ್ಲಿಯಿರುವ ನೀರಿನ ಪ್ರಮಾಣವಾಗುತ್ತಲಿಧೆ॥ ...

ವ॥ ಇಂತೆಂದು ಸಂಕ್ಷೇಪದಿಂ ಪೇಳಲಿಷ್ಟರಿಂದಲೆ ವಿಸ್ತರಂಬಾರದೆನ್ನಲು॥ ॥ಟೀ॥ ಹೀಗೆಂದು ವಿಸ್ತಾರವಾಗಿಹೇಳದೆ ಸಂಕೇತವಾಗಿ ಇಷ್ಟೇಹೇಳಿದ್ದರಿಂದ, ತಿಳಿಯುವದಕ್ಕೆ ಆಗದುಯನ್ನಲು, ದೃಷ್ಟಾಂತ ಪೂರ್ವಕವಾಗಿ ಚನ್ನಾಗಿ ವಿವರಿಸುತ್ತಲಿದ್ದಾನೆ॥

ಮೂ॥ ತ್ರಿಪುಡೆ॥ ಸ್ವೇತವಾಗಿಹಶುದ್ಧಪಟವೇ । ಧೌತವೆನಿಪುದು ಗಂಜೆಯಿಂತಾ, ನೋತುಕೂಡಿರೆಘಟಿತವೆನಲ್ ಖ್ಯಾತವಹುದು॥

॥ಟೀ॥ ಸ್ವತಸಿದ್ಧವಾಗಿ ಬೆಳ್ಳಗೆಯಿರುವ ವಗೆದಬಟ್ಟೆಯೆ ಧೌತವೆನಿಸಿಕೊಳ್ಳುತ್ತಯಿಧೆ. ಆ ಬಟ್ಟೆಯು ಗಂಜೆಯಿಂದ ಯೆಡೆಯಿಲ್ಲದೆ ಕೂಡಿಯಿದ್ದಾಗ ಘಟಿತಯೆನ್ನಿಸಿಕೊಂಡು ಪ್ರಖ್ಯಾತವಾಗುತ್ತೆ ... ॥೧॥

ಅದ್ದಿಕೆಯನಾಂತಾಗರಂಜಿತವಪ್ಪುದಾಯಾಚಿತ್ರಪೂರ್ತಿಯ। ಪೊದ್ದಿದಾಗದು ಲಾಂಛಿತತ್ವದಿಪೊಸತೆನಿಪುದು॥ ॥ಟೀ॥ ನೀಲಿ ಈ ಮೊದಲಾದ ಆಕೃತಿಗಳಿಂದ ರಂಜಿತವುಯೆನಿಸಿಕೊಳ್ಳುತ್ತಲಿಧೆ, ಯಾವಯಾವ ಸ್ಥಾನದಲ್ಲಿ ಯಾವಯಾವ ವರ್ಣ ತುಂಬಿದ್ದರಿಂದ, ಚಿತ್ರಸಮಾಪ್ತಿ ಹೊಂದಿದಾಗ ಆ ಪಟವು ಲಾಂಛಿತತ್ವದಿಂದ ಹೊಸದುಯೆನಿಸಿಕೊಳ್ಳುತ್ತಲಿಧೆ॥ ॥೨॥

ಹ್ಯಾಗೆಚಿತ್ರಪಟಸ್ಥಿತಿಯುಚನ್ನಾಗಿಯಿರುವುದೊನಾಲ್ಕುತೆರದಿಂ। ಹಾಗೆ ಶುದ್ಧವೆನಿಸುವಚಿತ್ತುಂಭೂಗಗನಕೆ॥ ॥ಟೀ॥ ಹ್ಯಾಗೆದೃಷ್ಟಾಂತವಾದ ಚಿತ್ರಪಟವುನಾಲ್ಕು ಅವಸ್ಥೆಗಳಿಂದ ಚನ್ನಾಗಿಯಿರುತ್ತಲಿಧೆಯೊ, ಆಚಿತ್ರಪಟದಹಾಗಿಯೇ ಸ್ವತಸ್ಸಿದ್ಧವೆನಿಸುವಂಥಾ ಚಿತ್ಸ್ವರೂಪವೆ, ಭೂವ್ಯಾಕಾಶಗಳಿಗೆ॥ ... ... ॥೩॥

ಬೀಜವಾಗಿಹಮಾಯೆಯೊಳುಪ್ರತಿಬಿಂಬಿಸಿರ್ದವ್ಯಾಕೃತವೆತಾಂ। ರಾಜಿಪುದುಕಾರಣದಿಲಿಂಗದಿರವ್ಯೆಮಾದಾ॥ ॥ಟೀ॥ ಹೇತುವಾಗಿ ಯಿರುವಂಥಾ ಮಾಯೆಯಲ್ಲಿ ಪ್ರತಿಬಿಂಬಿಸಿರುವ ಅವ್ಯಾಕೃತನಾಮಧೇಯವುಳ್ಳಂಥಾ, ಈಶ್ವರನು ಯಾವನೋ ಅವನೆ ಕಾರಣಶರೀರಗಳ ಸಮಷ್ಟಿಯಲ್ಲಿಯು, ಲಿಂಗಶರೀರಗಳ ಸಮಷ್ಟಿಯಲ್ಲಿಯು, ಪ್ರಕಾಶಿಸುತ್ತಲಿರುವದು, ಮನೋಹರವಾದ॥ ... ... ॥೪॥

ಸ್ಥೂಲದಲಿ ಸಮಷ್ಟಿಯಸೆಯಲು ತೋರುವೀಶಾನತ್ರಯಮುಮನು ।

ಕೂಲವಿಾಬುದ್ಧಿಯಲಿಬಿಂಬಿಸಿಕೂಡಿತೋರ್ಪ॥ ॥ಟೀ॥ ಸ್ಥೂಲಶರೀರಗಳು ಸಮಷ್ಟಿಯಲ್ಲಿಯು ಪ್ರಕಾಶಿಸುತ್ತಿರಲಾಗಿ, ತೋರುವಂಥಾ ಈಶ್ವರತ್ರಯವು ಅನುಕೂಲಿಸಿ ಬುದ್ಧಿಯೆಂಬ ಅಂತಃಕರಣದಲ್ಲಿ ಪ್ರತಿಬಿಂಬಿಸಿ ಹೊಂದಿಕೊಂಡು ಕಾಣುವಂಥಾ॥ ... ॥೫॥

ಜೀವರತ್ರಯವನಾವರಿಸಿದ ಚೇತನಂ।ಜೀವತ್ರಯವನ್ರಮನು।ಭಾವದಿಂದುಪಮೇಯ ಮಪ್ಪವು ಪಟದಬಗೆಗೆ ॥ಟೀ॥ ಜೀವತ್ರಯವೆಂದು ಆರೋಪಿಸಲ್ಪಟ್ಟ ಚಿಚ್ಚೈತನ್ಯವನ್ನು, ಜೀವತ್ರಯವನ್ನು, ಅನುಭವದಿಂದ ಉಪಮಾನವಾದ ಚಿತ್ರಪಟದ ರೀತಿಗೆ, ಉಪಮೇಯವಾಗುತ್ತಲಿದೆ ॥೬॥

ಚೇತನಚೇತನದಚಿತ್ರಮಾತ್ರಗಳಿಗೇಭೇದವಿಲ್ಲದೆ।ಧೌತಪಟದೊಡನೆಂತುಭೇದಂತಗುಲದಿಹುದೊ ॥ಟೀ॥ ಚೇತನಗಳಾದ ಮನುಷ್ಯಾದಿ ಪ್ರಾಣಿಗಳಿಗು, ಅಚೇತನಗಳಾದ ವೃಕ್ಷಬಳ್ಳಿ, ಕಲ್ಲುಗಳು ಮೊದಲಾದ ಚಿತ್ರಸಮೂಹಕ್ಕೆ ಭಿನ್ನತ್ವವಿಲ್ಲದೆ, ಚಿತ್ರಕ್ಕೆ ಆಧಾರ ಭೂತವಾದ ವಗೆದಬಟ್ಟೆಯಕೂಡೆ ಹ್ಯಾಗೆ ಭೇದ ಹೊಂದದೆಯಿಹೆಯೊ॥ ॥೭॥

ಜೀವಕ್ಕೃತ್ಯವಿಕಾರ ಮಿರಲಿ ಕಲಾವಿಶೇಷದಿ ತಮ್ಮೊಳಗೆನೆರೆ। ತಾವಮಲ ಚಿತ್ತಿನೊಳಿವಕೆ ಭೇದಂ ಘಟಿಪುದೆ ॥ಟೀ॥ ಜೀವರುಗಳ ಕಾರ್ಯವಿಕಾರಗಳು ಯೆಲ್ಲಿಯಾದರು ಹೋಗಲಿ, ಪ್ರಕಾಶಾಧಿಕ್ಯದಿಂದ ಆಜೀವರುಗಳೊಳಗೆ, ಅಧಿಷ್ಠಾನ ಸ್ವರೂಪವಾದ ಪರಿಪೂರ್ಣ ನಿರ್ಮಲಜ್ಞಾನ ಸ್ವರೂಪವಾದ ಚಿತ್ತಿನಲ್ಲಿ, ಚೇತನಾ ಚೇತನ ರೂಪವಾದ ಜಗತ್ಸರ್ವವು ಚಿದ್ರೂಪವೇ ಹೊರ್ತಾಗಿ ಬೇರೆ ಪದಾರ್ಥವೆಂಬುವ ಭೇದವು ಕೂಡೀತೆ, ಕೂಡದು ... ॥೮॥

ಯೆನುತ ಜೀವನೆ ಪರಮನೆಂತೆಂಬನುಭವಂ ಸ್ಥಿರವಾಗೆ ದುರುಪಾ।ಧಿನಿರಸನದಿಂ ನೀನೆ ಚಿನ್ಮಯ ದಿವ್ಯರೂಪಂ ॥ಟೀ॥ ಹೀಗೆ ಅಂದದ್ದರಿಂದೆ (ಶೃತಿ—ಸರ್ವಂಖಲ್ವಿದಂಬ್ರಹ್ಮ) ಯೆಂಬ ಶೃತ್ಯಾರ್ಥಾನುಸಾರದಿಂದ, ಚರಾಚರ ಸರ್ವ ಜೀವರುಗಳನ್ನು ನಿಷ್ಕಳ ಬ್ರಹ್ಮಸ್ವರೂಪ, ಯೆಂಬುವ ಅನುಭವವೂಯೆಲ್ಲಾ ಕಾಲಗಳಲ್ಲಿಯೂ ಚಲನೆಯಿಲ್ಲದೆ ಇದ್ದರೆ, ದುಷ್ಟವಾದ ಅಧ್ಯಾಸೋಪಾಧಿ ನಿನಗೆ ಇಲ್ಲದೆ ಇರುವದ್ದರಿಂದ, ಯೆಲ್ಲೈ

ಮನೋ ರಾಜನೆ, ನೀನೇ ಚಿತ್ತೆಂದು ಪ್ರಾಚೂರ್ಯವಾದ ಮನೋಹರ ಸ್ವರೂಪವು॥ ... ॥೯॥

ವ॥ ಸದಖಂಡವಸ್ತುವಿಂಗಿಂತೇಕಾಯಿತು, ಉಪಾಧಿಯಿಂತಾಯಿತು. ಉಪಾಧಿಯುಂದರೇನು, ತನ್ನ ಸಮೀಪಸ್ಥವಾದ ವಸ್ತುವೆಂತಾಂಗ್ರಹಿಸಿ ತನ್ನ ಗುಣಮುದರೊಳ್ಬೆರದಂತೆ, ರೂಪಾಂತರದಿಂದವಸ್ತುವಂ ತೋರಿಸುವದೇ ಉಪಾಧಿ ಯೆನಿಸುವದು. ಅದೆಷ್ಟು ಪ್ರಕಾರವಾಗಿರ್ಪುದು! ಅವಚ್ಛಿಂನೋಪಾಧಿಯೆಂದು,ಪ್ರತಿಬಿಂಬೋಪಾಧಿಯೆಂದು,ಅಧ್ಯಾಸೋಪಾಧಿಯೆಂದು,ತ್ರಿವಿಧಪ್ರಕಾರವಾಗಿರ್ಪುದು.ಹಾಗಂದರೇನು!ಪ್ರತ್ಯಗಾತ್ಮನಿಗೆಸುಷುಪ್ತಿರೂಪಅವಿದ್ಯೆಯೇಅವಚ್ಛಿನ್ನೋಪಾಧಿಯು.ಬುದ್ಧಿಯೆಲ್ಲಾಪ್ರತ್ಯಗಾತ್ಮನಪ್ರತಿಫಲನವೇಪ್ರತಿಬಿಂಬೋಪಾಧಿಯು. ಬುದಿ ಗತಸುಖದುಃಖಂಗಳನ್ನ ಆಪ್ರತ್ಯಗಾತ್ಮನೊಳಗೆಆರೋಪಿಸುವದೇ,ಅದ್ಯಾಸೋಪಾಧಿಯು.ನಿರ್ವಿಕಲ್ಪವಾದ ವಸ್ತುವು ಇಲ್ಲೆಂತು ತೋರಿತು ॥ಟೀ॥ ಕಾಲಪರಿಚ್ಛೇದ, ದೇಶಪರಿಚ್ಛೇದ, ವಸ್ತುಪರಿಚ್ಛೇದ ರಹಿತವಾದ ಸದ್ರೂಪವಾಗಿ ಸಂದಿಲ್ಲದೆ ಇರುವಂಥಾ ಪದಾರ್ಥ ಹೀಗೆ ಯಾತಕ್ಕೆ ಆಯಿತು ಯೆಂಬದಾಗಿ ಆಕ್ಷೇಪಿಸಿ ಕೇಳಲಾಗಿ, ಶ್ರೀಗುರುವು ಸಮಾಧಾನ ಹೇಳುತ್ತಲಿದ್ದಾನೆ. ಪ್ರಕೃತಿಯಂಬ ಉಪಾಧಿಯಿಂದ ಆಯಿತು. ನಿರುಪಾಧಿಕವಾದ ವಸ್ತುವಿಗೆ ಉಪಾಧಿಯುಂಬುದು ಯೇನುಯೆಂದು ಕೇಳಲಾಗಿ, ತನ್ನ ಸಮೀಪದಲ್ಲಿರುವ ಪದಾರ್ಥವನ್ನು ತಾನು ತೆಗದುಕೊಂಡು, ತನ್ನ ಸ್ವರೂಪವಂ ಆ ವಸ್ತುವಿನಲ್ಲಿ ಕೂಡಿದ ಹಾಗೆ ಮಾಡಿ, ಪೂರ್ವ ಹೇಳಿದಂಥಾ ವಸ್ತುವನ್ನು, ರಕ್ತಂ ಸ್ಪಟಿಕ ಯೆಂಬುವಹಾಗೆ, ಇನ್ನೊಂದು ರೂಪದಿಂದ ಆ ವಸ್ತುವನ್ನ ತೋರಿಸುವಂಥಾದ್ದೇ ಉಪಾಧಯೆನಿಸುವದು. ಆ ಉಪಾಧಿಯೆಂಬುವದು ಯೆಷ್ಟು ಬಗೆಯಾಗಿ ಇರುತ್ತಲಿದೆ! ಹಾಗಲ್ಲದೆ ಇರುವ ಉಪಾಧಿಯೆಂದು, ಪ್ರತಿಬಿಂಬೋಪಾಧಿಯೆಂದು, ಆರೋಪಿತೋಪಾಧಿಯೆಂದು ಮೂರು ಪ್ರಕಾರವಾಗಿ ಇರುತ್ತಲಿದೆ. ಹಾಗಂದರೇನು ! ಪ್ರತ್ಯಗಾತ್ಮನೆನಿಪ ಸಾಕ್ಷಿರೂಪವಾದ ಪರಬ್ರಹ್ಮನಿಗೆ,'ಗಾಢನಿದ್ರೆಯುಂಬ ಅಜ್ಞಾನವೇ ಅವಚ್ಛಿಂನೋಪಾಧಿ ಯೆನಿಸುವದು. ಬುದ್ಧಿಯುಂಬ ಅಂತಃಕರಣದಲ್ಲಿ ಪೂರ್ವೋಕ್ತವಾದ ಪ್ರತ್ಯಗಾತ್ಮ ಬ್ರಹ್ಮನ ಹೊಳೆಯುವಣವೇ ಪ್ರತಿಬಿಂ

ಚೋಪಾಧಿಯೆನಿಸುವದು. ಬುದ್ಧಿಯೆಂಬ ಅಂತಃಕರಣವನ್ನ ಹೊಂದಿ ದಂಥಾ ಸುಖವನ್ನು ದುಃಖವನ್ನು ಆ ಪ್ರತ್ಯಗಾತ್ಮನೆಂಬ ಸಾಕ್ಷಿ ಸ್ವ ರೂಪದಲ್ಲಿ ಹೊರಿಸುವದೇ, ಅಧ್ಯಾಸೋಪಾಧಿ ಯೆನಿಸುವದು. ಅವಯ ವರಹಿತವಾದ ಸದ್ವಸ್ತುವು ಬುದ್ಧಿಯೆಂಬ ಅಂತಃಕರಣದಲ್ಲಿ ಯೆಂತು ತೋರಿತು. ... ...

ಸಾಂಗತ್ಯ॥ ಪರಿಶುದ್ಧ ವಸ್ತುವಿನೊಳಗಲ್ಲದಿನ್ನೊಂದ । ರರಿವು ತೋರದು ಪ್ರತಿಫಲಿಸಿ ॥ ಧರಣಿ ಪ್ರಮುಖತತ್ವಂಗಳೊಳಂತಃಕರಣವೆ । ಪರಿಕಿಸೆ ಪರಿಶುದ್ಧವಸ್ತು ॥ಟೀ॥ ಕನ್ನಡಿಯೋಪಾಧಿಯಲ್ಲಿ ಕಲ್ಮ ಷವಿಲ್ಲದೆ ನಿರ್ಮಲವಾದ ಪದಾರ್ಥದಲ್ಲಲ್ಲದೆ, ಮಲಿನವಾದ ಪದಾರ್ಥದ ಲ್ಲಿ ಪ್ರತಿಬಿಂಬ ರೂಪದ ಅರೋಣ ತೋರುವದಿಲ್ಲ. ತಮೋಗುಣ ಅಧಿ ಕವಾದ ಪೃಥ್ವಿಯೇ ಮೊದಲಾದ ತತ್ವಂಗಳೊಳಗೆ ಹುಡುಕಿದರೆ ಅಂ ಕರಣವಾದ ಬುದ್ಧಿಯೇ ನಿರ್ಮಲವಾದ ವಸ್ತುವು॥ ॥೧॥

ಹಾಲಲ್ಲಿ ಮೊಸರಲ್ಲಿ ಬೆಣ್ಣೆಯಲ್ಲೀಕ್ಷಿಸೆ । ಮೇಲೆ ತೋರದು ಪ್ರತಿಬಿಂ ಬ ॥ ಜ್ವಾಲೆಯಿಂ ಕರಗಿದ ತುಪ್ಪದೊಳ್ತೋರ್ಪಂತೆ । ಸಾಲದ ಧಾತು ಸಪ್ತಕದಿ ॥ಟೀ॥ ಹಾಲಿನಲ್ಲಿಯು, ಮೊಸರಿನಲ್ಲಿಯು, ಬೆಣ್ಣೆಯಲ್ಲಿಯು, ನೋಡಿದರೆ ಮೇಲಾಗಿ ಪ್ರತಿಬಿಂಬ ಕಾಣುವದಿಲ್ಲ. ಅಗ್ನಿಯ ಜ್ವಾಲೆ ಯಿಂದ ಕರಗಿಸಿದಂಥಾ ತುಪ್ಪದಲ್ಲಿ ಪ್ರತಿಬಿಂಬ ತೋರಿದ ಹಾಗೆ. ಸಾಲ ದೆ ಇರುವಂಥಾ ರಸಧಾತು, ರಕ್ತಧಾತು, ಮಾಂಸಧಾತು, ಮೇದೋಧಾ ತು, ಅಸ್ಥಿಧಾತು, ಮಜ್ಜಧಾತು, ಶುಕ್ಲಧಾತುಯೆಂಬ, ಯೇಳು ಧಾತುಗ ಳಲ್ಲಿಯೂ॥ ... ॥೨॥

ಚಿತ್ತಿಗಭಿವ್ಯಕ್ತಿ ಘಟಿಸದು ವಿಷಯಗೆ । ಳತ್ತಣಿಂ ಕಾಣಿಸದನಿಲ ॥ ವೃತ್ತಿಯೊಳಿಸೆಯ ದಂತಃಕರಣದಿ ಪೊಳೆ । ಯುತ್ತಿಹುದಾತ್ಮ ಕೋವಿದ ನೆ ॥ಟೀ॥ ಕೇವಲಚಿತ್ತಿಗೆ ಪ್ರಕಾಶವು ಸಂಭವಿಸುವದಿಲ್ಲ. ವಿಷಯಗೆ ಳುಳ್ಳಂಥಾ ಇಂದ್ರಿಯಗಳ ಹೇತುವಿನ ದೆಸೆಯಿಂದ ವಾಯು ಕಾಣಿಸುವ ದಿಲ್ಲ. ಅಂತಃಕರಣ ವೃತ್ತಿಯಲ್ಲಿ ಪ್ರಕಾಶತ್ವವಿಲ್ಲ. ಇನ್ನೆಲ್ಲಿ ಪ್ರಕಾಶ ವೆಂದರೆ, ಅಂತಃಕರಣದಲ್ಲಿಯೇ ಪ್ರತಿಫಲನ ಪ್ರಕಾಶವಾಗಿ ಇರುತ್ತಲಿದೆ.

ಆತ್ಮಸ್ವರೂಪವ ತಿಳಿದಂಥಾವರೊಳಗೆ ಶ್ರೇಷ್ಟನಾದಂಥಾ ಮಹಾ ಪ್ರಭುವೇ ... ||೩||

ಯೆಲ್ಲಾ ಕಡೆಯುಲುಂಟು ಸತ್ತಿಗಭಿವ್ಯಕ್ತಿ । ಯುಳ್ಳ ತಮೋ ರಜೋಗುಣದಿ ॥ ಪಲ್ಲವಿಸುವದು ಚಿತ್ತಿಂಗಭಿವ್ಯಕ್ತಿಯೋ । ಚೆಲ್ಲಿತೋರುವ ಸತ್ವಗುಣದಿ ||ಟೀ|| ಚೇತನಗಳಾದ ವಸ್ತುಗಳಲ್ಲಿಯೂ, ಅಚೇತನಗಳಾದ ವಸ್ತುಗಳಲ್ಲಿಯೂ, ಯೆಲ್ಲಾ ಕಡೆಯಲ್ಲಿಯೂ ಯೆಡೆಯಿಲ್ಲದೆ ಯೆಳ್ಳಿನಲ್ಲಿ ಯೆಣ್ಣೆ ಕಾಣಿಸದೆ ಹ್ಯಾಗೆ ಯಿರುತ್ತಲಿಧೆಯೋ, ಆ ರೀತಿಯಾಗಿ ಸಕಲವಸ್ತುಗಳಲ್ಲಿಯೂ ವ್ಯಾಪಿಸಿಕೊಂಡು ಇರುವದು ಯಾವದುಟೋ, ಅದೇ ಸದ್ರೂಪವಾ ಪರಬ್ರಹ್ಮವು. ತಮೋಗುಣ, ರಜೋಗುಣಗಳುಳ್ಳ ಜೀವರುಗಳಲ್ಲಿ ಮರಗಳಲ್ಲಿ ಚಿಗುರು ತೋರಿದ ಹಾಗೆ ಚಿದ್ರೂಪಕ್ಕೆ ಪ್ರಕಾಶ ಉಂಟಾಗುತ್ತಲಿಧೆ. ಮತ್ತು ಈ ಜೀವರುಗಳಲ್ಲಿ ತೋರುವಂಥಾ ಸಾತ್ವಿಕಗುಣದಲ್ಲಿ॥ ... ... ||೪||

ಸತ್ತಿಗೆಚಿತ್ತಿಗಾನಂದಕಭಿವ್ಯಕ್ತಿ।ಯೊತ್ತರಿಪ್ಪುದಿದೆಂತೆನಲ್ಕೆ॥ ಹೊತ್ತಿದ ಬೆಂಕಿಯುಸೂಷ್ಣವೊಂದೇಜಲ । ದತ್ತ ತೋರುವದುಕಾಸಿದರೆ॥

||ಟೀ|| ಸದ್ರೂಪಕ್ಕೆ, ಚಿದ್ರೂಪಕ್ಕೆ, ಆನಂದರೂಪಕ್ಕೆ, ಪ್ರಕಾಶತ್ವ ತೋರುವದು. ಇದು ಹ್ಯಾಗೆಅಂದರೆ, ದೃಷ್ಟಾಂತವನ್ನು ಹೇಳುತ್ತಲಿದ್ಧಾನೆ, ಉರಿಯುವಂಥಾ ಅಗ್ನಿಯ ಬಳಿ ವುಷ್ಣತ್ವ ಬಂದೇ ಚನ್ನಾಗಿ ಕಾಸಿದ ಉದುಕದದೆಸೆಯಿಂದ ಕಾಣುತ್ತಲಿಧೆ॥ ... ||೫||

ಸಾದೆಯೊಳೂಷ್ಣದಾಹಕಧರ್ಮವೆರಡೆಸಂ । ಪಾದಿಸಲಹುದುತೈಲದಲಿ॥ತೋದವರ್ತಿಯಲಿಪ್ರಕಾಶೊಷ್ಣದಾಹಕ।ಮಾದಶಕ್ತಿತ್ರಯುಮಹುದು॥

||ಟೀ|| ಕಟ್ಟಿಗೆಗಳಲ್ಲಿ ವುಷ್ಣತ್ವವು, ಸುಡೋಣವುಯೆಂಬ ಯೆರಡು ಧರ್ಮಗಳು ವುಂಟುಯೆಂದುಹೇಳುವದಕ್ಕೆ ಆಗುತ್ತಲಿಧೆ. ಯೆಣ್ಣೆಯಲ್ಲಿ ನೆನಸಿದ ಬತ್ತಿಯಲ್ಲಿ ಪ್ರಕಾಶಿಸುತ್ತಯಿರುವದನ್ನು, ಸುಡುತ್ತಲಿರುವದನ್ನು, ವುಷ್ಣವನ್ನು, ಯಂಬಅಗ್ನಿಯ ಶಕ್ತಿತ್ರಿತಯವು ಯಿರುತ್ತಲಿಧೆ॥ ||೬||

ಆನಂದವಿಜ್ಞಾನ।ಮಯರೀಶಜೀವರ।ಹೀನಮಾಯಾವೃತ್ತ್ಯುಪಾಧಿ॥ಸಾಧನಗರಾಬ್ರಹ್ಮಕೂಟಸ್ಥರಿವರ್ಗಧಿಷ್ಠಾನರುನಿತ್ಯನಿರ್ಮಲರೂ ॥

॥ಟೀ॥ ಆನಂದಮಯಕೋಶ ನಿಷ್ಠನಾದ ಈಶ್ವರನಿಗೆ, ಮಾಯಾ ಉಪಾಧಿಸ್ಥನನ್ನು, ಈ ಜ್ಞಾನಮಯಕೋಶ ನಿಷ್ಠನಾದ ಜೀವನಿಗೆ ಆ ವಿದ್ಯಾಸ್ವರೂಪವಾದ ಬುದ್ಧಿ ಉಪಾಧಿಸ್ಥನನ್ನು, ಈ ಮಾಯಾಬುದ್ಧಿಯೆಂಬ ಉಪಾಧಿಸ್ಥನನನ್ನು ಹೊಂದಿದಂಥಾ, ಈಶ್ವರ ಜೀವರಿಗೆ ನಿತ್ಯ ನಿರ್ಮಲನಾಗಿ ಯಿರುವಂಥಾ, ಆಧಾರಭೂತಬ್ರಹ್ಮನೆ ಈಶ್ವರನಿಗೆ ಕೂಟಸ್ಥ. ಯಾವಾಗಲು ನಿರ್ಮಲವಾಗಿರುವಚಿತ್ತೆ, ಬುದ್ಧಿಯಲ್ಲಿ ಪ್ರತಿಬಿಂಬಿಸಿದ ಜೀವನಿಗೆ ಆಧಾರಭೂತವಾದ ಕೂಟಸ್ಥ॥ ... ॥೭॥

ಯಂತೆನೆಮೇಘಗಗನಜಾಲಗನಗ।ಳಂತಸ್ಥವಾಗಿಯುಂಪೊರಗೆ॥ ಶಾಂತತ್ವವಾದಮಹಾಕಾಶಕಲಶಾ।ನಂತಂಗಳೆಂತಿಹುದೆಣಿಸೆ॥ ॥ಟೀ॥ ಅದು ಹ್ಯಾಗೆಅಂದರೆ, ಮೇಘದಲ್ಲಿಇರುವ ಆಕಾಶವು, ಆಮೇಘಕ್ಕೆ ಕಾರಣವಾದ, ತುಷಾರರೂಪವಾದ ಜಲದಲ್ಲಿ ಹೊರಗೆ ಒಳಗೆಯಿರುವ ಆಕಾಶವು, ಅನುಮಾನಪ್ರಮಾಣದಿಂದ ಹ್ಯಾಗೆ ಪ್ರತಿಫಲಿಸಿಯಿದೆಯೋ ಹಾಗೆ, ಹೊರಗು ಒಳಗುಕೂಡ ಯಿದ್ದುಕೊಂಡು, ಆ ಮಾಯೆಯಲ್ಲಿ ಪ್ರತಿಫಲಿಸಿದ ಚೈತನ್ಯವೆ, ಈಶ್ವರನು. ಪರಿಪೂರ್ಣವಾದ ಮಹಾಕಾಶವಂ ವಿಚಾರಿಸಿದರೆ, ಹ್ಯಾಗೆ ಯಿರುವದೋಹಾಗೆ, ಗಟೋಪಾದಿಗಳಿಂದ ಭಿನ್ನವಾದ ಆಕಾಶಕ್ಕೆ ವಿಚಾರಿಸಿದರೆ, ಅನೇಕತ್ವ ಹ್ಯಾಗೆಬಂತೊ, ಹಾಗೆ, ಚಿತ್ತಿಗೆ ಈಶ್ವರ ಜೀವತ್ವವೆಂದು ತಿಳಿಯುತಕ್ಕದ್ದು॥ ... ... ॥೮॥

ಇವರಿಗವರ್ಕಳೊಳೈಕ್ಯಮಂತಹುದುಳಿ।ದವರಿಗೆಂತೈಕ್ಯವಾಗುವದು॥
ವಿವರಿಗೆಂತೆನಲುಪಾಧಿತ್ಯಾಗದಿಂದೆಸಂ।ಭವಿಪ್ಪುದದ್ವೈತಸಂಸಿದ್ಧಿ॥

॥ಟೀ॥ ಅಜ್ಞಾನೋಪಾಧಿನಿವೃತ್ತಿಯಿಂದಜೀವನಿಗೆಕೂಟಸ್ಥನಲ್ಲಿಯೇಏಕತ್ವವು. ಮಾಯೋಪಾಧಿರಹಿತತ್ವದಿಂದ ಈಶ್ವರನಿಗೆ ಬ್ರಹ್ಮನಲ್ಲಿ ಐಕ್ಯವು. ಕೂಟಸ್ಥೋಪಾಧಿ ಬ್ರಹ್ಮತ್ವೋಪಾಧಿ ನಿರಸನದಿಂದ ಬ್ರಹ್ಮಕೂಟಸ್ಥರಿಗೆ ಯೇಕತ್ವವು ಉಳ್ಳಂಥಾ ಸಜಾತೀಯ, ವಿಜಾತೀಯ, ಸ್ವಗತಭೇದಶೂನ್ಯವಾದ ಚಿನ್ಮಾತ್ರದ್ವೈತ ಸಿದ್ಧಿಯಾಗುತ್ತಲಿದೆ॥ ... ॥೯॥

ವ॥ ಇಂತೆಂದು ನಿಸ್ಸಂದೇಹವಾಗಲು ಸುದರ್ಶಚಿದ್ಭಾವ ಪದ್ಧತಿಯುಂ ಕರ್ಣಪ್ರದೇಶಸ್ಥಿತಿಯಂಗೈದಿನ್ನೊಂದು ಪ್ರಕಾರಮಂಪೇಳುತಿರ್ದಪನದೆಂತೆನೆ॥ ॥ಟೀ॥ ಹೀಗೆಂದು ಸಂಶಯವಿಲ್ಲದಹಾಗೆ ಹೇಳಿದಂಥಾ, ಚಿತ್ಸ್ವ

ರೂಪಮಾರ್ಗವನ್ನು ಶಿಷ್ಯರಿಗೆ ಹಳೊಳಗೆನಿಲ್ಲುವಹಾಗೆಮಾಡಿ, ಆನ್ನೊಂದು ರೀತಿಯಾಗಿ ಹೇಳುತ್ತಲಿದ್ದಾನೆ, ಅದು ಹ್ಯಾಗೆಅಂದರೆ|| ...

ಗದ್ಯ|| ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕವಿ
ಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣಪ್ರಭು
ವಿರಚಿತವಾದ ನಿಜದೀಪಿಕಾ ರತ್ನಗ್ರಂಥ
ದಲ್ಲಿ ಚಿದ್ರೂಪವಿಚಾರ ಲಕ್ಷಣ ಪದ್ಧತಿ
ದಶಮೋಧ್ಯಾಯಃ ಸಂಪೂರ್ಣಂ||

(ಇತಿಪದ್ಧತಿ ೧೦ ಚಿದ್ರೂಪ ವಿಚಾರ ಲಕ್ಷಣ ಹೇಳಿದಲ್ಲಿಗೆ ಮಂಗಳಂ)

---

## ೧೧ ಆನಂದರೂಪ ವಿಚಾರ ಪದ್ಧತಿ ಪ್ರಾರಂಭವು.

ಉತ್ಪಲಮಾಲಿಕಾವೃತ್ತ|| ತಾಮಸರಾಜಸಂಗಳಲಿಮೂಢದಿಘೋರದಿತೋರದೇಸಮು|ದ್ದಾಮದಿಶುದ್ಧಸತ್ವಗುಣಭಾಗದಿತೋರುವುದಾವುದಿಂದ್ರಿಯ|ಸ್ತೋಮದಿಗಮ್ಯಮಾದವಿಷಯಂಗಳಿನಿರ್ಮಲಭಾವದಿಂದಕ್ಕ|ದ್ಧಾಮಮನೈದೆತೃಪ್ತಮತಿಯೋಳ್ಬೆಳೆವುತ್ತಿಹುದಾವವಸ್ತುವಂ|| ||ಟೀ|| ತಮೋಗುಣ, ರಜೋಗುಣಂಗಳ ಭಾಗಂಗಳಲ್ಲಿ, ಮೂಢವೃತ್ತಿ ಘೋರವೃತ್ತಿಗಳಲ್ಲಿಕಾಣಿಸದೆ, ಅಧಿಕವಾದಂಥಾ ನಿರ್ಮಲವಾದ ಸತ್ವಗುಣಭಾಗದ ಶಾಂತವೃತ್ತಿಯಲ್ಲಿ ತೋರುವಂಥಾ ಯಾವ ಆನಂದವುಂಟೋ, ಆಯಾನಂದವೆ, ದಶೇಂದ್ರಿಯಗಳ ಸಮೂಹದಲ್ಲಿ ಹೊಂದಲ್ಪಟ್ಟ, ಆಯಾಯಿಂದ್ರಿಯವಿಷಯಂಗಳ ನೈರ್ಮಲ್ಯಸ್ವರೂಪದಿಂದಲೆ, ಮನಸ್ಸೆಂಬ ಗೃಹವನ್ನು ಹೊಂದಿದರೆ, ಸಂತುಷ್ಟವಾದ ಸುಖಾನುಭವವ್ನು, ಚಾಪಲ್ಯವುಳ್ಳ ಬುದ್ಧಿಯಲ್ಲಿ ಪ್ರಕಾಶಿಸುತ್ತಲಿರುವದು. ಯಾವ ಯಥಾರ್ಥಸ್ವರೂಪವಾದ ವಸ್ತುವೋ, ಅದೇಆನಂದಸ್ವರೂಪವು|| ... ... ||೧||

ಮೂ॥ ಜಂತೆ॥ ಮನದೊಡನೆವಚನಗಳ್ಕರಳುತಿಹುದಾವದೆಶೆ। ಯಾನುಪಿಡಿದುತದವಬೋಧಾಢ್ಯಂಭಯುವನು॥ ॥ಟೀ॥ (ಯತೋವಾಚೋನಿವರ್ತಂತೆಅಪ್ರಾಪ್ಯಮನಸಾಸಹ) ಯಂಬ ಶೃತ್ಯಾರ್ಥಾನು ಸಾರವಾಗಿ ಹೇಳುತ್ತಿದ್ದಾನೆ. ಮನಸ್ಸಿನಕೂಡ ವೇದವಾಕ್ಯಗಳು ಯಾವಬ್ರಹ್ಮಾನಂದವ ಹಿಡಿದುಹೇಳುವದಕ್ಕೆ ಅಶಕ್ಯವಾಗಿ ಹಿಂಮೆಟ್ಟಿದಂಥಾವಾದವೊ, ಆಬ್ರಹ್ಮಾನಂದವಂ ತಿಳಿದು, ಅನುಭವಿಸಿದಂಥಾ ಜ್ಞಾನಿಯು,ಜನನ ಮರಣರೂಪ ಸಂಸಾರದಿಂದಾದ ಭೀತಿಯನ್ನು॥ ... ॥೧॥

ಪೊಂದನೆಂಬುದರಿಂದಭೂರಿಪ್ರಯತ್ನಮೇ।ಯಂದದಿಂದಾಯ್ತೊವ್ರದಾಗದುವಿಪರ್ಯಂ ॥ಟೀ॥ ಹೊಂದುವದಿಲ್ಲ. ನಾನು ಯಂಬಹೇತುವಿನಿಂದ, ಅಧಿಕವಾದಂಥಾ ಪ್ರಯತ್ನವು ಯಾವ ಆನಂದದ ಚಂದದಿಂದಾಯಿತೊ, ಯಾವಬ್ರಹ್ಮಾನಂದವು ಯಂಥಾದುಃಖಗಳು ಬಂದಾಗ್ಯೂ, ಕಡಮೆಯಾಗದೆ ಯಿರುತ್ತಲಿಧೆಯೊ॥ ... ... ॥೨॥

ಆದರವೆಚ್ಚಕೆನಿಖಿಲವಸ್ತುವೆಲ್ಲದೆನಿಖಿಲ।ವದರತ್ತಣಿಂಗಣ್ಯಮಾಗಿರುತಿರುವುದೆ॥ ॥ಟೀ॥ (ಆತ್ಮನಸ್ತುಕಾಮಾಯಸರ್ವಂಪ್ರಿಯಂಭವತಿ) ಯಂಬಶೃತ್ಯರ್ಥಾನುಸಾರವಾಗಿ ಹೇಳುತ್ತಲಿದ್ದಾನೆ. ಆ ಬ್ರಹ್ಮಾನಂದ ಹೊಂದುವದಕ್ಕೋಸ್ಕರ, ಸಕಲಜಗಜ್ಜನ್ಯಪದಾರ್ಥಗಳೆಲ್ಲವು ಉಪಯೋಗಂಗಳಾಗುವವಲ್ಲದೆ, ಸಕಲಜನ್ಯ ಪದಾರ್ಥಂಗಳ ಹೇತುವಿನಿಂದ, ಬ್ರಹ್ಮಾನಂದವು ಯೆಣಿಸಲ್ಪಡುವದಾಗಿ ಯಿರುವದಿಲ್ಲ॥ ... ॥೩॥

ಯೆಲ್ಲಿಯುದರೀಷತ್ಸಮುಲ್ಲಸಿತ ಮುಂಟದರೊ । ಳೆಲ್ಲರುಂ ಮೋಹಿಸಿದರಿತರಸಾಪೇಕ್ಷಂ ।ಟೀ॥ ಯಾವ ಗುಹ್ಯೇಂದ್ರಿಯದ ವಿಷಯದಲ್ಲಿ ಆ ಆನಂದದ ಸ್ವಲ್ಪ ಪ್ರಕಾಶವುಂಟೋ, ಆ ತುಚ್ಛವಾದ ಸುಖದಲ್ಲಿ ಯಿರುವ ಮೊದಲ್ಗೊಂಡು ಚತುರ್ಮುಖ ಬ್ರಹ್ಮಕಡೆಯಾಗಿ, ಇತರಾಪೇಕ್ಷೆ ಇಲ್ಲದೆ ಮೋಹ ಉಳ್ಳಂಥಾವರಾಗರೋ ... ॥೪॥

ಅದು ದೋಷ ಶಬಲಮಾಗದ ಪೊಲಾಗಮದಿಂದೆ। ವಿದುರರಿಂದರಿದು ನಾನದು ಯೆಂದು ಸುಖಿಸು ॥ಟೀ॥ ಆ ಆನಂದವು ಇಂದ್ರಿಯಂಗಳ ದೋಷದಿಂದ ಕೂಡಿದಹಾಗೆ, ವೇದಾರ್ಥದಿಂದಲೂ, ಆ ವೇದಾರ್ಥಗಳ

ನ್ನು ಹೇಳುವಂಥಾ ಗುರುಗಳಿಂದಲೂ ತಿಳಿದು ಯೆಲೈ ಮನಃ ಪ್ರಭುವೇ, ಆ ನಿರ್ದೋಷವಾದ ಆನಂದವ ನಾನು ಯೆಂದು, ಸುಖವನ್ನು ಪಡುವನಾಗು॥ ... ... ॥೫॥

ವ॥ ಯೆಲೈ ಧೀಶಿಷ್ಯನೆ, ಅದು ದೋಷ ಶಬಲವಾಗದವ್ರೋಲೆಂದರೇನು, ಹಾಗಾದರೆ ಕೇಳತಕ್ಕದ್ದು ॥ಟೀ॥ ಕೇಳಯ್ಯ ಬುಧ್ಧಿಯೆಂಬ ಪ್ರಧಾನಿಯೇ, ಆ ನಿಜಾನಂದವು ದೋಷದಿಂದ ಕೂಡದೆ ಇರಬೇಕುಯೆಂದು ಹೇಳಿದಿರಲ್ಲಾ, ಹಾಗಂದರೇನು, ಹಾಗಾದರೆ ಚನ್ನಾಗಿ ಕೇಳಬಹುದು॥

ಸಾಂಗತ್ಯ॥ ಹರಯದಿ ಸಕಲವಯ ವಶೋಭನಾಗಿನಿ । ಬರಬಲನಾಗಿರುವಾಗ ॥ ತರುಣಿಯು ಲಾಭವಾದರೆ ಚಿತ್ತದಲ್ಲಿವಿ । ಸ್ಫುರಿಪುದೆವಿಷಯಾನಂದ ॥ಟೀ॥ ಪ್ರಾಯದಲ್ಲಿ ಸಕಲವಾದ ಕರಚರಣಾದ್ಯವಯವಗಳಿಂದ ಪ್ರಕಾಶಿಸುತ್ತ ಇರುವಂಥಾವನಾಗಿ, ಅಧಿಕವಾದಂಥಾ ಬಲವುಳ್ಳಂಥಾವನಾಗಿರುವ ಕಾಲದಲ್ಲಿ, ಯವ್ವನಸ್ತ್ರೀ ಸಿಕ್ಕಿದರೆ ಚಿತ್ತದಲ್ಲಿ ಪ್ರಕಾಶಿಸುತ್ತ ಇರುವಂಥಾದ್ದು ಯಾವದುಂಟೋ, ಅದೇ ವಿಷಯಾನಂದವು ॥೧॥

ದೇಹದೊಳಗೆ ರೋಗವಿಲ್ಲದೆ ಮನದಿವ್ಯಾ । ಮೋಹವಿಲ್ಲದೆಮಲಗಿರಲೂ ॥ ತಾ ಹೊಂದುವದೆ ಬ್ರಹ್ಮಾನಂದವೆಂದಾದ್ಯರ । ವ್ಯಾಹಾರವುಂಟು ಶಾಸ್ತ್ರದಲಿ ॥ಟೀ॥ ಶರೀರದಲ್ಲಿ ರೋಗಾದಿಗಳ ಬಾಧೆ ಇಲ್ಲದೆ, ಮನಸ್ಸಿನಲ್ಲಿ ಯಾವ ಪದಾರ್ಥವನ್ನು ಕುರಿತಾದರು, ಮೋಹರೂಪವಾದ ಚಿಂತೆಯಿಲ್ಲದೆ ಮಲಗಿರುವ ಸಮಯದಲ್ಲಿ, ಪ್ರತ್ಯಗಾತ್ಮನಾದ ತಾನು ಹೊಂದಿ ತೋರುವ ಆನಂದಯಾವದುಂಟೋ, ಅದೇ ಬ್ರಹ್ಮಾನಂದವೆಂದು ಪೂರ್ವಿಕರಾದ ಆಚಾರ್ಯರ ಮಾತು, ಶಾಸ್ತ್ರದಲ್ಲಿ ಉಂಟಾಗಿ ಇಧೆ ... ॥೨॥

ಯೇನೊಂದರಟ್ಟುಳಿಯಿಂದೆಚ್ಚರಾಗದೆ। ತಾನೆತಿಳಿದನಿದ್ರೆಯಲ್ಲಿ॥ ಕಾಣಿಸಿಕೊಂಬುದೆವಾಸನಾನಂದವು। ಮಾನಸವೃತ್ತಿಯುಕೂಡೆ॥ ॥ಟೀ॥ ಯಾವದಾದರು ಒಂದುಉಪದ್ರವದಿಂದ ಜಾಗ್ರದವಸ್ಥೆಗೆ ಬಾರದೆ ಪ್ರತ್ಯಗಾತ್ಮನು ತನ್ನಿಷ್ಟಕ್ಕೆ ತಾನೆ ತಿಳಿದ ಸುಷುಪ್ತಾವಸ್ಥೆಯಲ್ಲಿ, ಪ್ರತ್ಯಗಾತ್ಮ

ನಿಗೆ ಮನೋವೃತ್ತಿಯಿಂದ ಕೂಡಿ ತೋರುವದೆ ವಾಸನಾನಂದವೆನ್ನಿಸಿ ಕೊಂಬುದು॥ ... ... ... ॥೩॥

ತೋರುವದೆಲ್ಲನಾಶವನ್ನೈದುತಿಹುದೆಂಬ । ಪಾರಮಾರ್ಥಿಕಧೀಕ್ಷಣೆಯು ಲಿ॥ತೋರುವದೇಮುಖ್ಯಾನಂದಮೆನಿಪುದುಮೇ। ಣಾರಂಭಿಸದಿರರೀಕ್ಷಣ ದಿ॥ ॥ಟೀ॥ ದೃಶ್ಯರೂಪವಾಗಿ ತೋರುವಂಥಾ ಸಕಲ ಜಗತ್ತುನಾಶ ವಾಗಿ ಹೋಗುತ್ತಲಿಧೆ ಯಂಬಂಥಾ ಯತಾರ್ಥಸ್ವರೂಪವಾದ ಬುದ್ಧಿವೃ ತ್ತಿಯಲ್ಲಿ ಕಾಣುವದೆ, ಪ್ರದಾನವಾದಂಥಾ ಆನಂದವೆನ್ನಿಸಿಕೊಂಬುದು. ಮತ್ತು ಈ ಷಣ ತ್ರಯಾರಂಭವಿಲ್ಲದೆ ಯಿರುವಕಾಲದಲ್ಲಿ ತೋರುವದೇ ಮುಖ್ಯಾನಂದ॥ ... ... ॥೪॥

ಸವಿಕಲ್ಪನಿರ್ವಿಕಲ್ಪಕಸಮಾದಿಗಳಿಂದ।ವಿವಿಧಯೋಗಾಭ್ಯಾಸದಿಂದಾ॥ ಸವೆದಚಿತ್ತದಲಿತೋರ್ಪುದೆನಿಜಾನಂದವಂ । ದವಗಾಹಿಸಿದರುಬಲ್ಲವರು॥ ॥ಟೀ॥ ಸಬೀಜ ನಿರ್ಬೀಜಸಮಾದಿಗಳಿಂದಲು, ನಾನಾವಿಧವಾದಂಥಾ ಜೀವಬ್ರಹ್ಮೈಕ್ಯವಾದಯೋಗಾಭ್ಯಾಸಬಲದಿಂದಲೂ,ಲಯವಾದ ಚಿತ್ತದ ಲ್ಲಿ, ತೋರುವಂಥಾ ಯಾವ ಆನಂದವುಂಟೊ, ಆ ಆನಂದವೆ, ನಿಜಾನಂದ ವೆಂದು; ತಿಳಿದಂಥಾ ಅನುಭವಿಗಳಾದವರು ಪರಿಗ್ರಹಿಸಿದರು॥ ॥೫॥

ಪರಿಶುದ್ಧಚಿತ್ತವೃತ್ತಿಯುದೆಶೆಯಿಂದಶ್ರೀ । ಗುರುಗಳಮುಖದಿಜೀವನಲಿ॥ ಪರಮನೊಳೈಕ್ಯವದ್ವೈತಾನಂದವಂ।ದರುಶಾರೀರಕಶಾಸ್ತ್ರಪರರೂ॥ ॥ಟೀ॥ ನಿರ್ಮಲವಾದ ಚಿತ್ತವೃತ್ತಿಯ ಹೇತುವಿನಿಂದ, ತನಗೆ ಗುರು ಗಳಾದವರ ವಾಕ್ಯದಿಂದ, ಜೀವನಾದ ಪ್ರತ್ಯಗಾತ್ಮನಲ್ಲಿ, ಪರಬ್ರಹ್ಮದೊ ಡನೆ ಯೆಕತ್ವವೆಂಬುವದು ಯಾವದುಂಟೊ, ಆಕಾಲದಲ್ಲಿ ತೋರಿದಂಥಾ ಆನಂದವೆ, ಅದ್ವೈತಾನಂದ ಯೆನ್ನುವರು, ಶಾರೀರಕಭಾಷ್ಯ ಹೇಳಿದಂ ಥಾವರು॥ ... ... ... ॥೬॥

ತತ್ವಮಸ್ಯಾದಿಚತುರ್ವೇದಚೋದಿತ।ಸಾತ್ವೀಕವಾಕ್ಯವೊತ್ತರಿಸೆ॥ಚಿ ತ್ವಭಾಗದಲಿವಿದ್ಯಾನಂದವೆಂದುಮ।ಹತ್ವಮುಳ್ಳವರೆಣಿಸುವರು॥ ॥ಟೀ॥ ಸಿದ್ಧವಾದ ಅರ್ಥವಂ ಬೋಧಿಸುವಂಥಾ, ಚತುರ್ವೇದಗಳಿಂ ದ ಹೇಳಲ್ಪಟ್ಟ, ಸತ್ವಗುಣಪ್ರದಾನವಾದ ತತ್ವಮಸ್ಯಾದಿ ಮಹಾವಾಕ್ಯ

ಗಳು ಪ್ರಾಪ್ತವಾಗಲು, ಚಿತ್ಸ್ವರೂಪದ ಅಂಶೆಯಲ್ಲಿ ಹುಟ್ಟಿದಂಥಾ, ಆನಂದ ಯಾವದುಂಟೊ, ಆ ಆನಂದವನ್ನು ವಿದ್ಯಾನಂದವೆಂದು, ಅನುಭವಉಳ್ಳ ಮಹಾತ್ಮರು ಹೇಳುತ್ತಲಿದ್ಧಾರೆ॥ ... ॥೭॥

ವ॥ ಕೇಳೈ ಮನಶ್ಚಕ್ರವರ್ತಿಯೇ:—ತನ್ನ ಕಾಮಕ್ಕೋಸುಗಂ ಭಾರ್‍ಯೆಯು ಪ್ರಿಯಳಲ್ಲದೆ, ಭಾರ್‍ಯೆಯ ಕಾಮಕ್ಕೋಸುಗಂಭಾರ್‍ಯೆಯು ಪ್ರಿಯಳಲ್ಲವು, ಈ ತೆರದಿಂ ಭಾರ್‍ಯೆಯು ತನ್ನ ಕಾಮಕ್ಕೋಸುಗಂ ಪತಿ ಪ್ರಿಯನಲ್ಲದೆ ಪತಿಯ ಕಾಮಕ್ಕೋಸುಗಂ ಪತಿಯು ಪ್ರಿಯನಲ್ಲ. ಈ ಪ್ರಾಂಗಿನಿಂ ತನ್ನ ಕಾಮಕ್ಕೋಸುಗಂ, ವಿತ್ತ, ಕ್ಷೇತ್ರ, ರಾಜ್ಯ, ಬಂಧು, ದಾಸ್ಯಾದಿಗಳು ಪ್ರಿಯಂಗಳಲ್ಲದೆ, ವಿತ್ತ, ಕ್ಷೇತ್ರ, ರಾಜ್ಯ, ಬಂಧು, ದಾಸ್ಯಾದಿಗಳು ತಮ್ಮ ತಮ್ಮ ಕಾಮ್ಯಂಗಳಿಗೋಸುಗಂ ತಾವು ತಾವು ಪ್ರಿಯಂಗಳಲ್ಲ. ಹೀಗೆ ತನಗೆ ಪ್ರಿಯ ವಿಷಯಂಗಳಾದ ವಿಷಯಂಗಳಲ್ಲಿ ತಾನೇ ಪ್ರಿಯತಮನೆಂದರಿದಾಗ ಬಂದಾನಂದವೆ ಆತ್ಮಾನಂದವೆನಿಸುವದು. ಈ ಆನಂದ ಅಷ್ಟಕಂಗಳಿಗೆ ಸಂಚಾರವಿಲ್ಲದೆ, ಯೆಂದೆಂದಿಗುಯಿಲ್ಲ. ಯಾಕೆ! ಹಾಗಾದರೆ ಕೇಳು:—ತನಗೆ ಪ್ರಿಯಂಗಳಾದ ವಿಷಯಂಗಳೊಳಗಾವುದಾನೊಂದಪಾಯದಿಂ ಕ್ಷೇತ್ರಂ ಪರಾಕ್ರಾಂತವಾಗೆ, ಬಳಿಕಿದು ಪೋದರೆ ಪೋಗಲಿ ಯೆಂದೊಬ್ಬಾನೊಬ್ಬ ಸಂಸಾರಿಯು, ತಾಂಘಳಿಸಿದ ದ್ರವ್ಯಮಂ ಬ್ಯೆಚಿಡುವನು. ಆ ದ್ರವ್ಯಂಪೋಗುವಲ್ಲಿ ಬಂದುಗಳಂ ಪಡದಿರ್ಪನು. ಆ ವರ್ಗಳ ವಿಯೋಗದಲ್ಲಿ ದಾರಾಪುತ್ರಾದಿ ಸ್ವಜನಮಾತ್ರಮಂ ಕೂಡಿರ್ಪನು, ಅವರ್ಗಳವಿರಹದಲ್ಲಿ ದೇಹಮಾತ್ರಮಂ ರಕ್ಷಿಸಿ ಕೊಂಡಿರ್ಪನು. ಆ ದೇಹಾವಯವ ವಿನಾಶಕಾಲದಲ್ಲಿ ಇಂದ್ರಿಯಂಗಳಂ ಪಾಲಿಸಿ ಕೊಂಡಿರ್ಪನು. ಆ ಇಂದ್ರಿಯಂಗಳ ಹಾನಿಕಾಲದಲ್ಲಿ ಪ್ರಾಣಮಂ ಸಲಹಿಕೊಂಡಿರ್ಪನು. ಪ್ರಾಣಂಗಳಿಗೆಂತ್ಯಾಯ ಕಾಲದಲ್ಲಿ ಮನಮಂ ಪೊರೆಯುತಿರ್ಪನು. ಆ ಮಾನಾಭಿ ಮಾನಂಗಳಂ ನಿನಗೆ ಮೋಕ್ಷಂ ಸಿದ್ಧಿಸದೆಂಬ ಶೃತಿಗುರು ವಾಕ್ಯಂಗಳಿಂದ, ಮಾನಾಭಿಮಾನ ರಾಗಂಗಳಂ ಬಿಟ್ಟು ಮೋಕ್ಷಮಂ ಕಾಪಾಡುವನು. ಆ ಮೋಕ್ಷದೊಳ್ ತಾನೋರ್ವನೇ ಸುಖಸ್ವರೂಪಿ

ಯಾಗಿ ಇರ್ಪನಾಗಿ, ಆ ಸುಖವು ಮೇಣಾವ ಪ್ರಯೋಜನಂಗಳೊಳಾವೆ ಶ್ಯಕತ್ವಂ ಬಂದರು, ತನ್ನ ಬಿಟ್ಟರದಾಗಿ, ಸುಖವೆ ತಾನೆಂಬುದೇ ಸಿದ್ಧಾಂತಂ. ಆದರೆ ಸುಖಂಗಳಿವು ಉಪಾಧಿಕಂಗಳೆಂಬಂತೆ ತೋರುತ್ತಿಧೆಯಲ್ಲ. ಅಲ್ಲ. ಕೃತಕವೆ ದುಃಖ, ಸಹಜವೆ ಸುಖ, ಹೀಗೆ ಹರ್ಷಾವಿಷಾಧಂಗಳಿಲ್ಲದೆ, ಸ್ಥಿಮಿತವಾಗಿರ್ದಾಗ ಮನಸ್ಸಿನಲ್ಲಿ ನಿಜಸುಖಂ ತೋರುತ್ತದೆ. ಆದರೋಪಾಧಿಯಲ್ಲಿ, ಮನಸ್ಸಿನ ವೃತ್ತ್ಯಾಭಾವಕಾಲದಲ್ಲಿ ದುಃಖಂ ತೋರದಾಗಿ, ತನ್ನಲ್ಲಿ ಪ್ರೀತಿಯು ಪ್ರೇಯಃಶಿ ಯೆನಿಸಿ ಕೊಂಬುದು. ಆತ್ಮಾನುಕೂಲ್ಯ ದ್ರವ್ಯಂಗಳೊಳಿರ್ಪುದು, ಪ್ರೀತಿಯೆನಿಸಿ ಕೊಂಬುದು. ಮೇಣೀಯುರಡಕ್ಕವಾಗಿ ದ್ವೇಷೋಪೇಕ್ಷ ವಿಷಯಂಗಳಾಗಿರ್ಪ ವ್ಯಾಘ್ರ ಜರಾತೃಣಾದಿಗಳಲ್ಲಿ ಪ್ರಿತಿ ಬಾರದು. ವ್ಯಾಘ್ರ ಜರಾತೃಣಾದಿಗಳಲ್ಲಿ ಪ್ರೀತಿಬಾರದೆಂಬುದಕ್ಕೆ ನಿಮಿತ್ತವೇನೆಂದರೆ, ಇವರ ವ್ಯಕ್ತಿ ನಿಯಾಮವಿಲ್ಲ. ವೃತ್ತಿ ನಿಯಾಮವೇಸರಿ. ಅದೇಕೆ, ಕೇಳು, ವ್ಯಾಘ್ರವು ಅಭಿಮುಖವಾದರೆ ದ್ವೇಷ್ಯವೊಪ್ಪುದು, ಪರಾಙ್ಮುಖವಾದರೆ ಉಪೇಕ್ಷೆವೊಪ್ಪುದು. ಇಂಥಾ ವ್ಯಾಘ್ರವೆ ಲಾಲನೆಯಿಂದನುಕೂಲ ಮಾದರೆ ಪ್ರಿಯವಪ್ಪುದು. ಇದರಿಂ (ಆತ್ಮಪ್ರೇಯರ್ಭ ಪ್ರಿಯಶ್ಶೇಷೋ ದ್ವೇಷೋಪೇಕ್ಷೌತದನ್ಯಯೊಃ) ಯೆಂದು ಯಾಜ್ಞವಲ್ಕ್ಯ ವಾಕ್ಯವಿರ್ಪುದರಿಂ ಹಾಗಾದರಾಗಲಿ, ಸಚ್ಚಿತ್ತುಗಳೊಡನೆ ಈ ಯಾನಂದಕ್ಕೆ ಭೇದವಿಲ್ಲವೆ॥

॥ಟೀ॥ ಕೇಳ್ಳೈ ಮನಃಪ್ರಭುವೆ, (ಆತ್ಮಾನಃ ಕಾಮಾಯಸರ್ವಂ ಪ್ರಿಯಂ ಭವತಿ) ಯೆಂಬ ಶೃತ್ಯರ್ಥಾನುಸಾರವಾಗಿ, ಪತಿಯಾದತನ್ನಾನಂದಕ್ಕೋಸ್ಕರಪತ್ನಿಯುಪ್ರೀತಿಪಾತ್ರಳಲ್ಲದೆ,ಹೆಂಡತಿಯ ಆನಂದಕ್ಕೋಸ್ಕರವು ಹೆಂಡತಿ ವಿಶ್ವಾಸ ಪಾತ್ರಳಲ್ಲ. ಈಪ್ರಕಾರದಿಂದ ಪತ್ನಿಯು ತನ್ನಾನಂದಕ್ಕೋಸ್ಕರವೆ ಪತಿಯಲ್ಲಿ ಪ್ರೀತಿಯುಳ್ಳದೆ, ಪತಿಯಾನಂದಕ್ಕೋಸ್ಕರ ಪತಿಯುಪ್ರಿಯನಲ್ಲ, ಈರೀತಿಯಾಗಿತನ್ನಾನಂದವುದ್ದೇಶಿಸಿ, ತಾನುಸಂಪಾದಿಸಿದಧನವು, ತಾನುಸಂಪಾದಿಸಿದಭೂಮಿಯು, ತಾನುಸಂಪಾದಿಸಿದರಾಜ್ಯವು, ತಾನುಸಂಪಾದಿಸಿದಬಂಧುಗಳು, ತಾನುಸಂಪಾದಿಸಿದದಾಸ್ಯಾದಿವಸ್ತುಗಳು,ತನಗೆಪ್ರಿಯಂಗಳಲ್ಲದೆ,ದ್ರವ್ಯವು,ಭೂಮಿಯು,ರಾಜ್ಯವು,ನಂಟರು

ಗೋಳು,ದಾನ್ಯವೊದಲಾದಪದಾರ್ಥಗಳನ್ನು, ತಮ್ಮ ತಮ್ಮ ಆನಂದಕ್ಕೋಸ್ಕರ ತಾವುತಾವುಪ್ರಿಯಂಗಳಲ್ಲ, ಹೀಗೆ, ತನಗೆಪ್ರೀತಿಪಾತ್ರಂಗಳಾದಇಂದ್ರಿಯಾರ್ಥಂಗಳಲ್ಲಿ ತಾನೆ ಪ್ರಿಯಶ್ರೇಷ್ಟನೆಂದು,ತಿಳಿದಾಗಬಂದಂಥಾ ಆನಂದಯಾವದುಂಟೊ, ಆಆನಂದವೆ ಆತ್ಮಾನಂದವೆನಿಸಿಕೊಳ್ಳುತ್ತಾಯಿಧೆ. ಈ ಯೆಂಟು ಆನಂದಗಳಿಗು ವಿಚ್ಛಿತ್ತಿಯಿಲ್ಲವೆ! ಯಾವಾಗ್ಯು ಆಗುವದಿಲ್ಲ, ಯಾತಕ್ಕೆಂದರೆ, ಹಾಗಾದರೆ ಹೇಳುತ್ತೇವೆಕೇಳು, ತನಗೆ ಪ್ರೀತಿಪಾತ್ರಂಗಳಾದ ಸಕಲವಿಷಯಂಗಳಲ್ಲಿ ಯೇನಾದರು ಒಂದು ಹೇತುವಿನಿಂದ, ತಾನುಫಳಿಸಿದ ಭೂಮಿಯು ಪರರು ಅಪಹರಿಸಿಕೊಂಡುಹೋದರೆ ಆ ಮೇಲೆ ಅದು ಹೋದರೆ ಹೋಗಲಿಯೆಂದು ಒಬ್ಬಾನೊಬ್ಬ ಗೃಹಸ್ತನು ತಾನು ಸಂಪಾದಿಸಿದ ಧನದಿಂದ, ಆನಂದ ಪಡೋಣಯೆಂದು ಒಚ್ಚಿಟ್ಟುಕ್ಕೊಂಡು ಇರುವನು. ಆ ದ್ರವ್ಯನಾಶಕಾಲದಲ್ಲಿ ಬಂಧುಗಳಿಂದ ಆನಂದ ಪಡೋಣಯೆಂದು, ಆ ಬಂಧುಗಳನ್ನು ಹೊಂದಿಕೊಂಡಿರುವನು, ಅವರುಗಳ ವಿರಹಾಕಾಲದಲ್ಲಿ, ಹೆಂಡತಿ ಮಕ್ಕಳುಗಳಿಂದ ಆನಂದ ಪಡೋಣವೆಂದು, ಅವರುಗಳನ್ನು ಕೂಡಿಕೊಂಡುಯಿರ್ಪನು. ಆ ಹೆಂಡತಿ ಮಕ್ಕಳುಗಳ ನಾಶಕಾಲದಲ್ಲಿ ದೇಹಮಾತ್ರವಿದ್ದರೆಸಾಕು, ಇದರಿಂದ ಆನಂದ ಪಡೋಣವೆಂದು, ಶರೀರವನ್ನು ಸಂರಕ್ಷಿಸಿಕೊಂಡುಯಿರುವನು. ಆ ದೇಹದಲ್ಲಿ ಯಿರುವ ಅಂಗಂಗಳ ವಿನಾಶಕಾಲದಲ್ಲಿ, ಇಂದ್ರಿಯಂಗಳಿಂದ ಆನಂದ ಪಡೋಣಯೆಂದು, ಇಂದ್ರಿಯಂಗಳನ್ನು ಕಾಪಾಡಿಕ್ಕೊಂಡು ಯಿರುವನು. ಆ ಇಂದ್ರಿಯಂಗಳಿಗೆ ವೃದ್ಧಿಯಿಲ್ಲದ ಕಾಲದಲ್ಲಿ ಪ್ರಾಣದಿಂದ ಆನಂದ ಪಡೋಣವೆಂದು, ಪ್ರಾಣವನ್ನು, ಸಂರಕ್ಷಣ್ಯಮಾಡಿಕ್ಕೊಂಡು ಇರುವನು. ಪ್ರಾಣದವಿನಾಶಹೇತುಕಾಲದಲ್ಲಿ, ಮಾನದಿಂದಆನಂದಪಡೋಣವೆಂದು ಆಮಾನಸಂರಕ್ಷಣ್ಯಮಾಡಿಕೊಂಡು ಯಿರುವನು. ಈ ದುಷ್ಟವಾದ ಮಾನಾಭಿಮಾನಗಳಿಂದ ನಿನಗೆ ಮೋಕ್ಷಬರಲಾರದೆಂದು, ಹೇಳುವಂಥಾ ಗುರುಗಳ ವಾಕ್ಯದಿಂದಲೂ, ಶೃತಿವಾಕ್ಯದಿಂದಲು, ಆ ಮಾನವನ್ನು, ಅಭಿಮಾನವನ್ನು, ಅಶೇಷ ವಾಸನಾಜನ್ಯ ಅನುರಾಗವನ್ನುಬಿಟ್ಟು, ಮೋಕ್ಷವನ್ನು ಕಾಪಾಡುವನು. ಆ ಮೋಕ್ಷದಲ್ಲಿ ತಾನು ಒಬ್ಬನೆ ಆನಂದಸ್ವರೂಪಿಯಾಗಿ ಯಿರುತ್ತಾ

ನಾಗಿ, ಆ ಸುಖವು ಯಾವ ಯಾವ ಅರ್ಥಂಗಳಲ್ಲಿಯು, ಯೆಂಥಾಅವಶ್ಯಕ
ರ್ತವ್ಯತೆ ಬಂದಾಗ್ಯು ಪ್ರತ್ಯಗಾತ್ಮನಾದ ತನ್ನನ್ನು ಬಿಟ್ಟರದಾಗಿ, ಸು
ಖವೇ ತಾನೆಂಬುದೆ ಸಿದ್ಧಾಂತವು. ಪೂರ್ವದಲ್ಲಿ ಹೇಳಿದ, ಯೆಂಟುವಿಧ ಆ
ನಂದಂಗಳು ಸೋಪಾಧಿಕಾನಂದಂಗಳೆಂಬಹಾಗೆ ತೋರುತ್ತಿಧೆಯಲ್ಲಾ,
ಹಾಗಲ್ಲ, ಕಲ್ಪಿತವಾದುದೇದುಃಖ, ಯತಾರ್ಥವಾದುದೇಸುಖ. ಅದುಹ್ಯಾ
ಗೆಅಂದರೆ. ಸಂತೋಷ ದುಃಖಗಳಿಲ್ಲದೆ ನಿಶ್ಚಲವಾಗಿ ರಜಸ್ತಮೋವೃತ್ತಿಗ
ಳಿಲ್ಲದಾಗ, ಸಾತ್ವೀಕ ವೃತ್ತಿಯೊಡನೆ ಕೂಡಿದಮನಸ್ಸಿನಲ್ಲಿಬ್ರಹ್ಮಾನಂದ
ವೆ ತೋರುತ್ತಲಿಧೆ. ಆದರ ಹಾಗೆ ಸಂಕಲ್ಪ ವಿಕಲ್ಪ ಭಾವವಾದ ಮನಸ್ಸಿ
ನಲ್ಲಿ ಕಲ್ಪಿತವಾದ ದುಃಖತೋರುವದಿಲ್ಲವಾಗಿ, ತನ್ನಲ್ಲಿ ಉಂಟಾದಂಥಾ
ಪ್ರೀತಿಯು, ಪ್ರೇಯಸಿಯೆನಿಸಿಕೊಂಬದು. ತನಗೆ ಅನುಕೂಲವಾದ ದ್ರ
ವ್ಯಂಗಳಲ್ಲಿರುವ ವಿಶ್ವಾಸವು ಯಾವದುಂಟೊ, ಅದು ಪ್ರೀತಿಯೆನಿಸಿಕೊಂಬು
ದು. ಮತ್ತು ಪ್ರೀತಿಪ್ರೇಯಸಿಗಳಾಗಿ, ದ್ವೇಷಮಾಡುವದಕ್ಕು, ಉಪೇಕ್ಷೆ
ಮಾಡುವದಕ್ಕು ಗೋಚರಗಳಾದಂಥಾ, ಹುಲಿಯಲ್ಲಿಯೂ, ಜೀರ್ಣವಾಗಿ
ಬಿದ್ದಿರುವಂಥಾ ತೃಣದಲ್ಲಿಯೂ, ಪ್ರೀತಿಬರುವದಿಲ್ಲ. ಹುಲಿ ಹುಲ್ಲು ಮೊದ
ಲಾದ ಪದಾರ್ಥಗಳಲ್ಲಿ ವಿಶ್ವಾಸಬಾರದೆಂಬುದಕ್ಕೆ ನಿಮಿತ್ತವೇನಂದರೆ,ಆ
ದರ ಶರೀರ ಮಾತ್ರ ನಿಯಾಮವಿಲ್ಲವು, ಇನ್ನೇನಂದರೆ, ವೃತ್ತಿನಿಯಾಮವೇ
ಸರಿ. ಆದೇನು ಕಾರಣವುಂದರೆ, ಹಾಗಾದರೆ ಕೇಳು ! ವ್ಯಾಘ್ರವು ಯೆದು
ರಾಗಿ ಬಂದರೆ ದ್ವೇಷ ಸಂಪಾದಿಸುವದಾಗುತ್ತಲಿಧೆ. ಆ ವ್ಯಾಘ್ರವೆ ವಾರೆ
ಯಾಗಿ ಹೋದರೆ, ಉದಾಸೀನವಾಗುತ್ತಲಿಧೆ. ಇಂಥಾ ಹುಲಿಯು ಸಂಣ
ಮರಿಯಿಂದ ಕಾಪಾಡಿಕೊಂಡು ಇದ್ದರೆ ಪ್ರೀತಿಗೆ ವಿಷಯವಾಗುತ್ತಲಿಧೆ.
ಈ ಹೇತುವಿನಿಂದ, (ಆತ್ಮಪ್ರೇಯಾರ್ಪ್ರಿಯಶ್ಶೇಷೋ ದ್ವೇಷ್ಯೋಪೇಕ್ಷ್ಯೌ
ತದನ್ಯಯೋಃ) ಯಂಬ ಯಾಜ್ಞವಲ್ಕ್ಯರುಷಿ ವಾಕ್ಯವಿಧೆಯಾಗಿ, ಹಾಗಂದ
ರೇನು, ಆತ್ಮಾ, ಪರಮಾತ್ಮನು, ಪ್ರೇಯಾರ್, ಪ್ರೇಮಉಳ್ಳಂಥಾವನು.
ಶೇಷಃ, ಮಿಕ್ಕಾದ ವಸ್ತುಗಳಲ್ಲಿಯಿರುವದು. ಪ್ರಿಯಃ, ಪ್ರೀತಿಯು, ತದ
ನ್ಯಯೋಃ, ಪೂರ್ವೋಕ್ತ ಶೇಷ ವಸ್ತುಗಳಿಗೆ, ಇತರವಾದವ್ಯಾಘ್ರವು, ಜೀ
ರ್ಣತೃಣವು, ದ್ವೇಷಕ್ಕೆ ಯೋಗ್ಯವು, ಉಪೇಕ್ಷಿಸುವದಕ್ಕೆ ಯೋಗವು

ಆಗುತ್ತಲಿದೆ, ಹಾಗಾದರೆ ಹಾಗೆ ಆಗಲಿ, ಸತ್ತಿನೊಡನೆ, ಚಿತ್ತಿನೊಡನೆ, ಈ ಆನಂದಕ್ಕೆ ಭೇದವುಂಟೋ ಯಿಲ್ಲವೊ॥ ...

ಕಂ॥ ಯೆಂದೆಂದಿಗಿಲ್ಲಹಾಲಿನೊ।ಳೊಂದಿದಮಧುರಾರ್ಜನದ್ರವತ್ವಂ ಗಳಿಗೇಂ।ಸ್ಪಂದತೆಯುಹುದೇಮೇಣಾ।ನಂದಕ್ಕೇಂಭೇದಮುಂಟೆಸಚ್ಚಿತ್ತುಗಳೊಳ್॥ ॥ಟೀ॥ ಭೂತ ಭವಿಷ್ಯದ್ವರ್ತಮಾನ ಕಾಲತ್ರಯಂಗಳಲ್ಲಿಯು ಕ್ಷೀರದಲ್ಲಿ ಹೊಂದಿಯಿರುವಂಥಾ ಮಧುರತ್ವವಾದ ರುಚಿಗು, ಶುಭ್ರತ್ವವರ್ಣಕ್ಕು, ರಸತ್ವರೂಪಲಕ್ಷಣಕ್ಕು, ಮೇಲೆ ಹೇಳಿದ ಮಧುರತ್ವ, ಶುಭ್ರತ್ವ, ರಸತ್ವಗಳಿಗೆ, ಕ್ಷೀರದಲ್ಲಿ ಬಿಡುಗಡೆಹ್ಯಾಗೆಯಿಲ್ಲವೊ ಹಾಗೆ, ಮತ್ತು ಸತ್ತುಚಿತ್ತುಗಳೆರಡರಲ್ಲಿಯೂ, ಆನಂದಕ್ಕೆ ಭೇದವುಂಟೆ, ಭೇದವಿಲ್ಲಾ॥

ಗೀತಾ॥ ಈ ನಿಜಾನಂದಮಖಿಲ ನಿದಾನಮೆಂಬಭೇದ ವಾಕ್ಯಂಗಳಿಂ ಬ್ರಹ್ಮಮಾದುದಕ್ಕೆ, ಸತ್ವಚಿತ್ವಸುಖಂಗಳೆ ಸಹಜ ಲಕ್ಷಣಂಗಳಿದು, ನಾನೆನಲ್ಕೆಮೋಕ್ಷಾಂಗಮಪ್ಪುದು॥ ॥ಟೀ॥ (ಆನಂದಾದ್ದೇವಖಲ್ವಿಮಾನಿ ಭೂತಾನಿಜಾಯಂತೆ ಆನಂದೇನ ಜಾತಾನಿ ಜೀವಂತಿ ಆನಂದಮೇವ ಅಭಿಸಂವಿಶಂತಿ) ಯೆಂಬ ಶೃತ್ಯಾರ್ಥಾನುಸಾರವಾಗಿ ಹೇಳುತ್ತಿದ್ದಾನೆ. ಈ ಪೂರ್ವೋಕ್ತವಾದ ಯತಾರ್ಥವಾಗಿಯಿರುವ ಬ್ರಹ್ಮಾನಂದವೆ, ಸಮಸ್ತವಾದ ಸ್ಥಾವರ ಜಂಗಮಾತ್ಮಕವಾದ ಜಗತ್ತಿಗೆ, ಆದಿಕಾರಣವೆಂಬ ವೇದವಾಕ್ಯಗಳಿಂದ ಹೇಳಲ್ಪಟ್ಟ ಅರ್ಥದಿಂದ ಬ್ರಹ್ಮಸ್ವರೂಪವಾದ ಆನಂದಕ್ಕೆ. ಇರೋಣ ಅನ್ನುವದನ್ನು, ಅರಿಯೋಣ ಅನ್ನುವದನ್ನು ಆನಂದವೆಂಬೋಣ ಅನ್ನುವದನ್ನು, ಸ್ವಭಾವಲಕ್ಷಣಗಳು. ಪ್ರತ್ಯಕ್ಷಾನುಭವಸಿದ್ಧವಾದಂಥಾವಸ್ತುವೆ, ನಾನುಯೆಂದು ತಿಳಿದರೆ ಅಜ್ಞಾನನಿವೃತ್ತಿಯಾಗಿಮೋಕ್ಷವಾಗತ್ತೆ॥ ... ...

ವ॥ ಇಂಥಾನಂದಭಾವ ಪದ್ಧತಿಯುಂ, ಶ್ರೋತ್ರ ದೇಶಜನ್ಯಂ ಗೈದಿನ್ನೊಂದು ಪ್ರಕಾರ ಪೇಳುತ್ತಿರ್ದಪನದೆಂತೆನೆ ॥ಟೀ॥ ಈ ಪ್ರಕಾರವಾಗಿ ಆನಂದ ಸ್ವಭಾವ ಮಾರ್ಗವನ್ನು, ಕರ್ಮೇಂದ್ರಿಯಕ್ಕೆ ತಿಳಿಯುವ

ಹಾಗೆ ಹೇಳಿ, ಇನ್ನೊಂದು ರೀತಿಯಾಗಿ ಹೇಳುತ್ತಲಿದ್ದಾನೆ. ಅದುಹ್ಯಾಗೆಅಂದರೇ ... ...

ಗದ್ಯ॥ ಇತಿ ಶ್ರೀವೀತ್ಸಮಸ್ತ ತತ್ವ ತಾತ್ವಿಕವಿಚಾರ
ಪಾರೀಣಶಾಲ್ಯ ಕ್ಷಿತಿಪಾಲ ಕೃಷ್ಣಪ್ರಭುವಿರಚಿತ
ಮಾದ ನಿಜದೀಪಿಕಾರತ್ನಗ್ರಂಥದೊಳ್
ಆನಂದರೂಪು ವಿಚಾರಲಕ್ಷಣ ವಿಕಾ
ದಶೋಧ್ಯಾಯ ಸಂಪೂರ್ಣಂ॥

ಇತಿ ಪದ್ಧತಿ ೧೧ ಆನಂದರೂಪು ವಿಚಾರಪದ್ಧತಿ ಪೇಳಿದಿಲ್ಲಿಗೆ ಮಂಗಳ.

## ೧೨ ನಿತ್ಯಭಾವ ವಿಚಾರ ಪದ್ಧತಿ ಪ್ರಾರಂಭವು.

ಮೂಲ॥ ತ್ರಿಪುಡೆ॥ ಮೂಲಕಾರಣವೆನಿಪ ವಿದ್ಯೆಯ । ಮೊಳೆಯಯೂದ ಮಹತ್ವಮೇವಾ । ತೂಲಪಥವಾಯ್ವನಲಕೀಲಾಜ್ವಾಲದಲ್ಲಿ ॥
॥ಟೀ॥ ಈ ಪ್ರಪಂಚಕ್ಕೆ ಆದಿಕಾಲದಲ್ಲಿ ಹೇತುವೆನಿಸಿಕೊಂಬುವ, ಆಜ್ಞಾನದ ಮೊಳಕೆಯಾಗಿರುವ ಮಹಾತತ್ವವೆ, ಆಕಾಶಾದಿ ಪಂಚಭೂತಗಳ ಸಮೂಹದಲ್ಲಿ॥ ... ॥೧॥

ಇರುತಿರಲ್ಕೀಯೆಳರಿಂ ಪ್ರಸ್ಫುರಿಸಿದಂಡ ಸಹಸ್ರಗಳುಮವ । ರುರುತರದಿ ವರ್ತಿಸುವ ಭೂತಗ್ರಾಮತತಿಯುಂ ॥ಟೀ॥ ಈ ಪೂರ್ವೋಕ್ತವಾದ ಸಪ್ತಾವರಣಗಳು ಇರುತ್ತಾ ಇರಲಾಗಿ, ಈ ಸಪ್ತಾವರಣಗಳಿಂದಲೆ, ಪ್ರಕಾಶಿಸುತ್ತಲಿರುವ ಬ್ರಹ್ಮಾಂಡ ಸಹಸ್ರಗಳೆಂಬವು. ಬ್ರಹ್ಮಾಂಡಗಳ ಪದರಗಳಲ್ಲಿಇರುವಂಥಾ, ಜೀವರುಗಳ ಸಮೂಹಸಂತತಿಯನ್ನು ॥೨॥
ವಿಷಯ ಭೋಗ ನಿಮಿತ್ತವಾಗಿಹ ವಿವರಗಳು ಮವರ್ಕಳಾಯಾ । ವಿ

ಪಯುರಾಸಿ ಗ್ರಹಣ ಸಾಧನವೆನಿಪ ಜಗವುಂ ||ಟೀ|| ಆ ಜೀವರುಗೆ ಳಿಗೆ ವಿಷಯಾನುಭವ ನಿಮಿತ್ತವಾಗಿ ಇರುವ ವಿಲಾಸಗಳನ್ನು, ಆ ಜೀವ ರುಗಳ ಇಂದ್ರಿಯ ವಿಷಯಗಳ ಸಮೂಹದಿಂದ ಗ್ರಹಿಸುವದಕ್ಕೆ ಯೋ ಗ್ಯವಾದ ಜಗತ್ತನ್ನು ... ||೩||

ಕಾಲಪುರುಷಾಧೀನವಾಗಿಯೆ ಕನಸಿನಲಿ ಕಾಣಿಸಿದ ನಗರಜ । ನಾ ಳಿಯಂದದಿ ಶಿಥಿಲ ಬಲದಿಂ ನಷ್ಟವಹುದು ||ಟೀ|| ಪ್ರಕೃತಿ ಪ್ರಳಯ ಕಾಲವೆಂಬ ಪುರುಷನಿಗೆ ಸ್ವಾಧೀನವಾಗಿ ಇರುವದ್ದರಿಂದ, ಸ್ವಪ್ನದಲ್ಲಿ ಕಂಡಂಥಾ ಪಟ್ಟಣದ ಹಾಗೆಯು, ಆ ಪಟ್ಟಣದಲ್ಲಿ ಇರುವ ಜನಸಮೂ ಹದ ಹಾಗೆಯೂ, ಹೋದ ಬಲವುಳ್ಳಂಥಾದ್ದಾದ್ದರಿಂದ, ನಷ್ಟವಾಗಿ ಹೋಗುತ್ತಾ ಇಧೆ|| ... ||೪||

ಕಾಲಶಕ್ತಿ ಯಿದಕ್ಕೆ ಜೀವಿತಕಾಲ ದುರ್ಬಲವಿವರಳಿಯುತ । ತ್ಕಾ ಲ ಭೂತಬಲಿಗಳಿ ವಿವರಿಂ ಶೀಲವೇನು ||ಟೀ|| ಕಾಲಶಕ್ತಿಯಾದ ಅ ದೃಷ್ಟಕಾಲದ ಬಲವುಂಟೋ, ಈ ಪೂರ್ವೋಕ್ತವಾದ ಪದಾರ್ಥಗಳಿ ಗೆ, ಆಯುಃಪರಿಮಿತ ಬದುಕೋಕಾಲವು, ಬಲರಹಿತಗಳಾದ ಈ ಪದಾ ರ್ಥಗಳನಾಶವು, ಪದಾರ್ಥನಾಶಕಾಲವೆಂಬ ಪಿಶಾಚಕ್ಕೆ ತೃಪ್ತಿಕರವಾದ ಬಲ್ಯಾರ್ಥಂನಗಳು, ಇವರನಾಶ ಸ್ವಭಾವ ಯೇನು ಹೇಳತಕ್ಕದ್ದುಯಿಧೆ||

ಇಲ್ಲವಾದುದರಿಂದರಿವು ತೋರ್ಪಲ್ಲಿಯುಂ ತೋರದ ದೆಶೆಯೊಳುಂ । ಉಳ್ಳ ಚಿತ್ಪ್ರಮದಂಗಳೇ ಸತತೋದಯುವನೂ ||ಟೀ|| ಈ ಪದಾ ರ್ಥಗಳು ಉಂಟುಯಂದು ತಿಳಿದಾಗಲು, ಇಲ್ಲಾಯಂದು ತಿಳಿದಾಗಲು, ಇರುವಂಥಾ ಸತ್ತು, ಚಿತ್ತು, ಆನಂದಗಳೆ, ಕಾಲತ್ರಯದಲ್ಲಿಯು ಪ್ರಕಾ ಶವನು ... ||೬||

ಸಾರಿರುವದು ನಿಸರ್ಗಲಕ್ಷಣ ಸತ್ವಮುಳ್ಳಾ ತ್ರಿವಿಧದಿಂದದು । ತೋರುತಿಹುದವಿಭೇದ ಮದುನೀಂ ದೋಷಶೂನ್ಯಂ ||ಟೀ|| ಹೊಂ ದಿ ಇರುವದು ಸ್ವಭಾವ ಲಕ್ಷಣ ಬಲವುಳ್ಳ ಸತ್ವ ಚಿತ್ವ ಆನಂದವೆಂಬ ಮೂರು ವಿಧದಿಂದ ತೋರುತ್ತಾ ಇರುವದು ಯಾವ ಆತ್ಮ ಸ್ವರೂಪ ವೋ, ಅದುಯರಡಿಲ್ಲದೆ ಇರುವದು. ಅಂಥಾ ದೋಷರಹಿತವಾದ ಆ

ವಾಗಿ ಕಾಣದಹಾಗೆ ಮಾಡುತ್ತಾ ಇದ್ದಾಳೆ. ಪರೋಕ್ಷವಾಗಿ ಕಾಣದೆ ಇರುವ ವಸ್ತುವನ್ನು ಪ್ರತ್ಯಕ್ಷವಾಗಿ ಕಾಣುವಹಾಗೆ ಮಾಡುತ್ತಾ ಇದ್ದಾಳೆ. ಈ ಮಾಯೆ ಸ್ವತಂತ್ರವಾಗಿ ದೊಡ್ಡದಾಗಿ ನೋಡಲಾಗಿ ಹೀಗೆ ಮಾಡುತ್ತಾ ಇದ್ದಾಳೆ ಆ ಮಾಯೆಗೆ ಲಘುತ್ವ ಪ್ರಾಪ್ತವಾದ ಕಾಲದಲ್ಲಿ ||೭||

ಗೌರವಮತಿಯು ಪುಟ್ಟಪುದು ಗೌರವಕಾಲ । ಪ್ರಾರಂಭಿಸಿರಲಲ್ಪಮತಿಯು ॥ ಸಾರಿಸುವುದು ಮಾಯೆ ವಿಸ್ಮಯ ಪ್ರಥಮಶ । ರೀರಿಣಿಯೆನಿಸಿ ಪೇಳುವರೂ॥ ||ಟೀ|| ಅಧಿಕವಾದ ಬುದ್ಧಿಯನ್ನು ಹುಟ್ಟಿಸುತ್ತಾಯಿದ್ದಾಳೆ. ಗೌರವಕಾಲವನ್ನು ಪ್ರಾರಂಭಿಸುತ್ತಯಿರಲಾಗಿ, ಗುರುತ್ವಬುದ್ಧಿಯನ್ನು ಹುಟ್ಟಿಸುತ್ತಲಿದ್ದಾಳೆ. ಆದ್ದರಿಂದ, ಅಘಟಿತ ಘಟನಾಸಾಮರ್ಥ್ಯವುಳ್ಳ ಈ ಮಾಯೆ! ಸಕಲಕಾರ್ಯಗಳಿಗು ಮೊದಲಾದ ಶರೀರವುಳ್ಳಂಥಾವಳೆಂದು, ತಿಳಿದವರು ಹೇಳುತ್ತಲಿದ್ದಾರೆ॥ ||೮||

ವಾಸ್ತವಿಯೆಂದನಿರ್ವಚನೀಯೆಯೆಂದುನಿ। ರಸ್ತದೋಷರುತುಚ್ಛೆಯೆಂದು ॥ನ್ಯಸ್ತವಾಗಿರುವ ಯೌಕ್ತಿಕಲೌಕ್ಯನೈಗಮ। ಶಸ್ತಕರಣದಿತ್ರಿವಿಧದಿಂ॥ ||ಟೀ|| ಯಥಾರ್ಥವಾಗಿ ಯಿರುವಂಥಾವಳೆಂದುನ್ನು, ಹೀಗೆ ಇದ್ದಾಳೆ ಹಾಗೆ ಇದ್ದಾಳೆಂದು ಹೇಳಕೂಡದೆ ಇರುವವಳೆಂದುನ್ನು, ಇಲ್ಲದಂಥಾವಳೆಂದುನ್ನು, ಯಿರಿಸಲ್ಪಟ್ಟಂಥಾದ್ದಾಗಿರುವ ಯುಕ್ತಿಸಂಬಂಧಜ್ಞಾನದಿಂದಲೂ, ಲೋಕದಲ್ಲಿಯಿರುವ ಜನರ ಸಂಬಂಧಜ್ಞಾನದಿಂದಲೂ, ಶ್ರುತಿಸಂಬಂಧವಾದ ಜ್ಞಾನವೆಂಬ ತ್ರಿವಿಧಕಾರಣದಿಂದಲೂ ಹೋಗಾಡಿಸಲ್ಪಟ್ಟ ದೋಷವುಳ್ಳಂಥಾ ಆತ್ಮನಿಷ್ಠರು ಹೇಳುತ್ತಾರೆ॥ ... ... ||೯||

ಒಮ್ಮೆ ತೋರಿಸುವಳು ಸಕಲಲೋಕಗಳವ । ತೊಮ್ಮೆ ಮರಸುವಳು ಮಾಯೆ॥ಹಮ್ಮಿದ ಚಿತ್ರಪಟದಪ್ರಸರಣದಂತೆ। ಕೆಮ್ಮದ ಸಂಕೋಚದಂತೆ॥

||ಟೀ|| ಪೂರ್ವದಲ್ಲಿ ಹೇಳಿದಂಥಾ ಮಾಯೆಯು, ಚತುರ್ದಶಭುವನಂಗಳನ್ನು ಒಂದುಕಾಲದಲ್ಲಿ ತೋರಿಸುವಳು, ಮತ್ತೊಂದುಕಾಲದಲ್ಲಿ ಮರೆಮಾಡುತ್ತಾಯಿದ್ದಾಳೆ. ಅದು ಹ್ಯಾಗೆ ಅಂದರೆ, ಬಿಚ್ಚಿದ ಚಿತ್ರಪಟಹಾಸಿದಂತೆಯೂ, ಬಿಚ್ಚದೆ ಸುತ್ತಿಯಿರಿಸಿದ ಚಿತ್ರಪಟದಹಾಗೆಯೂ ತೋರಿಸುತ್ತಲಿದ್ದಾಳೆ॥ ... ... ||೧೦||

ಚಿತ್ತನುಬಿಟ್ಟುತೋರದದೆಸೆಯಿಂಜ್ಞಾನ।ವೃತ್ತಿಯಿಂದನ್ಯದಾಕೃತಿಯ॥
ಚಿತ್ತಿಗೆಪ್ಪೊಂದಿಸಿದತ್ತಣಿಂಮಾಯೆಯೆಂ।ದುತ್ತಮರೆಂಬರಿಂತೆಂದು॥

॥ಟೀ॥ ಅರಿವನ್ನು ಬಿಟ್ಟು ತಾನು ತೋರದೆಇದ್ದದ್ದರಿಂದ, ಅನೇಕವಿವಾದವ್ಯಾಪಾರದಿಂದ ಅನ್ಯೋಂದಾದಂಥಾ ರೂಪವನ್ನು ಚಿತ್ಸ್ವರೂಪಕ್ಕೆಹೊಂದಿಸಿದ್ದರಿಂದ ಅದೇ ಮಾಯೆಯೆಂದು ತಿಳಿದಂಥಾವರು ಹೇಳುತ್ತಲಿದ್ದಾರೆ॥ ... ... ... ॥೧೧॥

ಅನಿಜತಂತ್ರೆಯುನಿಜತಂತ್ರೆಯೆಂದಾವು। ದನೆನುಗವಿಸದಕೂಟಸ್ಥನನು॥ ಘನನಾದಸಂಗನಾದಾತ್ಮನಪ್ಪೊಂದಿಭು।ವನರೂಪವನುಮಾಡಿದುದಲೈ॥ ॥ಟೀ॥ ಅಬದ್ಧವಾದ ಕಾರ್ಯವುಳ್ಳಂಥಾವಳಾಗಿಯೂ, ನಿಜವಾದ ಕಾರ್ಯವುಳ್ಳಂಥಾವಳಾಗಿಯೂ ಇದ್ದದ್ದರಿಂದ ಯಾವ ಪದಾರ್ಥವನ್ನು ಹೊಂದದೆ ಅಡಿಗಲ್ಲಿನೋಪಾಧಿಯಲ್ಲಿಯಿರುವ ಕೂಟಸ್ಥನಾದಂಥಾವನನ್ನು ಅಖಂಡವಾದ ನಿಸ್ಸಂಗನಾದ ಆತ್ಮಸ್ವರೂಪವನ್ನು ತಾನುಹೊಂದಿ ಹದಿನಾಲ್ಕುಲೋಕಂಗಳನ್ನು ಮಾಡಿದಂಥಾವಳಾದಳೈಯ್ಯ ಇನ್ನುಯೇನುಮಾಡಿದಳು ಅಂದರೆ॥ ... ... ॥೧೨॥

ತಾನೆಚಿದಾಭಾಸರೂಪದಿಂದಪೆಜೀವೇ।ಶಾನರಗೈದಮಾಯೆಯುಲಿ॥ಯೇನೊಂದನರಸಲುಂಟೇದುರ್ಘಟೈಕ್ಯವಿದಾನವತಿಯೆಮಾಯೆಯಕ್ಕು॥

॥ಟೀ॥ ಮಾಯೆಯೆ ಚಿತ್ತಿನ ಪ್ರತಿಬಿಂಬಸ್ವರೂಪವಾಗಿ ಜೀವನೆನ್ನು ಈಶ್ವರನನ್ನುಮಾಡಿದ ಮಾಯಾಸ್ವರೂಪದಲ್ಲಿ ಯೇನೊಂದುಕಾರ್ಯವು, ಯಿದು ಆಗುತ್ತಯಿದೆ ಯಿದುಆಗುವದಿಲ್ಲಯೆಂದು ಹುಡುಕುವದಕ್ಕೆ ಉಂಟೆ. ದುರ್ಘಟವಾದಂಥಾಕೆಲಸವನ್ನು ಘಟನೆಆಗುವಹಾಗೆ ಮುಖ್ಯವಾಗಿ ಮಾಡುವಂಥಾವಳು ಮಾಯೆಯಾಗುತ್ತಿದ್ದಾಳೆ॥ ॥೧೩॥

ಇವಳಕಲ್ಪನೆಯೆಬ್ರಹ್ಮದೊಳಧ್ಯಾರೋಪಮು। ತ್ತಿವಳುತ್ಸರ್ಜನಮಪವಾದ॥ಇವಳೆಜೀವಜ್ಞಾನಾಚಿಹ್ನದಕಳಾಗೆಸಂ।ಭವಿಪ್ರದುತಮವಂಬನಾವು॥

॥ಟೀ॥ ಈ ಮಾಯಾಕಲ್ಪನೆ ಯಾವದುಂಟೋ! ಅದೇ ಬ್ರಹ್ಮದಲ್ಲಿ ಅಧ್ಯಾರೋಪವು ಈ ಮಾಯೆಯೆಇಲ್ಲ ಅಬದ್ಧವೆಂದುತಿಳಿದುದೆ ಮಾಯೆಯು

ಅಧ್ಯಾರೋಪವಿಸರ್ಜನೆ, ಈ ಮಾಯೆಯು ಜೀವಯೆಂಬ ಜ್ಞಾನವನ್ನು ಮರೆಸುವಳು ಯಾವಾಗ ಆಗುತ್ತಾಯಿದ್ದಾಳೋ ಆಕಾಲದಲ್ಲಿ ತಮಸ್ಸುಯೆಂಬ ನಾಮಧೇಯುಹುಟ್ಟುತ್ತಲಿಧೆ॥ ... ... ॥೧೪॥

ಜಗದರೂಪಾಗಿತನ್ನೊಳಗಿರ್ದಚೈತನ್ಯ।ನಿಗರಣಮೆಸಗದವಸ್ತು॥ಮಿಗೆವಶಮಾಗಿರ್ಪಕಾಲದಿಮಾಯೆಯೆಂ।ದಗಲದಪೆಸರಿಂದೊಪ್ಪುವಳು॥

॥ಟೀ॥ ಪ್ರಪಂಚಸ್ವರೂಪವಾಗಿ ಮಾಯೆಯಾದ ತನ್ನೊಳಗೆಬಿಡುಗಡೆಯಿಲ್ಲದೆಯಿರುವ ಬ್ರಹ್ಮಸ್ವರೂಪವಾದ ವಸ್ತುವು, ಮಿಗಿಲಾಗಿ ತನ್ನಲ್ಲಿ ಪ್ರತಿಬಿಂಬಿಸಿದ ಕಾಲದಲ್ಲಿ ಮಾಯೆಯೆಂದು ಬಿಡುಗಡೆಯಿಲ್ಲದ ಹೆಸರಿನಿಂದ ಪ್ರಕಾಶಿಸುತ್ತಲಿದ್ದಾಳೆ॥ ... ... ॥೧೫॥

ಇಂತಿಹಮಾಯೆಯುಗೆಲವುಭುವನದಲಿ।ಜಂತುಗಳಿಗೆಸಿದ್ಧಿಸುವುದು॥ಯೆಂತೆನಲೀಮಾಯೆಯುಸಠಮಾರ್ಥತೆ।ಯೆಂತಮೆಶಾಸ್ತ್ರದಿಂದಹುದು॥

॥ಟೀ॥ ಹೀಗಿರುವಂಥಾಮಾಯಾಸ್ವರೂಪದ ಜಯುವು ಭೂಲೋಕದಲ್ಲಿ ಜೀವರುಗಳಿಗೆ ಪ್ರಾಪ್ತವಾಗುತ್ತಲಿಧೆ. ಹ್ಯಾಗೆಅಂದರೆ ಈ ಮಾಯೆಯು ಯಥಾರ್ಥತ್ವಕ್ಕೆ ಕಡೆಗಾಲವು ಶಾಸ್ತ್ರವಿಚಾರದಿಂದಲೆ ಆಗುತ್ತಲಿಧೆ॥ ... ... ॥೧೬॥

ಇವಳಕಾರ್ಯಪ್ರಾಮತ್ವವೆಪ್ರತ್ಯಕ್ಷಾತ್ಮನು।ಭವದಿಂಕೆಡುವುದುತೋರಿಕೆಯು॥ಇವಳದೆಂತಳಿವುದೆಂದರೆಪ್ರಾರಬ್ಧಾಂತದಿಂ।ದವೆಸಿದ್ಧಿಸುವುದುಚನ್ನಾಗಿ॥ ॥ಟೀ॥ ಈಮಾಯೆ ಸಂಬಂಧಕಾರ್ಯಗಳ ಮಾಡೋಣದರಲ್ಲಿ ಸಹಿಸುವ ಇಚ್ಛೆಯು ಪ್ರತ್ಯಕ್ಷವಾದ ಬ್ರಹ್ಮಾನುಭವದಿಂದ ನಶಿಸಿಹೋಗುತ್ತಲಿಧೆ. ಈ ಮಾಯೆಯು ಕಾಣುವಣಹ್ಯಾಗೆ ಹೋಗುತ್ತಲಿಧೆಅಂದರೆ ಕರ್ಮದಿಂದ ಹುಟ್ಟಿದ ದೇಹಾಂತ್ಯಕಾಲದಲ್ಲಿ ಚನ್ನಾಗಿಸಿದ್ಧಿಸುತ್ತಲಿಧೆ॥೧೭॥

ಕರ್ಮಫಲವುತುಚ್ಛಜ್ಞಾನಫಲನಮೋಘ।ಕರ್ಮಸಾಧ್ಯವದೇನಶ್ವರವು॥ನಿರ್ಮಲಜ್ಞಾನಸಾಧ್ಯವನಿತ್ಯವೆಂದುನಿ।ಷ್ಕರ್ಮಕಾಮರುಪೇಳುತಿಹರು॥

॥ಟೀ॥ ಕರ್ಮದಿಂದ ಆಗುವಂಥಾ ಫಲವು ಅಬದ್ಧವಾದಂಥಾದ್ದು. ಜ್ಞಾನದಿಂದ ಆಗುವಂಥಾ ಫಲವು ಯಾವದುಂಟೊ ಅದು ವ್ಯರ್ಥವಾಗುವದಿಲ್ಲ. ಕರ್ಮದಿಂದ ಸಾಧಿಸಲ್ಪಟ್ಟಂಥಾ ಸ್ವರ್ಗಾದಿ ಭೋಗ ಫಲನಾಶವಾ

ಗಿ ಹೋಗುತ್ತಲಿಥೆ. ಮಲರಹಿತವಾದ ಜ್ಞಾನದಿಂದ ತಿಳಿದುಕೊಂಡಂಥಾ ಜ್ಞಾನಸ್ವರೂಪ ಫಲವು ಭೂತಭವಿಷ್ಯದ್ವರ್ತಮಾನ ಕಾಲತ್ರಯದಲ್ಲಿ ಯೂ ಶಾಶ್ವತವಾಗಿ ಇರುತ್ತಲಿಥೆ ಯೆಂದು ಕರ್ಮಾಪೇಕ್ಷೆಯಿಲ್ಲದ ಜ್ಞಾನ ಸ್ವರೂಪಾನುಭವ ಉಳ್ಳಂಥಾವರು ಹೇಳುತ್ತಲಿದ್ದಾರೆ॥ ॥೧೮॥

ಪಿರಿಯರು ಭೇದಕ್ಕೆ ಮಿಥ್ಯತ್ವ ಮಳವಟ್ಟ । ಕರಣದಿಂದಲೆ ಚೈತನ್ಯ ಕ್ಕೆ ॥ ಯರಡಿಲ್ಲವೆಂದು ತಿಳಿದರಿದುದುಸ್ತರ್ಕ ।ಪರರಿಂದ ಆರ್ಯವಾಗಿಹು ದು ॥೬೪॥ ದೊಡ್ಡವರಾದಂಥಾವರು ಯರಡೆಂಬುವ ಭೇದಕ್ಕೆ ಅಬ ದ್ಧತ್ವ ತಿಳಿದಕಾರಣದಿಂದಲೇ,ಸಜಾತೀಯ ವಿಜಾತೀಯ ಸ್ವಗತಭೇದರಹಿ ತವಾದ ಒಂದೆಯಾದ ಬ್ರಹ್ಮಸ್ವರೂಪಕ್ಕೆ ಯರಡನೆ ಪದಾರ್ಥವಿಲ್ಲವೆಂ ದು ಆರಿತರೆ, ಯಿದುದುಷ್ಟವಾದ ಯುಕ್ತಿಗಳ ಹೇಳುವದರಲ್ಲಿ ಆಸಕ್ತರಾ ದವರುಗಳಿಂದ ಅಪಹರಿಸುವದಕ್ಕೆ ಅಶಕ್ಯವಾಗಿ ಇರುತ್ತಲಿಥೆ ॥೧೯॥

ಭೇದವಿಲ್ಲದುದೆ ನಿತ್ಯವು ನಿತ್ಯವೆನಿಸುವ । ದಾದುದು ಸುಖವಾಸು ಖವೆ ॥ ಆದುದುಚಿತ್ತು ಚಿತ್ತೇ ಸತ್ಪದಾರ್ಥವೆಂ । ದಾಧರಿಸದುದೆ ನಾ ನೆಂದು ॥೬೫॥ ಯರಡಿಲ್ಲದೆ ಇರುವವಸ್ತುವೆ ಪರಿಪೂರ್ಣವು. ಪರಿಪೂ ರ್ಣವೆ ನಿತ್ಯವಾಗಿ ಯೆಲ್ಲಾ ಕಾಲದಲ್ಲಿಯೂ ಇರುವದು. ನಿತ್ಯವಾಗಿರುವ ಪ ದಾರ್ಥವು ಯೆಂದು ಯಾವ ವಸ್ತುವನಿಸಿಕೊಳ್ಳುತ್ತಾಯಿಥೆಯೋ ಆವಸ್ತು ವೇ ಆನಂದಸ್ವರೂಪವು. ಆ ಆನಂದಸ್ವರೂಪವೆ ಯೆಲ್ಲಾ ಪದಾರ್ಥಂಗಳ ನ್ನು ತಿಳಿಯುತ್ತಲಿರುವಂಥಾ ಸಾಕ್ಷಿಯಾದ ಚಿತ್ಸ್ವರೂಪವು. ಅಜ್ಞಾನಸ್ವ ರೂಪವಾದ ಚಿತ್ತೇ ಸದ್ರೂಪವಾದಂಥಾ ವಸ್ತುವೆಂದು ತಿಳಿದುಕೊ.ಆ ಆಸದ್ವಸ್ತುವಾದ ಬ್ರಹ್ಮವೆನಾನೆಂದು ಅರಿತುಕೊಳ್ಳಯ್ಯ ಮನಃ ಪ್ರಭುವೆ॥ ... ... ॥೨೦॥

ಮೂ॥ ವ॥ ಇಂತೆಂದುನಿತ್ಯಭಾವಪದ್ಧತಿಯಂಪ್ರತಿಶ್ರವಿಪಂತೆಮಾಡಿಇ ನ್ನೊಂದುಪ್ರಕಾರಮಂಪೇಳುತ್ತಿರ್ದಪನದೆಂತೆನೆ ॥೬೬॥ ಈಪ್ರಕಾರ ವಾಗಿ ನಿತ್ಯಸ್ವರೂಪ ಪದ್ಧತಿಯಂನು ಚಂನಾಗಿ ಕೇಳುವಹಾಗೆ ಮಾಡಿ

ಇಂನೊಂದು ಮಾರ್ಗವಾಗಿ ಹೇಳುತ್ತಲಿದ್ದಾನೆ. ಅದುಹ್ಯಾಗೆಅಂದರೆ-

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕವಿ
ಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣಪ್ರಭು
ವಿರಚಿತಮಾದ ನಿಜದೀಪಿಕಾ ರತ್ನಗ್ರಂಥ
ದಲ್ಲಿ ಪದ್ಧತಿ ೧೨ ಕ್ಕಂ ನಿತ್ಯಸ್ವರೂ
ಪ ಲಕ್ಷಣ ಸಂಪೂರ್ಣಂ॥

(ಇತಿಪದ್ಧತಿ ೧೨ ನಿತ್ಯಸ್ವರೂಪಲಕ್ಷಣ ಪೇಳಿದಿಲ್ಲಿಗೆ ಮಂಗಳಂ)

---

## ೧೩. ಪರಿಪೂರ್ಣಭಾವ ಪದ್ಧತಿ ಪ್ರಾರಂಭವು.

---

ಮೂ॥ ಜಂಪೆ॥ ದಿಕ್ಕಿನೊಳಗಿಹವೈಭವಕ್ಕೆಚಂದ್ರಾರ್ಕರೆ। ಪಕ್ಕವಾಗಿಹರಭ್ರಪಟಲಮೇತೋರ್ಕುರ್ಣಂ॥ ॥ಟೀ॥ ಈದಿಕ್ಕು ಇದುಯೆಂದು ತಿಳಿಯುವದಕ್ಕೆ ಚಂದ್ರಸೂರ್ಯರೆ ಗುರುತಾಗಿ ಯಿರುತ್ತಲಿದ್ದಾರೆ.ಚಂದ್ರಸೂರ್ಯರು ಇಲ್ಲದೆಯಿದ್ದರೆ ಇದು ಪೂರ್ವ, ಇದು ಪಶ್ಚಿಮ, ಇದು ಉತ್ತರ, ಇದು ದಕ್ಷಿಣ, ಯಂಬುದುತಿಳಿಯಲೀಸದೆ, ಮೇಘಸಮೂಹವೆ ಕಾಣುತ್ತಲಿಧೆ॥ ... ... ... ॥೧॥

ಅಂಡವಿರುವನ್ನು ಬರಅಜನಕಾಲದವಿಭುವ। ಕಂಡಿಹುದುಶಾರೀರಕಾನಿಲಬಲವನೂ॥ ॥ಟೀ॥ ಬ್ರಂಹ್ಮಾಂಡವಿರುವ ಪರಿಯಂತರವು ಚತುರ್ಮುಖಬ್ರಹ್ಮನ ಆಯುಃ ಪರಿಮಿತಕಾಲವ್ಯಾಪಕತ್ವನ್ನು. ಶರೀರದಲ್ಲಿಯಿರುವ ಪ್ರಾಣವಾಯುವಿನ ಬಲವನ್ನು ಹೊಂದಿಯಿರುತ್ತಲಿಧೆ॥ ॥೨॥

ಮಿಕ್ಕಭೂತವ್ರಜವದಿಕ್ಕಿನೊಳ್ಕೌತುಕಂ। ದಿಕ್ಕಿರುವುದಲ್ಲದನಿದಾನಿಸಲು ಪೂರ್ತಿ॥ ॥ಟೀ॥ ಮಿಕ್ಕಾದ ಐದುಭೂತಗಳ ಗುಂಪಿನಲ್ಲಿ ಸಂತೋಷವುಯಿಲ್ಲದೆ ಯಿರುವದಲ್ಲದೆ ವಿಚಾರಿಸಿದರೆ ಪರಿಪೂರ್ಣತ್ವವಿಲ್ಲ॥ ॥೩॥

ಯೆಡೆಗೊಳಿದಸಮ್ಮುಖದೊಳೆಣಿಕೆಗೊಂಡಿಹನಿಜವ। ಪಿಡಿದಿಹುದಭೇದಮೆಂಕಡೆಮೊದಲೆಸೆಯದೆ॥ ॥ಟೀ॥ ಸ್ಖಳಬಿಡುವಿಲ್ಲದೆ ಪ್ರತ್ಯಕ್ಷವಾಗಿ ಕಾಣಿಸುವಿಕೆಗೆಬಂದುಯಿರುವಂಥಾ ಯಥಾರ್ಥಸ್ವರೂಪವಾದ ಬ್ರಹ್ಮವು ಭೇದವಿಲ್ಲದೆ ಯಿರೋಣವನ್ನು ಹೊಂದಿಯಿರುತ್ತಲಿಧೆ॥ ॥೪॥

ಕೂಡಿವರೊಡನೆಕೆಡದುಕೂಡದಗಲದುಚರಿಸ। ದೀಡಿರಿದಿಹುದನೆನಾನೆಂದುನಿಶ್ಚೈಸು॥ ॥ಟೀ॥ ಈ ಭೂತ ಭೌತಿಕಂಗಳೊಡನೆ ಕೂಡಿಇದ್ದಾಗ್ಯೂ, ಈ ಭೂತಭೌತಿಕಂಗಳು ನಾಶಹೊಂದಿದಾಗ್ಯೂ ಆ ನಿಜವಾದ ವಸ್ತು ನಾಶ ಹೊಂದುವದಲ್ಲವಾದ್ದರಿಂದ ಈ ತತ್ವಗಳೊಡನೆ ಸೇರಿಬಿಡುಗಡೆಹೊಂದುವದಲ್ಲ. ಚಲನವಾಗುವದುಯಿಲ್ಲ. ಆದಕ್ಕೆ ಸಮಾನವು ಅಧಿಕವುಯೆಂಬ ಯೆರಡಿಲ್ಲದೆ ಯಿರುವಂಥಾ ಬ್ರಹ್ಮಸ್ವರೂಪ ಯಾವದುಂಟೋ, ಅದೇನಾನೆಂದು ತಿಳಿದುಕೊ॥ ... ... ॥೫॥

ವ॥ ಇದರಲ್ಲಿ ಸ್ವಗತ ಸಜಾತೀಯ ವಿಜಾತೀಯವೆಂಬ ಭೇದತ್ರಯದೋಷಂಬರ್ಪುದಲಾ, ಮೇಣದನಿಂತು ನಿವಾರಿಸಬೇಕೆಂದೊಡದಕ್ಕೆ॥

॥ಟೀ॥ ಈ ಬ್ರಹ್ಮದಲ್ಲಿ ಹೊಂದಿದಂಥಾದೋಷವನ್ನು ಸಮಾನವಾದ ಒಂದುಪದಾರ್ಥವು ಯಿಧೆಯೆಂಬ ದೋಷವನ್ನು ಸಮಾನವಾಗದಂಥಾ ಒಂದುಪದಾರ್ಥವಿಧೆಯೆಂಬ ದೋಷವನ್ನು ಯೀ ಮೂರುಭೇದದೂಷಣವನ್ನು ಬರುತ್ತಲಿಧೆಯಲ್ಲಾ. ಅದುಹ್ಯಾಗೆನಿವಾರಣೆಮಾಡಬೇಕೆಂಬ ಶಂಕೆಪರಿಹಾರವನ್ನು ಹೇಳುತ್ತಲಿದ್ದಾರೆ॥ ... ॥೧॥

ಮೂಲ॥ ಜಂಪೆ॥ ತರುವಿನೊಳು ಫಲಪತ್ರತತಿಯೇ ಸ್ವಗತಮಹುದು। ತರುವಿಂಗಿತರವಾದ ತರುಸಜಾತೀಯಂ ॥ಟೀ॥ ವೃಕ್ಷಕ್ಕೆ ಯೆಲೆಗಳು ಹಣ್ಣುಗಳ ಸಮೂಹವೆ ತಂನಲ್ಲಿ ಯಿರುವ ಭಿಂನತ್ವವು ಆಗುತ್ತಲಿಧೆ. ವೃಕ್ಷಕ್ಕೆ ಮತ್ತೊಂದುವೃಕ್ಷ. ವೃಕ್ಷಸಜಾತೀಯವಾಗುತ್ತಲಿಧೆ॥೧॥ ಸ್ಥಿರವಾದ ಶಿಲೆವಿಜಾತೀಯ ಮೆಂತಿದರಲ್ಲಿ । ಪರಬೊಮ್ಮದಲ್ಲಿ ಗುಣಗ್ರ

ರಣೆಯೇ ಸ್ವಗತಂ ||ಟೀ|| ಸ್ಥಾವರವಾದಂಥಾ ಪಾಷಾಣವೇ ಆವೃಕ್ಷ ಕ್ಕೆ ವಿಜಾತೀಯು ಹ್ಯಾಗೊ ಹಾಗೆ ಚಿತ್ಸ್ವರೂಪವಾದ ಪರಬ್ರಹ್ಮದ ಲ್ಲಿ ಸತ್ವ ರಜ ತಮೋಗುಣಗಳಪ್ರಕಾಶವೇ ಸ್ವಗತಭೇದವು ||೨||

ಜೀವನೆ ಸಜಾತೀಯು ಜೀವಭೋಗ್ಯವೆನಿಸುವ । ದೇವಪಥ ಮುಖ್ಯ ಭೂತಾವಳಿಯುಕಾರ್ಯಂ ||ಟೀ|| ಚೈತನ್ಯ ರೂಪವಾದ ಜೀವನೆಸಮಾ ನ ಜಾತಿವುಳಂಥಾವಸು, ಜೀವರಿಗೆ ಅನುಭವಿಸುವದಕ್ಕೆ ಯೋಗ್ಯವಾ ದಪ್ರಕಾಶ ಮೊದಲಾದಂಥಾ ಪಂಚಭೂತಗಳಿಂದ ನಿರ್ಮಾಣವಾದ ಕಾರ್ಯವು|| ... ... ||೩||

ಅಪ್ಪುದುವಿಜಾತೀಯು ಮಾಗಲಿಂಥಾವಸ್ತು । ತಪ್ಪದೇಪರಿಪೂರ್ಣಥಾ ಮನೆಂತಹುದು ||ಟೀ|| ವಿಜಾತೀಯುವಾಗುತ್ತದೆ. ಹೀಗಾಗುತ್ತಲಿರ ಲಾಗಿ, ಆ ಬ್ರಹ್ಮಸ್ವರೂಪ ವಸ್ತುವು ಖಂಡವಾಗದೆ ಯೆಲ್ಲಿ ನೋಡಿದರು ತುಂಬಿಕೊಂಡು ಇರುವದಕ್ಕೆ ಸ್ಥಾನಹ್ಯಾಗ ಆದೀತು|| ||೪||

ಯೆಂದು ಬಾಧಿಪ್ಪುದಲಾ ಸಂದೆಗಂ ನಿನಗಿದರ । ಛಂದಮಂ ಕೇಳುತ ತ್ಸಂದೇಹಮಳಿಯೆ ||ಟೀ|| ಹಾಗೆ ಅನ್ನುತ್ತಾ, ಯೆಲೈ ಮನಃಪ್ರಭುವೆ, ನಿನಗೆ ಸಂಶಯು ಬಾಧೆವುಂಟಾಗಿಯಿಧೆ. ಆ ಸಂದೇಹದ ಉಪದ್ರವವು ಹೋಗುವ ಪ್ರಕಾರ ಹೇಳುತ್ತಲಿದ್ಧೇನೆ ಕೇಳು|| ||೫||

ವ|| ಅರಸೇತರುವಿನೊಳ್ಫಲ ಪತ್ರಾದಿಗಳುದಿಸಿ, ತರುವಿಂಗನ್ಯವಾದ ಗುಣರೂಪ ನಾಮಂಗಳಂ ತಳೆದಿರ್ಪಂತೆ, ಸದ್ರೂಪವಾದ ಬ್ರಹ್ಮದಲ್ಲಿ ಗುಣತ್ರಯಂಗಳುದಿಸಿ, ಸದ್ರೂಪ- ಬ್ರಹ್ಮಕ್ಕನ್ಯವಾದ ರೂಪ ನಾಮಂಗ ಳಂ ತಳೆದಿರ್ಪವೆಂದರೆ, ಫಲಾದಿಗಳಲ್ಲಿ ತರುವಿಲ್ಲದಂತೆ, ಗುಣಾದಿಗಳಲ್ಲಿ ಸ ದ್ವಸ್ತುವಿಲ್ಲದಿರ್ಪುದೆ, ಫಲಾದಿಗಳಲ್ಲಿ ತರುವಿಂಗೆ ವಿಶೇಷಂ ಘಟಿಸಿದಂತೆ, ಗುಣಾದಿಗಳಲ್ಲಿ ಸದ್ವಸ್ತುವಿಂಗೆ ವಿಶೇಷಂ ಘಟಿಸದಿರ್ಪುದೆ ತರುಫಲಂಗ ಳಿಗೆ ಪರಸ್ಪರವಾಗಿ ಜನ್ಯಜನಕ ಸಂಬಂಧವುಂಟು. ಸದ್ವಸ್ತುಗುಣಂ ಗಳಿಗೆ ಪರಸ್ಪರವಾಗಿ ಜನ್ಯಜನಕ ಸಂಬಂಧಮಿರ್ಪುದೆ ಇಂತೆಂದುದರಿಂ ಸದ್ವಸ್ತುವಿನಲ್ಲಿ ಸ್ವಗತಭೇದದೋಷವಿಲ್ಲ. ತರುವಿಂಗೆ ತರುವಾಂತರವು

ಸಜಾತಿಯುವಾದಂತೆ, ಸರ್ವಜ್ಞತ್ವಾದಿ ಗುಣಂಗಳುಳ್ಳ ಈಶ್ವರಂಗೆ, ಕಿಂಚಿಜ್ಞತ್ವಾದಿ ಗುಣಂಗಳುಳ್ಳ ಜೀವಂಗೆ,ಚೈತನ್ಯಾಖ್ಯದಿಂ ಸಜಾತೀಯತ್ವವಾಗದೆ ಅಂದರೆ, ಮಾಯಾವಿದ್ಯೋಪಾದಿಗಳಿಂ, ಸರ್ವಜ್ಞತ್ವ ಕಿಂಚಿಜ್ಞತ್ವಾದಿಗಳುಂ, ಮೇಣೀಶ್ವರ ತ್ವಜೀವತ್ವ ಮುಂಬಂದುದು ಈಉಪಾಧಿಯಿಲ್ಲದಂದು ಜೀವೇಶ್ವರತ್ವ ವ್ಯವಸ್ಥೆಯಲ್ಲಿ, ಅದೆಯುಂಬುದರಿಂ, ಸಜಾತೀಯಭೇದದೋಷವಿಲ್ಲ. ತರುವಿಂಗೆ ಪಾಷಾಣಾದಿಗಳು ವಿಜಾತೀಯುವಾದಂತೆ, ಸತ್ತಿಗಂ, ಚಿತ್ತಿಗಂ, ಆನಂದಕ್ಕಂ, ನಿತ್ಯಕ್ಕಂ, ಪರಿಪೂರ್ಣಕ್ಕಂ, ಅನೃತವೆಂದು, ಜಡವೆಂದು, ದುಃಖವೆಂದು, ನಶ್ವರವೆಂದು, ಖಂಡಿತವೆಂದು, ಕ್ರಮದಿಂ ಮಾಯಾಸ್ವರೂಪಂ, ಪ್ರತಿಯಾಗಿರ್ಪುದಲಾ ಅಂದರೆ, ಇರುವದರೊಳಿಲ್ಲವೆಂಬುದಿಲ್ಲ. ತಿಳಿವಿನೊಳ್ತಿಳಿಯೆ ಯೆಂಬುದಿಲ್ಲ. ಆನಂದದಲ್ಲಿದುಃಖವಿಲ್ಲ.ನಿತ್ಯದಲ್ಲಿಕೇಡಿಲ್ಲ. ಪರಿಪೂರ್ಣದಲ್ಲಿಯೆಡೆದೆರಪಿಲ್ಲ,ಮತ್ತೆಲ್ಲಿರ್ಪುದಂದರೆ,ಕಾಲಮಂಪಿಡಿದು,ದೇಶಮಂಪಿಡಿದು,ವಸ್ತುವಂಪಿಡಿದುತೋರಬೇಕು. ಸರ್ವಕಾಲದಲ್ಲಿಯೂ,ಸರ್ವದೇಶದಲ್ಲಿಯೂ, ಸರ್ವವಸ್ತುವಿನಲ್ಲಿಯೂ, ಕಾಲೋಸ್ತಿ, ಕಾಲೋಭಾತಿ, ದೇಶೋಸ್ತಿ, ದೇಶೋಭಾತಿ, ವಸ್ತ್ವಸ್ತಿ, ವಸ್ತುಭಾತಿಯುಂಬುದರಿಂ, ಸಚ್ಚಿತ್ತುಗಳಿಗೆ, ಕಾಲ, ದೇಶ, ವಸ್ತು, ಪರಿಚ್ಛೇದ ದೋಷವಿಲ್ಲ. ಹಾಗಾದರಾಗಲಿ, ಆನಂದ ನಿತ್ಯಪರಿಪೂರ್ಣತ್ವಂಗಳಿಗೆ, ಪರಿಚ್ಛೇದ ದೋಷಬಾರದೆ ಅಂದರೆ, ಸಚ್ಚಿತ್ತುಗಳಿಗನ್ಯಂಗಳೀ ವಸ್ತುಗಳಾದರೆ ಹೀಗೆಂದು ವಿತರ್ಕಿಸಬೇಕು. ತನ್ನ ಹೆಗಲೇರಿದ ಕುರಿಯಂಗಾಣದೆ ದಿಕ್ಕುದಿಕ್ಕನೊಳರಸಿ, ಜಲದೊಳ್ಪ್ರತಿಬಿಂಬರೂಪದಿಂ ಕಂಡು, ನೀರಿನೊಳ್ಬಿದ್ಧೆಯುಂದು, ಭಾವಿಗೆ ದುಮುಕಿದ ಕುರುಬನಂತೆ, ಕೇಳಬೇಕಾದರೆ, ಪರಪಕ್ಷೋಕ್ತ ಬಾಧಕಮಂ ವಿಚಾರಿಸದಾಡಬಾರನದರಿಂ, ಈ ಪೂರ್ಣವಸ್ತು ಪೂರ್ವೋಕ್ತ, ಸಚ್ಚಿದಾನಂದನಿತ್ಯತ್ವ ಲಕ್ಷಣ ಲಕ್ಷಿತವೆಂದರಿದದು ನಾನೆಂದರಿಯೆ

॥ಟೀ॥ ಯೆಲೈ ಮನೋರಾಜನೆ, ವೃಕ್ಷದಲ್ಲಿ ಹಣ್ಣುಗಳು ಯೆಲೆಗಳು ಹುಟ್ಟಿ, ವೃಕ್ಷಕ್ಕೆ ಇತರವಾದ ಗುಣವು, ಆಕಾರವು ಹೆಸರುಗಳನ್ನು ಹೊಂದಿಯಿರುವಹಾಗೆ, ಸದ್ರೂಪವಾದ ಪರಬ್ರಹ್ಮದಲ್ಲಿ, ಗುಣತ್ರಯಂಗ

ಳುಹುಟ್ಟಿ, ಸದ್ರೂಪಬ್ರಹ್ಮಕ್ಕೆ ಇತರವಾದ ಆಕಾರಗಳು, ಹೆಸರುಗಳು, ಹೊಂದಿಯಿರುತ್ತಲಿವೆ, ಅಂದರೆ, ಆಹಣ್ಣುಗಳಲ್ಲಿ ವೃಕ್ಷವಿಲ್ಲದೆಯಿರುವಹಾಗೆ, ಸತ್ವರಜಸ್ತಮೋಗುಣಗಳಲ್ಲಿ, ಸದ್ರೂಪವಾದ ಬ್ರಹ್ಮವು ಯಿಲ್ಲದಇಧೆಯೆ? ಹಣ್ಣುಮೊದಲಾದುದರಲ್ಲಿ ವೃಕ್ಷಕ್ಕೆ ರುಚಿ ವಿಶೇಷಕೂಡಿದಹಾಗೆ ಸತ್ವರಜಸ್ತಮೋಗುಣಾದಿಗಳಲ್ಲಿ, ಸದ್ರೂಪವಾದ ಬ್ರಹ್ಮಕ್ಕೆ, ಸದನ್ವತ್ವ ಕೂಡಿಯಿಧೆಯೆ, ವೃಕ್ಷಕ್ಕು ಹಣ್ಣುಗಳಿಗು, ಅನ್ಯೋನ್ಯವಾಗಿ ಕಾಟ್ಟ ದಂಥಾವಸ್ತುವಿನ ಭಾವವೆಂಬ ಸಂಬಂಧ ಹ್ಯಾಗೆಯಿರುತ್ತಲಿಧೆಯೊ, ಸದ್ರೂಪಬ್ರಹ್ಮಕ್ಕು ಗುಣಾದಿಗಳಿಗು ಅನ್ಯೋನ್ಯವಾಗಿ, ಜನ್ಯತ್ವ ಜನಕತ್ವ ಸಂಬಂಧಮುಂಟೆ, ಹೀಗೆ ಹೇಳಿದ್ದರಿಂದ, ಸದ್ರೂಪಬ್ರಹ್ಮನಾದ ತನ್ನಲ್ಲಿ ಹೊಂದಿದ, ಸ್ವಗತಮೆಂಬ ಭೇದ ದೋಷವಿಲ್ಲ. ವೃಕ್ಷಕ್ಕೆ ಅನ್ಯವೃಕ್ಷವು ಸಜಾತೀಯಮಾದಹಾಗೆ, ಭೂತಭವಿಷ್ಯದ್ವರ್ತಮಾನಕಾಲಂಗಳ ತಿಳಿಯೋಣಮೆಂಬುದೇ ಮೊದಲಾದ ಗುಣಂಗಳುಳ್ಳ ಚಿತ್ಸ್ವರೂಪನಾದ ಈಶ್ವರಂಗೆಯು, ಕೊಂಚವಾಗಿ ತಿಳಿಯೋಣವೆ ಮೊದಲಾದ ಗುಣಂಗಳುಳ್ಳ ಚಿತ್ಸ್ವರೂಪವಾದ ಜೀವಂಗೆಯು, ಚೈತನ್ಯೇಕತ್ವದಿಂದ ಒಂದೇಜಾತಿಯವರು, ಅಂದರೆ:—ಆಗದೆ, ಜ್ಞಾನಜ್ಞಾನೋಪಾದಿಗಳಿಂದ ಸರ್ವಜ್ಞತ್ವ ಕಿಂಚಿತ್ವಾದಿಗಳುಂ, ಮತ್ತು ಈಶ್ವರತ್ವವು, ಜೀವತ್ವವು ಬಂದುದು. ಈ ಮಾಯಾವಿದ್ಯೋಪಾದಿಗಳು ಯಿಲ್ಲದ ಕಾಲದಲ್ಲಿ, ಇವನುಜೀವ, ಇವನು ಈಶ್ವರ ಯೆಂಬುವ ಭೇದವು ಯೆಲ್ಲಿಯಿಧೆ, ಅಂದದ್ದರಿಂದ, ಸಮಾನಜಾತಿಯಾದ ವಸ್ತ್ವಂತರ ಯಿಧೆಯೆಂಬ ದೋಷವಿಲ್ಲ. ವೃಕ್ಷಕ್ಕೆ ಸ್ಥಿರವಾದ ಕಲ್ಲುಗಳು ಮೊದಲಾದ ಪದಾರ್ಥಗಳು, ವಿಜಾತೀಯಗಳಾದಂತೆ, ಯಿರುವದಕ್ಕು, ಅರಿವಿಗು, ಸುಖಕ್ಕು, ಕೇಡಿಲ್ಲದೆಯಿರುವದಕ್ಕು ಖಂಡವಾಗದೆ ಯೆಲ್ಲಾಕಡೆಯಲ್ಲಿಯೂ, ತುಂಬಿಕೊಂಡುಯಿರುವದಕ್ಕು, ಅಬದ್ಧವೆಂದು, ಚೈತನ್ಯಸ್ವರೂಪವಾಗದೆಯಿರುವದೆಂದು,ದುಃಖದಿಂದ ಕುದಿಗೊಳಿಸುವದೆಂದು, ನಾಶವಾಗಿಹೋಗುವದೆಂದು, ತುಂಡುತುಂಡಾಗಿಯಿರುವದುಯೆಂಬ, ಮಾಯಾಸ್ವರೂಪವು ಅನುಸರಿಸಿ ಕ್ರಮದಿಂದ ಪ್ರತಿದ್ವಂದ್ವವಾಗಿ ಯಿರುತ್ತಲಿಧೆಯಲ್ಲಾಯೆಂದು ಹೇಳಿದರೆ, ಯ

ತಾರ್ಥಸ್ವರೂಪವಾದ ಸತ್ತಿನಲ್ಲಿ ಅಬದ್ಧಸ್ವರೂಪುವಸ್ತುಯಿಲ್ಲಾ. ಅರಿವಿನಲ್ಲಿ ಅರಿವುಯೆಂಬುವದಿಲ್ಲ, ಸುಖಸ್ವರೂಪದಲ್ಲಿ ದುಃಖವಿಲ್ಲ, ನಿತ್ಯವಾದ ವಸ್ತುವಿನಲ್ಲಿ ಕೆಟ್ಟುಹೋಗೋಣವಿಲ್ಲ, ಪರಿಪೂರ್ಣವಸ್ತುವಿನಲ್ಲಿ ಖಂಡಿತತ್ವವಿಲ್ಲ. ಇನ್ನು ಯೆಲ್ಲಿಯಿರುತಾ ಯಿಧೆ ಅಂದರೆ:—ಕಾಲವನ್ನುಹಿಡಿದುಕೊಂಡು, ದೇಶವನ್ನುಹಿಡಿದುಕೊಂಡು, ವಸ್ತುವನ್ನು ಹಿಡಿದುಕೊಂಡು, ತೋರುತ್ತ ಯಿರಬೇಕು. ಭೂತ ಭವಿಷ್ಯದ್ವರ್ತಮಾನ ಸರ್ವಕಾಲಂಗಳಲ್ಲಿಯು, ಯೆಲ್ಲಾದೇಶಂಗಳಲ್ಲಿಯು, ಸಕಲವಾದ ವಸ್ತುಗಳಲ್ಲಿಯು, ಕಾಲವಿಧೆ. ಕಾಲ ಪ್ರಕಾಶಿಸುತ್ತೆ. ದೇಶವಿಧೆ, ದೇಶ ಪ್ರಕಾಶಿಸುತ್ತೆ. ವಸ್ತುವಿಧೆ, ವಸ್ತು ಪ್ರಕಾಶಿಸುತ್ತೆ. ಇಂತೆಂಬುದರಿಂದ, ನಿಜವಾಗಿ ಯಿರುವ ಪದಾರ್ಥಕ್ಕು, ಅರಿವು ಆದ ಪದಾರ್ಥಕ್ಕು, ಕಾಲಪರಿಚ್ಛೇದ, ದೇಶಪರಿಚ್ಛೇದ, ವಸ್ತುಪರಿಚ್ಛೇದವೆಂಬ ಮೂರಾದ ಪರಿಚ್ಛೇದ ದೋಷಂಗಳಿಲ್ಲ. ಹಾಗಾದರೆ ಹಾಗೆಯೇಆಗಲಿ, ಆನಂದ ನಿತ್ಯಪರಿಪೂರ್ಣವಾದ ವಸ್ತುಗಳಿಗೆ, ತ್ರಿವಿಧ ಪರಿಚ್ಛೇದ ದೋಷ ಬಾರದೆಯೆಂದುಕೇಳಲಾಗಿ, ಸತ್ಪದಾರ್ಥಕ್ಕು, ಚಿತ್ಪದಾರ್ಥಕ್ಕು, ಆನಂದ, ನಿತ್ಯಪರಿಪೂರ್ಣವೆಂಬ ವಸ್ತುಗಳು ಭಿನ್ನಂಗಳಾದರೆ, ಪರಿಚ್ಛೇದ ದೋಷಬರುತ್ತೆಯೆಂದುಕೇಳಬೇಕು. ಭಿನ್ನಂಗಳಲ್ಲವೆಂದು ತಿಳಿದಮೇಲೆ ಕೇಳಬಾರದು, ಅದು ಯಾಕೆ ಯೆಂದರೆ.— ತನ್ನ ಭುಜದಮೇಲೆ ಯಿರುವಕುರಿಯ ಮರಿಯನ್ನುಕಾಣದೆ, ಯೆಲ್ಲಾ ಕಡೆಯಲ್ಲಿಯು ಹುಡುಕಿ ಭಾವಿತಡಿಯಲ್ಲಿ ನಿಂತುಕೊಂಡು, ಭಾವಿ ಉದಕದಲ್ಲಿ ಪ್ರತಿಬಿಂಬರೂಪದಿಂದ ನೋಡಿ, ಆ ಕೂಪೋದಕದಲ್ಲಿ ಬಿದ್ದಿಧೆಯೆಂದು ಆ ಕೂಪೋದಕದಲ್ಲಿ ಬಿದ್ದ ಕುರುಬನಂತೆ, ಕೇಳಬೇಕಾದರೆ ಪರರಾದ ಅನ್ಯಮತಗಳವರು ಹೇಳುವ ಸಿದ್ಧಾಂತವನ್ನು, ತಿಳಿಯದೆ ಮಾತನಾಡಬಾರದಾದ್ದರಿಂದ, ಈ ಪ್ರತ್ಯಕ್ಷವಾದ ಪರಿಪೂರ್ಣವಸ್ತು, ಹಿಂದೆ ಹೇಳಿದಂಥಾ, ಸತ್ತು, ಚಿತ್ತು, ಆನಂದ, ನಿತ್ಯಲಕ್ಷಣ ಉಳ್ಳಂಥಾದ್ದೆಂದು ಅರಿದು ಆ ವಸ್ತುವೆನಾನೆಂದು ತಿಳಿದರೆ॥

ಕಂ॥ ಈವಿದ್ಯೆಯುಸುಸ್ಥಿತಿಯಂಸೇವಿಸಲಾಪುರುಷನಾಕ್ಷಣಂತ್ರಿಭುವ

ನದೊಳ್ । ಜೀವನ್ಮುಕ್ತನೆನಿಸುವಂ । ಭಾವನೆಯಿಂದೇಹವಿರಲಿ! ನಾನಾವಿಧದಿಂ॥ ॥ಟೀ॥ ಆ ಸದ್ವಸ್ತುವೆ ಬ್ರಹ್ಮಸ್ವರೂಪ. ಆದೇ ನಾನೆಂಬ ತಿಳಿವಿಕೆಯು ಚನ್ನಾಗಿ ಸ್ಥಿರವಾಗಿ ನಿಲ್ಲುವದನ್ನು ಹೊಂದಿದ ಪುರುಷನು ಆಕ್ಷಣದಲ್ಲಿ ಸ್ವರ್ಗಮರ್ತ್ಯಪಾತಾಳವೆಂಬ ಮೂರುಲೋಕಗಳಲ್ಲಿಯೂ ಅಜ್ಞಾನಸ್ವರೂಪವಾದ ಜೀವತ್ವದಿಂದ ಬಿಡುಗಡೆ ಉಳ್ಳಂಥಾವನುಯೆಂದು ಯೆನಿಸಿಕೊಳ್ಳುತ್ತಾನೆ. ಜೀವನ್ಮುಕ್ತನೆಂದು ಭಾವಿಸಿಕೊಳ್ಳುವಾದುದರಿಂದ ಶರೀರವಿರಲಿ ನಾನಾಪ್ರಕಾರವಾಗಿ॥ ...

ವ॥ ದೇಹವೆಂಬಸಾಮಾನ್ಯ ಗ್ರಹಣದಿಂ, ಲಿಂಗದೇಹಮುಂ ಗ್ರಹಿಸಲ್ಪಟ್ಟುದಾಗಿ, ಸ್ಥೂಲದೇಹದಲ್ಲಿ ರೋಗಾದಿಗಳುಂ, ಸೂಕ್ಷ್ಮದೇಹದಲ್ಲಿರಾಗಾದಿಗಳುಂ ವರ್ತಿಸಲಿ. ಇವರಿಂದಾತಂಗೆ ಬಾಧಕ ಮಿಲ್ಲವೆಂಬುದರ್ಥ.

ಟೀ॥ ಸ್ಥೂಲದೇಹವೆಂಬಸಮಾನತ್ವಗ್ರಹಣದಿಂದ, ಸೂಕ್ಷ್ಮದೇಹವನ್ನು ತೆಗೆದುಕೊಳ್ಳಲು ಪಟ್ಟಂಥಾದ್ದಾಯಿತಾಗಿ, ಸ್ಥೂಲಶರೀರದಲ್ಲಿ ರೋಗಾದಿಗಳನ್ನು; ಲಿಂಗಶರೀರದಲ್ಲಿ ಸಕಲ ವಿಷಯಂಗಳಲ್ಲಿಯು ಅನುರಾಗಂಗಳು ಇರಲಿ. ರೋಗರಾಗಾದಿಗಳಿಂದ ಅಂಥಾ ಜೀವನ್ಮುಕ್ತನಿಗೆ ಯೇನು ಉಪದ್ರವು ಇಲ್ಲವೆಂಬ ತಾತ್ಪರ್ಯವು. ...

ವ॥ ಇತೆಂದು ಪರಿಪೂರ್ಣಭಾವಪದ್ಧತಿಯನ್ನಭ್ಯುಪಗಮಿಾಕರಿಸಿ ಇನ್ನೊಂದು ಪ್ರಕಾರಮಂಪೇಳುತ್ತಿರ್ದಪನೆಂದೆಂತೆನೆ ॥ಟೀ॥ ಹೀಗೆಂದು ಪರಿಪೂರ್ಣಭಾವ ಮಾರ್ಗವನ್ನು ಚನ್ನಾಗಿ ಹೊಂದುವ ಹಾಗೆ ಮಾಡಿ, ಇನ್ನೊಂದು ರೀತಿಯಾಗಿ ಹೇಳುತ್ತಲಿದ್ದಾನೆ. ಆದುಹ್ಯಾಗೆ ಅಂದರೆ.

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವ ತಾತ್ವಿಕ ವಿಚಾರ
ಪಾರೀಣರಾದಶಾಲ್ಯಕ್ಷಿತಿಪಾಲಕೃಷ್ಣ ಪ್ರಭುವಿರಚಿ
ತಮಾದ ನಿಜದೀಪಿಕಾ ರತ್ನಗ್ರಂಥದೊಳ್
ಪದ್ಧತಿ ೧೩ಕ್ಕಂ ಪರಿಪೂರ್ಣ
ಭಾವಲಕ್ಷಣಂ ಸಂಪೂರ್ಣಂ.

ಇತಿ ಪದ್ಧತಿ ೧೩ ಪರಿಪೂರ್ಣಭಾವ ಪದ್ಧತಿ ಪೇಳದಿಲ್ಲಿಗೆ ಮಂಗಳಂ.

## ೧೪ ಅಜಪಗಾಯಿತ್ರಿ ಪದ್ಧತಿ ಪ್ರಾರಂಭವು.

ಮತ್ತೇಭ ವಿಕ್ರೀಡಿತ ವೃತ್ತ॥ ಯೆಲೆ ಚಿತ್ತಪ್ರಭುವೇ ವಿಚಾರಿಸು ವೃಷಪಾಸ್ಸಂಗ ನಿರ್ದುಷ್ಟಕ । ಕ್ಮಲಮೇಘ ಪ್ರಸವಾಶ್ರಯಾಖಿಲ ಶರೀರೋದ್ಯದ್ಘಟೀಯಂತ್ರಮೇ । ರಲೆನೀಸಾಪ್ರದನೊಂದಿ ಬಂದೆಯುದನೀಗನ್ವೇಷಿಸಿ ಪ್ರಾಣವುಂ । ಡಲಮಧ್ಯಸ್ಥಿತಮಾತ್ರ ಮಂತ್ರಮದು ಹಂಸದ್ವಂದ್ವವರ್ಣೋಜ್ವಲಂ ॥ಟೀ॥ ಯೆಲೆ ಚಿತ್ತವೆಂಬ ಪ್ರಭುವೇ! ಚೆನ್ನಾಗಿ ತಿಳಿದುನೋಡು, ಪುಣ್ಯಪಾಪಗಳ ಸಮೂಹ ಸಂಬಂಧವಾದ, ದೋಷರಹಿತವಾದಂಥಾ ಮೇಘದಿಂದ ಹುಟ್ಟಿದ ಜಲವೆ ಆಶ್ರಯವಾಗಿ ಉಳ್ಳಂಥಾ ಸಮಸ್ತವಾದ ಶರೀರವೆಂಬ ಮೇಲಕ್ಕೆ ಯೆದ್ದಂಥಾಯಾತವನ್ನು ಹತ್ತುವದಕ್ಕೆ ಯಾವ ಆಧಾರವಾದ ದಂಡವನ್ನು ಹಿಡಿದು ಕೊಂಡುಬಂದೆ, ಆ ಆಶ್ರಯ ಭೂತವಾದ ದಂಡವಂನು ಈ ಕಾಲದಲ್ಲಿ ಹುಡುಕಿಕೊಂಡು ಪ್ರಾಣ ಸಮೂಹದ ನಡುವೆ ಇರುವಂಥಾ ಆತ್ಮಸ್ವರೂಪದ ಮಂತ್ರವು ಅದು ಯೆಂಥಾದ್ದು ಅಂದರೆ ಹಂಸ ಯೆಂಬ ಯೆರಡು ಅಕ್ಷರಗಳಿಂದ ಪ್ರಕಾಶಿಸುತ್ತಲಿಧೆ॥ ... ...

ಮೂಲ॥ ಏಕತಾಳ॥ ಯೆಡೆಬಿಡದೆ ನಿನ್ನೊಳಿರ್ಪುದು ನೀನಾವ । ವೆಡಲುಗಳೆತ್ತಲುಂ ಬಿಡದೆ ಬೆನ್ನಟ್ಟಿ ॥ಟೀ॥ ಯಾವಾಗಲೂ ಯೆಡದೆರಪಿಲ್ಲದೆ ನಿನ್ನಲ್ಲಿ ಇರುತ್ತಲಿಧೆ. ಯೆಲೈ ಮನಃಪ್ರಭುವ! ನೀನು! ದೇವಮನುಷ್ಯ ಕ್ರಿಮಿಕೀಟ ಪತಂಗಾದಿಯಾಗಿ ಯೆಂಥಾ ಶರೀರಗಳನ್ನು ನೀನು ಧರಿಸಿಕೊಂಡು ಬಂದಾಗ್ಯು ನಿನ್ನಲ್ಲಿ ಬಿಡುಗಡೆ ಯಿಲ್ಲದೆ ವೋಡಿ ಬಂದು ಬೆನ್ನನ್ನು ಹಿಡಿದುಕೊಂಡು ಇಧೆಯಾಗಿ, ಹ್ಯಾಗಂದರೆ ॥೧॥

ಪ್ರಾಣಮುಚ್ಚರಿಪುದುಪದುಳದಿಂಹಾಂತ್ವಮು । ಪಾನಮುಚ್ಚರಿಪುದುಪಟಸತ್ವವನು॥ ॥ಟೀ॥ ಪ್ರಾಣವಾಯುವು ಅಕಾರವನ್ನು ಉಚ್ಚಾರಣೆ ಮಾಡುತ್ತಲಿಧೆ. ಭದ್ರವಾಗಿ ಅಪಾನವಾಯು ಸಾಮರ್ಥ್ಯವಾದ ಸಕಾರವನ್ನು ಹೇಳುತ್ತಲಿಧೆ॥ ... ... ॥೨॥

ಈವರ್ನಯುಗಯೋಗಮೆಲ್ಲಿಹುದಲ್ಲಿಯೆ । ಭಾವಮಹುದುಹಂಸಪದ

ಮತಿಚತುರಂ॥ ॥ಟೀ॥ ಈ ಪೂರ್ವಹೇಳಿದ ಯರಡುವರ್ನಗಳ ಸಂಬಂಧ ಯಾವ ಸ್ಥಳದಲ್ಲಿ ಯಿರುತ್ತಲಿಥೆಯೋ ಆ ಸ್ಥಳದಲ್ಲಿಯೆ ಅತಿಚಮತ್ಕಾರವಾಗಿ ಹಂಸ ಯೆಂಬಪದನು ಅಭಿಪ್ರಾಯ ಮಾಗುತ್ತಲಿಥೆ॥ ॥೩॥

ಮೂ॥ ವ॥ ಇದುಬಿನಮೊಂದಕ್ಕೆಪ್ರಾಣಗತಿವ್ಯಾಜ್ಯದಿಂದಿಪ್ಪತ್ತೊಂದುಸಾವಿರವಾರನೂರುಭಾರಿಯಾವರ್ತಿಸುತ್ತಿರುವದಿದಂ। ಶ್ರೀಗುರುಮತವಿಡುಬ್ರಾಹ್ಮೀಮುಹೂರ್ತದೋಳ್ಪ್ರಬುದ್ಧನಾಗಿ। ಶೌಚತ್ರಿಪುಂಡ್ರದಿಂಶುದ್ಧನಾಗಿ।ಸುಖಾಸೀನನಾಗಿ॥ ॥ಟೀ॥ ಹಂಸ ಯಂಬ ಮಂತ್ರವು ದಿವಸ ಒಂದಕ್ಕೆ ಉಶ್ವಾಸರೂಪವಾದ ಪ್ರಾಣಗಮನಾಗಮನಪ್ರಕಾರ ನಿಮಿತ್ತದಿಂದ ಇಪ್ಪತ್ತು ಒಂದುಸಾವಿರದ ಆರುನೂರುಸಾರಿ ತಿರುಗುತ್ತಲಿಥೆಯಾಗಿ ಈ ಮಂತ್ರಜಪವನ್ನು ಶ್ರೀಗುರುಸಮ್ಮತಿಯನ್ನು ಹೊಂದಿ ಅರುಣೋದಯಕ್ಕೆ ಮುಂಚಿತವಾಗಿಯೆದ್ದು ಕಾಲು ಕೈಯಿ ಮುಖವನ್ನು ತೊಳದುಕೊಂಡು ವಿಭೂತಿ ಧಾರಣೆಮಾಡಿಕೊಂಡು ಸುಖಾಸನದಲ್ಲಿ ಕುಳಿತುಕೊಂಡು॥ ... ... ...

ಶಾರ್ದೂಲವಿಕ್ರೀಡಿತವೃತ್ತ॥ ಮೂಲಾಧಾರದಪದ್ಮದಲ್ಲಿಮದಧಾರಾಗಂಧಲೋಭಭ್ರಮ।ಲ್ಲೋಲಂಬೇಂದ್ರಮಣಿಸ್ರಗಾವೃತಶಿರಃಕೋಟೀರಪೀಠಾಯುತಂ॥ಖೇಲತ್ಪುಷ್ಕರಪದ್ಮಕೇಸರರಜಃಪಿಂಗೀಭವದ್ವಕ್ತ್ರನಂ। ಶೈಲಾಧೀಶಸುತಾಮುದಬ್ಧಿಶಶಿಯಂಷಾಣ್ಮಾತುರಜ್ಜೀಪ್ಸನಂ॥ ॥ಟೀ॥ ಮೂಲಾಧಾರದ ಕಮಲದಲ್ಲಿ ಮದದ ಪ್ರವಾಹದ ವಾಸನೆಯಲ್ಲಿ ಆಸಕ್ತಿಯಿಂದ ತಿರುಗುತ್ತಲಿರುವ ಭೃಂಗಂಗಳೆಂಬ ಇಂದ್ರನೀಲಮಣಿಗಳ ಮಾಲಿಕೆಗಳಿಂದ ಸುತ್ತಲ್ಪಟ್ಟಂಥಾ ಶಿರಸ್ಸಿನಲ್ಲಿಯಿರುವಾ ಕಿರೀಟ ಪೀಠವಿಸ್ತಾರಉಳ್ಳಂಥಾ ಕ್ರೀಡಿಸುತ್ತಲಿರುವಂಥಾ ಆನೆ ಹಸ್ತಾಗ್ರದಲ್ಲಿಯಿರುವ ಕಮಲದಪರಾಗದಿಂದಅರಿಶಿನವರ್ನವಾಗಿಯಿರುವಮುಖಉಳ್ಳಂಥಾಪರ್ವತರಾಜನಮಗಳಾದಪಾರ್ವತಿಯ ಸಂತೋಷವೆಂಬಸಮುದ್ರಕ್ಕೆಚಂದ್ರನಾದಂಥಾಆರುತಾಯಿಗಳುಳ್ಳಂಥಾಷಣ್ಮುಖನಿಗೆಅಣ್ಣನಾದಂತಾಗಣಪತಿಯನ್ನುಕೇವಲಕುಂಭಕದಿಂದ ಸಂತು॥ ... ... ...

ಮೂ॥ ವ॥ ಧ್ಯಾನಗೋಚರಂಗೈದಯಥಾವಿಧಿಯಿಂದರ್ಚಿಸಿ। ಪ್ರಾಗ್ದಿನಾನುಷ್ಠಿತಮಂತ್ರಾವೃತ್ತಿಯುಲ್ಲಾರ್ರೂರುಜಪಮಂಸಮರ್ಪಿಸಿಮೇಲೆ ॥ಟಿ॥ ಧ್ಯಾನದಿಂದ ಪ್ರತ್ಯಕ್ಷನನ್ನ ಮಾಡಿಕೊಂಡು ಚಿನ್ನಾಗಿ ಮಾನಸಪೂಜೆಯಂ ಮಾಡಿ ಪೂರ್ವದಿನದಲ್ಲಿ ಮಾಡಿದ ಮಂತ್ರದಜಪದಲ್ಲಿ ಆರುನೂರು ಲೆಕ್ಕ ಉಳ್ಳಂಥಾ ಜಪವನ್ನು ಸಮರ್ಪಣೆಮಾಡಿ ಆಮೇಲೆ॥

ಶಾರ್ದೂಲ ವಿಕ್ರೀಡಿತ ವೃತ್ತ॥ ಸ್ವಾಧಿಷ್ಠಾನದ ಚಕ್ರದಲ್ಲಿ ಮೃದುವಾಣೀವಲ್ಲಕೀಗಾನಸಂ। ಬಾದೊದ್ರಿಕ್ತಕಲಧ್ವನಿಸ್ಫುಟ ನಟಚ್ಛಕ್ರಾಂಗ ಸಂಸ್ಪರ್ಶಲಿ॥ ಲಾಧೌರೇಯ ಮನಸ್ಕನಂ ಸುಮುಖನಂ ಕಾರ್ತಸ್ವರಾದ್ಯೋತಿಯಂ। ಸಾಧು ಪ್ರಾರ್ಥ್ಯವಿಭೂತಿಯೆಂದನುಜಭಿತ್ಕುಕ್ಷಜ ಸಂಭೂತಿಯಂ ॥ಟೀ॥ ಸ್ವಾದಿಷ್ಠಾನವೆಂಬ ಪದ್ಮದಲ್ಲಿ ಮನೋಹರವಾದಂಥಾ ಸರಸ್ವತಿಯ ಕೈಯಲ್ಲಿ ಇರುವ ವೀಣೆಯ ಗಾನದ ಸಂಬಂಧದಿಂದ ಉದ್ರೇಕವಾದ ಅವ್ಯಕ್ತ ಮಧುರವಾದಂಥಾ ಶಬ್ದಮಾಡಿಕೊಂಡು ಹೆಚ್ಚಾಗಿನಾಟ್ಯಮಾಡುತ್ತಲಿರುವ ಹಂಸೆಯನ್ನು ಸ್ವಹಸ್ತದಿಂದ ಮುಟ್ಟೋಣವೆಂಬ ವಿಲಾಸದ ಭಾರವಹಿಸಿದ ಮನಸ್ಸು ಉಳ್ಳಂಥಾವನನ್ನು. ಇನ್ನು ಯೆಂಥಾವನು ಅಂದರೆ ಒಳ್ಳೆ ಮುಖವುಳ್ಳಂಥಾವನನ್ನು ಸುವರ್ಣದ ಕಾಂತಿಯೋಪಾದಿಯಲ್ಲಿ ಇರುವ ತೇಜಸ್ಸು ಉಳ್ಳಂಥಾವನನ್ನು ಆತ್ಮನಿಷ್ಠರಾದವರಿಂದ ಇಚ್ಛೈಸಲ್ಪಟ್ಟ ಐಶ್ವರ್ಯ ಉಳ್ಳಂಥಾವನನ್ನು ರಾಕ್ಷಸರನ್ನು ಸಂಹಾರ ಮಾಡಿದ ವಿಷ್ಣುವಿನ ನಾಭಿ ಕಮಲದಲ್ಲಿ ಹುಟ್ಟಿದಂಥಾ ಈ ಪೂರ್ವಹೇಳಿದ ವಿಶೇಷಣ ವಿಶಿಷ್ಟನಾದ ಚತುರ್ಮುಖ ಬ್ರಹ್ಮನನ್ನು

ಮೂ॥ ವ॥ ನೆನೆಹಿಂಕಂಡಾರುಸಾವಿರಜಪಮಂವಿಶ್ರಾಣಿಸಿಬಳಿಕ॥ಟಿ॥ ಸ್ಮರಣೆಯಿಂದ ನೋಡಿ ವಿಧಿಯನ್ನು ಅತಿಕ್ರಮಿಸದ ಹಾಗೆ ಕುಂಭದಲ್ಲಿ ನಿಂತು ಮಾನಸ ಪೂಜೆಮಾಡಿ ಪೂರ್ವದಿನದಲ್ಲಿ ಮಾಡಿದ ಮಂತ್ರ ಜಪವ ಆರುಸಾವಿರವನ್ನು ಕೊಟ್ಟು ಅನಂತರದಲ್ಲಿ॥

ಮತ್ತೇಭವಿಕ್ರೀಡಿತವೃತ್ತ॥ ಮಣಿಪೂರಾಂಬುಜದಲ್ಲಿ ನಿಶ್ಚಿತ ಲೀಲಾಸಂಕುಚಂ ನಾಭಿಶೋ। ಭನಪಂಕೇರುಹ ಬೋಧಕಾದಿ ಫಣಿ ಚೂಡಾರ

ತ್ನ ಚಂಡಾಶುಮಾ । ಗೃಣಿನಿತ್ಯಸ್ಫುಟ ಭಾರ್ಗವೀ ಮುಖ ಸರೋಜಾತ ಸ್ಥಿತಾತ್ಮಾಕ್ಷಿಭೃಂ । ಗನಮರ್ಸ್ಯಬ್ಜ ವರಾಭಯಾಢ್ಯ ಕರನಂ ರೋಚಿಷ್ಣು ವಂ ವಿಷ್ಣು ವಂ ॥ಟೀ॥ ಮಣಿಪೂರವೆಂಬ ಕಮಲದಲ್ಲಿ ಉಶ್ವಾಸನಿಶ್ವಾಸಗಳೆಂಬ ವಿಲಾಸದಿಂದ ಮುಚ್ಚಿಕೊಂಡು ಇರುವ ನಾಭಿಯಲ್ಲಿ ಶುಭಕರವಾದ ಕಮಲವನ್ನು । ವಿಕಸನ ಮಾಡುವಂಥಾ ಆದಿಶೇಷನ ಶಿರಸ್ಸಿನಲ್ಲಿ ಇರುವ ರತ್ನವೆಂಬ ಸೂರ್ಯನ ಕಾಂತಿಯಿಂದ ಯಾವಾಗಲೂ ವಿಕಸನವಾಗಿ ಇರುವ ಲಕ್ಷ್ಮೀದೇವಿಯ ಮುಖವೆಂಬ ಕಮಲದಲ್ಲಿ ಇರುವ ನೇತ್ರಗಳುಳ್ಳ ತುಂಬಿಗಳುಳ್ಳಂಥಾವನನ್ನು ಇನ್ನು ಯೆಂಥಾವನಂದರೆ:—ಚಕ್ರವು ಶಂಖವು ವರಗಳ ಕೊಡುವದರಲ್ಲಿಯು ಅಭಯತ್ವ ಕೊಡುವದರಲ್ಲಿಯೂ ಸಾಮರ್ಥ್ಯವಾದ ನಾಲ್ಕು ಕರಗಳುಳ್ಳಂಥಾ ಪ್ರಕಾಶಿಸುತ್ತಲಿರುವ ವ್ಯಾಪಕ ಶೀಲನಾದ ವಿಷ್ಣುವನ್ನು ...

ಮೂ॥ವ॥ ಚಿಂತಾಸಾನ್ನಿಧ್ಯಂ॥ಕೈರಾರುಸಾವಿರಜಪಮಂವಿಸ್ತರಿಸಿಮತ್ತೆ॥ ॥ಟೀ॥ ಧ್ಯಾನವಂಮಾಡಿ ವಿಷ್ಣುವಿನಸನ್ನಿಧಾನಕಲ್ಪಿಸಿಕೊಂಡು ಪೂರ್ವಹೇಳಿಯಿರುವಹಾಗೆ ಮಾನಸಪೂಜೆಮಾಡಿ ಆರುಸಾವಿರ ಜಪಮಂ ಕೊಟ್ಟು ಆಮೇಲೆ॥ ... ... ...

ಉತ್ಪಲಮಾಲಿಕಾವೃತ್ತ॥ ರಾಜದನಾಹತಾಂಬುಜದಮಧ್ಯದಿವಾಮನಿಜೋರುಲಗ್ನಗೌ।ರೀಜಟಿಲೀಭವಚ್ಚಿಕುರಕೃಷ್ಣಭುಜಂಗಭಯಸ್ಖಲಚ್ಛಿರೋ।ರಾಜಶರಣ್ಯವಾರ್ಷಿಕತಟಿತ್ಪಟುದೀರ್ಘಜಟಾಕಲಾಪನಂ। ತೈಜಸನಂಪ್ರಭಾತದರದಂಬು ಭವಾನನಮಹೇಶನಂ॥ ॥ಟೀ॥ ಪ್ರಕಾಶಿಸುತ್ತಲಿರುವ ಅನಾಹತವೆಂಬ ಕಮಲದಮಧ್ಯದಲ್ಲಿ ತನ್ನ ಯಡದ ತೊಡೆಯ ಮೇಲೆ ಕುಳತಿರುವ ಗೌರೀದೇವಿಯ ಸಂಬಂಧವಾದ ಜಡೆಯಾಗಿರುವ ಕೇಶಪಾಶಗಳೆಂಬ ಕಪ್ಪಗೆ ಇರುವಂಥಾ ಸರ್ಪನ ದೆಸೆಯಿಂದಾದ ಭಯದಿಂದ ಜಾರಿ ಬೀಳುತ್ತಲಿರುವ ಶಿರಸ್ಸಿನಲ್ಲಿ ವಿದ್ಯಮಾನನಾದ ಚಂದ್ರನಿಗೆ ರಕ್ಷಕನಾದಂಥಾ ವರ್ಷಾಕಾಲದಲ್ಲಿ ಹುಟ್ಟಿದಂಥಾ ಮಿಂಚಿನೋಪಾದಿಯಲ್ಲಿ ಪಟುತ್ವವಾಗಿ ಉದ್ದವಾಗಿಯಿರುವಂಥಾ ಜಡೆಗಳ ಸಮೂಹಉಳ್ಳಂಥಾ ತೈಜಸಯೆಂಬ ಹೆಸರುಉಳ್ಳಂಥಾ ಪ್ರಾತಃಕಾಲದಲ್ಲಿ

ವಿಕಶಿತವಾಗಿರುವ ಕಮಲದೋಪಾದಿಯಲ್ಲಿ ಪ್ರಕಾಶಿಸುವ ಮುಖಉಳ್ಳ ಮಹೇಶ್ವರನನ್ನು॥ ... ... ...

ಮೂ॥ ವ॥ ಆಧ್ಯಾನಾಪರೋಕ್ಷನಂಮಾಡಿ ಆರುಸಾವಿರ ಜಪಮಂ ಪ್ರತಿಪಾದನಂ ಗೈದಾತಂಗಾಯುನಂತರಂ॥ ॥ಟೀ॥ ಧ್ಯಾನದಿಂದ ಆ ಮಹೇಶ್ವರನ್ನ ಪ್ರತ್ಯಕ್ಷಮಾಡಿಕೊಂಡು, ಯಥಾವಿಧಿಯಿಂದರ್ಚಿಸಿ, ಆರುಸಾವಿರ ಜಪವನ್ನು ಸಮರ್ಪಣೆಮಾಡಿ ಆಮೇಲೆ॥ ... ...

ಮೂ॥ ಉತ್ಪಲಮಾಲಿಕಾವೃತ್ತಂ॥ ಚಾರುವಿಶುದ್ಧಚಕ್ರದಲಿಶೋಡಷಸುಸ್ವರಮಾಲೆಯಿಂದೆಪ್ಪೋ। ಳ್ಪೆರಿರೆಭೂತಪಂಚಕದಕಾಲಹರಿತ್ಕಮಲೋತ್ತರಸ್ಫುರ। ಶ್ಗೌರಪಿಶಂಗವರ್ಣಪರಿವೇಷಮೆವಿಗ್ರಹಮಾಗಿರಲ್ಕೆವೈ। ಕಾರಿಕಮಂಟಿಯುಂಟದವೊಲೊಪ್ಪುವಚೇತನನಂತದಂಶನಂ॥ ॥ಟೀ॥ ಮನೋಹರವಾದಂಥಾವಿಶುದ್ಧವೆಂಬ ಪದ್ಮದಲ್ಲಿ ಹದಿನಾರಾದಂಥಾ, ಅಕಾರವೇ ಆದಿಯಾದ ಸ್ವರಾಕ್ಷರಗಳ ಪಜ್ತಿಯಿಂದಲೆ, ಶ್ವೇತವರ್ಣ ಹೊಂದಿಯಿರುತ್ತಲಿರಲಾಗಿ, ಪಂಚಭೂತಗಳ ಕಾಲವೆಂಬ ಹರಿದ್ವರ್ಣವಾದ ಕಮಲದ ಮೇಲೆ, ಪ್ರಕಾಶಿಸುತ್ತಲಿರುವ, ಶುಭ್ರವರ್ಣದಲ್ಲಿ ಕೂಡಿದ ಅರಿಶಿನವರ್ಣವಾದ ಪರಿಧಿಯು ಶರೀರವಾಗಿರುವದ್ದರಿಂದಲೆ, ವಿಕಾರತ್ವವು ಹೊಂದಿಯೂ ಹೊಂದದಹಾಗೆ ವಪ್ಪಿಯಿರುವ, ಚೈತನ್ಯಸ್ವರೂಪನನ್ನು, ತದಾಂಶನಾದಜ್ಞಾತೃವಿನನ್ನು॥ ... ... ... ॥೧॥

ವ॥ ಸ್ಮೃತ್ಯುಪಕಂಠಲಗ್ನನಂಗೈದು, ಸಾಸಿರಜಪವಂಕೊಟ್ಟು ತದಗ್ರದಲ್ಲಿ॥ ॥ಟೀ॥ ಸ್ಮರಣೆಯಿಂದ ಕಂಠಸಮೀಪದಲ್ಲಿಯಿರುವನ ಮಾಡಿ, ಪೂರ್ವೋಕ್ತಪ್ರಕಾರವಾಗಿ, ಸಾವಿರ ಜಪವನ್ನು ಕೊಟ್ಟು, ಅದರ ಮೇಲ್ಗಡೆಯಲ್ಲಿ॥ ... ... ॥೧॥

ಮೂ॥ ಶಾರ್ದೂಲವಿಕ್ರೀಡಿತವೃತ್ತಂ॥ ನೇತ್ರದ್ವಂದ್ವಸರೋಜಪತ್ರಯುಗಮೇಹಂಕ್ಷಂಸ್ವರೂಪಾಗಿರ। ಲ್ಗೋತ್ರಾಧೀಶಸುತಾಸಹಾಯನೆಮುಮುಕ್ಷುರ್ವಾತ್ರಕಂಸತ್ಯಮೇ। ಕ್ಷೇತ್ರಸ್ಥಾನದಿತಾರಮಂವಚಿಪನಾಸಂಜ್ಞಾಲಸಚ್ಛಿಕ್ರದೊ। ಳ್ವಿತ್ರಸ್ಥಾಖಿಲದೋಷಸಂಪರಮನಂಸಚ್ಚಿತ್ಸುಖಾಕಾರನಂ॥

||ಟೀ|| ಯೆರಡುನೇತ್ರವೆಂಬ ಕಮಲದಳಯುಗ್ಮವೇ, ಹಂಸಂ, ಯೆಂಬ ಅಕ್ಷರಸ್ವರೂಪವಾಗಿರುತ್ತಯಿರಲಾಗಿ, ಪರ್ವತರಾಜನ ಪುತ್ರಿಯಾದ ಪಾರ್ವತಾದೇವಿಯೆ ಸಹಾಯವಾಗಿಯುಳ್ಳ, ವಿಶ್ವೇಶ್ವರನೆ ಮರಣೋನ್ಮುಖವಾದ ಇಚ್ಛೆಯುಳ್ಳ ಜನಸಮೂಹಕ್ಕೆ, ಯತಾರ್ಥವಾಗಿ ಕಾಸಿಕ್ಷೇತ್ರದಲ್ಲಿ ಸಂಸಾರತರಿಸೋವಮಾರ್ಗವನ್ನು ಉಪದೇಶಮಾಡುತ್ತಾನೆಯೋ, ಆ ಕಾಸಿಯುಂಬ ನಾಮಧೇಯದಿಂದ ಪ್ರಕಾಶಿಸುತ್ತಲಿರುವ,ಆಜ್ಞಾಚಕ್ರವೆಂಬಕಮಲದಲ್ಲಿ, ಹೊಂದದೆಇರುವ ದೋಷವಿರುವಂಥಾ, ಪರಾತ್ಪರನಾದಂಥಾ,ಸತ್ತು,ಚಿತ್ತು, ಆನಂದ ಯಂಬಶರೀರಉಳ್ಳಂಥಾವಸ್ತುವನ್ನು||

ಮೂ|| ವ|| ಭಾವನಾಮಂದಿರಕುಟುಂಬಿಯುಂಗೈದು । ಸಾಸಿರಜಪಮಂನಿಯೋಗಿಸಿಮುಂದೆ||ಟೀ||ಭಾವನೆಮನೆಯಲ್ಲಿಯಿರುವಕುಟುಂಬವಂತನ ಮಾಡಿ ಸಾಸಿರಜಪವನ್ನು ಸಮರ್ಪಿಸಿ ಅದರ ಮುಂದುಗಡೆಯಲ್ಲಿ||

ಮೂ|| ಜಂಪೆ|| ಅನುಪಮಬ್ರಹ್ಮರಂದ್ರಾಸ್ಯವಾಗಿಹಹೃದಯ।ವನಜದಲಿಕರ್ನಿಕಾಪ್ರಣವಪೀಠದಲಿ|| ||ಟೀ|| ಉಪಮಾನರಹಿತಮಾದ ಬ್ರಹ್ಮರಂದ್ರಮುಖವಾಗಿರುವ ಹೃದಯವೆಂಬ ನಾಮಧೇಯಉಳ್ಳ ಕಮಲದ ಮಧ್ಯಭಾಗದಲ್ಲಿಯಿರುವ ಕರ್ನಿಕಾರೂಪವಾದ ಓಂಕಾರವೆಂಬ ಪೀಠಮಧ್ಯದಲ್ಲಿ|| ... ... ||೧||

ಶ್ವೇತಪಟಯುಗಳೋಪವೀತಗಳರಂಗಿನಿಂ।ಭೂತಿತ್ರಿಪುಂಡ್ರವಿದ್ಯೋತಿತಾಳಿಕದಿಂ|| ||ಟೀ|| ಶುಭ್ರಮಾದ ವಸ್ತ್ರದ ಶುಭ್ರವಾದ ಯಗ್ನೋಪವೀತದ ಈ ಯೆರಡರ ಕಾಂತಿಯಿಂದಲು ವಿಭೂತಿತ್ರರೇಖೆಗಳಿಂದ ಪ್ರಕಾಶಮಾಡಲ್ಪಟ್ಟ ಫಾಲಫಲಕದಿಂದಲೂ|| ... ||೨||

ರುದ್ರಾಕ್ಷಮಕುಟದಿಂ ರುದ್ರಾಕ್ಷ ಕಟಕದಿಂ । ರುದ್ರಾಕ್ಷಮಾಲೆಯಿಂ ರೂಪೆಸೆವ ತನುವಿಂ ||ಟೀ|| ರುದ್ರಾಕ್ಷಿಯಲ್ಲಿ ಮಾಡಿದ ಕಿರೀಟದಿಂದಲೂ, ರುದ್ರಾಕ್ಷಿಯಲ್ಲಿ ಮಾಡಿದ ಹಸ್ತಕಡಗದಿಂದಲೂ,ರುದ್ರಾಕ್ಷಿಯಲ್ಲಿಮಾಡಿದ ಕಂಠಮಾಲೆಯಿಂದಲೂ, ಸ್ವರೂಪವಾಗಿ ಪ್ರಕಾಶಿಸುತ್ತಿರುವ ಶರೀರದಿಂದಲೂ|| ... ||೩||

ಸಿದ್ಧಪದ್ಮಾಸನದಿ ಚಿನ್ಮುದ್ರೆಯಿಂದಯಾ । ಬುದ್ಧಿಯಿಂ ನಸುನಗೆಯ

ಪೊಗರೊಗುವವೊಗದಿಂ ||ಟೀ|| ಸಿದ್ಧವಾದ ಪದ್ಮಾಸನದಲ್ಲಿ ಇದ್ದು ಕೊಂಡು, ಜ್ಞಾನಮುದ್ರೆಯಿಂದಲು ಪರದುಃಖ ಹೋಗಲಾಡಿಸುವ ಬುದ್ಧಿ ಯಿಂದಲು, ಮಂದಹಾಸದ ಹೆಚ್ಚಿಗೆಯು ಹೊಂದಿದ ಮುಖದಿಂದಲು ||೪||

ವ್ಯಕ್ತಾಕ್ಷರವ ನುಡಿವ ವಾಕ್ಯದಿಂ ಭವಹರಣ | ಶಕ್ತಿಯಿಂದೊಪ್ಪುವಾ ಚಾರ್ಯಪುಂಗವನಾ ||ಟೀ|| ಸ್ಫುಟವಾದ ಅಕ್ಷರಗಳುಳ್ಳ ಶಬ್ದಗಳಿಂದ, ಜನನಮರಣ ರೂಪಸಂಸಾರವನ್ನು ಅಪಹರಿಸುವಂಥಾ, ಸಾಮರ್ಥ್ಯವುಳ್ಳ ಗುರುಶ್ರೇಷ್ಠನನ್ನು || ... ||೫||

ಮೂ|| ವ|| ಮನಸೋತ್ಕಂಠ ರಾಜಧಾನಿ ವಿಭುವಂಗೈದು, ಸಾಸಿರ ಜಪ ಮಂ ಕೈಗಾಣಿಕೆ ಕೊಟ್ಟು, ಸಂಸಾರ ದುರ್ಗ ಭೃಗುಮಾರ್ಗ ಪಥನ ಪರಿಧ್ವಸ್ಥ ಸಂತೋಷನಂ ಕೈವಿಡಿವುದೆಂದುಂ, ಈ ಪ್ರದೇಶದಲ್ಲಿ ಗಣೇಶಂಗಾರ್‍ನೂರು, ಬ್ರಹ್ಮಂಗೆಸಾವಿರ, ವಿಷ್ಣುವಿಂಗೆ ಯೆರಡುಸಾವಿರ, ರುದ್ರಂಗೆ ಮೂರುಸಾವಿರ, ಈಶ್ವರಂಗೆ ನಾಲ್ಕುಸಾವಿರ, ಸದಾಶಿವಂ ಗೈದುಸಾವಿರ, ಶ್ರೀಗುರುವಿಂಗಾರುಸಾವಿರ, ಜಪಮಂ ಸಮರ್ಪಿಸಿ, ಪ್ರಾರ್ಥಿಸುವದೆಂಬುದೊಂದು ಪಕ್ಷ. ಈಪಕ್ಷದ್ವಯಗಳೋಳ್ ಯಥಾ ಸಾಂಪ್ರದಾಯುಮಾಗಿ. ಯಾವ ಜೀವಮಿಂತಾರಾಧಿಸುತ್ತಿರಲ್ಕಾ,ಜನ್ಮೋಪರಿ ವಿದ್ಯಮಾನಶರೀರಂ ದೇವಾಸುರ ತಿರ್ಯಜ್ಞಾರಾದಿಗಳೊಳಾವುದಾಗಲಿ, ಆಕಾಲದಲ್ಲಿ, ಪೂರ್ವಾಚರಿತ ಹಂಸಮಂತ್ರ ಜಪ ಪ್ರದಾನ ಪ್ರಸನ್ನರಾದ, ಗಣೇಶಾದ್ಯಮರೇಶ್ವರರಾ ಗುರುಮೂರ್ತಿಯುಂ ಪರಿಗ್ರಹಿಸಿಬಂದೂ ||ಟೀ|| ಮನಸ್ಸಂಬಂಧವಾದ ಆಸಕ್ತಿಯಂಬ ಧೊರೆಯಿರುವ ಪಟ್ಟಣಕ್ಕೆ ಪತಿಯಂ ಮಾಡಿ, ಹಿಂದೆ ಹೇಳಿದ ಗುರುವಿಗೆ ಯಥಾವಿಧಿಯಿಂದಪೂಜೆಯಂ ಮಾಡಿ, ಪೂರ್ವದಿ ನಾನುಷ್ಠಿತ ಮಂತ್ರನೃತ್ತಿಯಲ್ಲಿ ಸಹಸ್ರ ಜಪವನ್ನು ಕೈಗಾಣಿಕೆಯಾಗಿ ಕೊಟ್ಟು ಜನನ ಮರಣರೂಪ ಸಂಸಾರವೆಂಬ ಪರ್ವತದ ಝರಿಯ ದಾರಿಯಿಂದ ಬಿದ್ದದ್ದರ ದೆಶೆಯಿಂದ ಹೋಗಲಾಡಿಸಲ್ಪಟ್ಟ ಸುಖವುಳ್ಳಂಥಾ ನನ್ನನ್ನು ಕೈಹಿಡಿದು ಯೆತ್ತಬೇಕು ಯೆಂಬುವದು ಒಂದು ಪಕ್ಷ. ಈ ಸ್ಥಲದಲ್ಲಿ ಆಧಾರಚಕ್ರದಲ್ಲಿ ಇರುವ ಗಣಪತಿಗೆ ಆರುನೂರು ಸ್ವಾಧಿಷ್ಠಾನ ಚಕ್ರದಲ್ಲಿ ಇರುವ ಬ್ರಹ್ಮಂಗೆ ಸಾವಿರ, ಮಣಿಪೂರಕಚಕ್ರ

ದಲ್ಲಿ ಇರುವ ವಿಷ್ಣುವಿಂಗೆ ಯರಡುಸಾವಿರ,ಅನಾಹತ ಚಕ್ರದಲ್ಲಿ ಇರುವರುದ್ರಂಗೆ ಮೂರುಸಾವಿರ, ವಿಶುದ್ಧ ಚಕ್ರದಲ್ಲಿ ಇರುವ ಈಶ್ವರಂಗೆ ನಾಲ್ಕುಸಾವಿರ,ಆಗ್ನೇಯ ಚಕ್ರದಲ್ಲಿ ಇರುವ ಸದಾಶಿವಂಗೆ ಐದುಸಾವಿರ, ಸಹಸ್ರಾರ ಚಕ್ರದಲ್ಲಿ ಇರುವ ಶ್ರೀಗುರುವಿಂಗೆ ಆರುಸಾವಿರ ಜಪವನ್ನು ಸಮರ್ಪಿಸಿ ಪ್ರಾರ್ಥನೆ ಮಾಡುವದೆಂಬುದಿದು ಒಂದು ಪಕ್ಷ. ಈಯರಡು ಪಕ್ಷದಲ್ಲಿಯೂ ಗುರು ಉಪದೇಶ ಸಾಂಪ್ರದಾಯ ಹಿಡಿದುಕೊಂಡು ಪುರುಷನು ಯೆಷ್ಟು ಪರಿಯಂತರವು ಬದುಕಿ ಇರುತ್ತಾನೆಯೊ ಆವರಿಗ್ಯು ಪೂರ್ವೋಕ್ತ ಪ್ರಕಾರವಾಗಿ ತತ್ತದ್ದೇವತೆಗಳಿಗೆ ಜಪ ಸಮರ್ಪಣೆಯಂ ಮಾಡಿ ಪೂಜೆಮಾಡುತ್ತಾ ಇರಲಾಗಿ ಪೂರ್ವಜನ್ಮಕ್ಕಿಂತಲು ಮುಂದೆ ಬರುವಶರೀರವು ದೇವತೆಗಳು ರಾಕ್ಷಸರು ಮೃಗಪಕ್ಷಾದಿಗಳು ಮನುಷ್ಯರೊಳಗೆ ಯಾವದಾದರು ಒಂದು ದೇಹದಲ್ಲಿ ಇರುವ ಕಾಲದಲ್ಲಿ ಪೂರ್ವದಲ್ಲಿ ಉಪಾಸನೆ ಮಾಡಿದಂಥಾ ಹಂಸಮಂತ್ರ ಜಪಸಮರ್ಪಣೆ ಮಾಡಿದುದರಿಂದ ಸಂತುಷ್ಟರಾಗಿ ಅನುಗ್ರಹ ಉಳ್ಳಂಥಾವರಾದ ವಿಘ್ನೇಶ್ವರನೇ ಮೊದಲಾದ ದೇವತೆಗಳು ಶ್ರೀಗುರುಮೂರ್ತಿ ಶರೀರವನ್ನು ಹಿಡಿದು ಕೊಂಡುಬಂದು॥

ಮೂ॥ ಜಂಪೆ॥ ಅಂಜದಿರು ಮಗನೆ ತಾಪಂ ಜೈಸಿದ್ದೈ ವಜ್ರ। ಪಂಜರದ ಗಿಳಿಗೆ ಮುದಿಮಂಜರನ ಕಿಟುಕೆ ॥ಟೀ॥ ಭಯಬೀಳಬೇಡ ಸುತನೇ?ಅಜ್ಞಾನದಿಂದ ಹುಟ್ಟದ ಸಂತಾಪವನ್ನು ಜೈಸಿದಂಥಾವನಾದ್ಯೆಯ್ಯು. ಅದುಹ್ಯಾಗೆ ಅಂದರೆ ವಜ್ರದಿಂದ ಮಾಡಿದ ಗೂಡಿನಲ್ಲಿ ಇರುವ ಶುಕಕ್ಕೆಮುದಿಬೆಕ್ಕಿನಭಯವೆ॥ ... ॥೧॥

ಪೋದುದಿನ್ನಿರದು ಭವಪೊಸತಲ್ಲವೆಂದುಶ್ರೀ। ಪಾದರೇಣುವಿನ ಸಂಪರ್ಕ ಮಾತ್ರದಲೆ ॥ಟೀ॥ ಪುನರುತ್ಪತ್ತಿಯಂಬ ಜನ್ಮವು ಹೋದಂಥಾದ್ದಾಯಿತು. ಇನ್ನು ಬರುವದಿಲ್ಲ. ಹೊಸದಲ್ಲದೆ ಇರುವ ನಮ್ಮ ಸಂಬಂಧವಾದ ಮೋಕ್ಷಕೊಡುವ ಪಾದಧೂಳಿ ಸಂಬಂಧ ಮಾತ್ರದಿಂದಲೆ ಭವ ಹೋಯಿತು॥ ... ॥೨॥

ಯೆಂದು ಲಾಲಿಸಿ ಕರೆದು ಮುಂದೆ ಕುಳ್ಳಿರಿಸಿದಯ। ದಿಂದನಿನ್ನ ಸುವಿನೊಡನೊಂದಿರುವದೇನು ॥ಟೀ॥ ಹೀಗೆಂದು ಸಂತವಿಸಿ ಬಾಯೆಂದು

ಕರೆದು ಯೆದುರಾಗಿ ಕುಂಡ್ರಿಸಿಕೊಂಡು ಅತ್ಯಾಂತ ಕೃಪಾಕಟಾಕ್ಷದಿಂದ ನೋಡಿ ನಿನ್ನ ಪ್ರಾಣವಾಯುವಿನ ಕೂಡೆ ಹೊಂದಿ ಇರುವದೇನು ॥೩॥

ಆನುನುವ ಪರಿಹಸ್ತವಾಗಿ ಭಾವಿಸುಭಾವ । ಈವಾರ್ಗವಾದ ಬಗೆಯೆ ನೆಂದು ಕೇಳು ॥ಟೀ॥ ಆವುಂತ್ರವರ್ನಗಳನ್ನು ವ್ಯತ್ಯಸ್ತವಾಗಿ ಮನಸ್ಸಿನಿಂದ ತಿಳಿದುಕೊಂಡು ಈ ಆಕ್ಷರಗಳು ವ್ಯತ್ಯಸ್ತವಾದ ಮಾರ್ಗದ ರೀತಿಯೇನು ಯೆಂದು ಪ್ರಶ್ನೆ ಮಾಡಿದಂಥಾವನಾಗು॥ ॥೪॥

ಆಗಸೋಹಂ ಪದತೆಯ್ಯೆದಲದ ಕರ್ಥವೇ । ನಾಗುವದೆನೆಲ್ಲತ್ಯಾ ನಾದಾಪುರುಷನೆ ॥ಟೀ॥ ಪೇಳಿದಂಥಾಕಾಲದಲ್ಲಿ ಸೋಹಂ ಯಂಬ ಪದತ್ವವನ್ನು ಆಮಂತ್ರಾಕ್ಷರಗಳು ಹೊಂದಿದುದರಿಂದ ಆಪದಕ್ಕೆ ಯೇನ ಅರ್ಥವಾಗುತ್ತೆ ಅಂದರೆ ಯತಾರ್ಥವಾಗಿ ಪುರುಷ ಶಬ್ದ ವಾಚ್ಯವಾದಆತ್ಮ ಸ್ವರೂಪವೆ ... ॥೫॥

ನಾನೆಂಬುದೊಪ್ಪುವದನಾತ್ಮ ಸಂಸರ್ಗ ವಿರ।ದಾನಂದಘನವಖಂಡಾನುಭವವೇದ್ಯಂ॥ ॥ಟೀ॥ ಆ ಆತ್ಮ ಸ್ವರೂಪವೆ ನಾನೂಯಂಬದಾಗಿ ತಿಳಿದುಕೊಂಡರೆ ದೇಹಾದ್ಯನಾತ್ಮ ಸಂಬಂಧ ನಿನಗೆಯಿರದು. ಆ ಆನಂದಾಧಿಕವಾದಂಥಾವನನ್ನು ಖಂಡವಿಲ್ಲದೆ ಅನುಭವದಿಂದ ತಿಳಿಯುವದಕ್ಕೆ ಯೋಗ್ಯವಾದಂಥಾವನನ್ನು॥ ... ... ॥೬॥

ಕಂಚುಕಂಜಗುಳ್ದನಾಗಾಧೀಶನಂದದಿಪ್ರ । ಪಂಚವಿರಹಿತನಾದಪರಮೇಶನಪ್ಪೆ॥ ॥ಟೀ॥ ಪರೆಬಿಟ್ಟಂಥಾ ನಾಗೇಂದ್ರನಹಾಗೆ ಪಂಚ ಭೂತಗಳಕಾರ್ಯವಾದ ಜಗದ್ರಹಿತನಾದ ಚಿತ್ಸ್ವರೂಪನಾದ ಪರಮೇಶ್ವರನೇನೀನು ಆಗುತ್ತಲಿದ್ದೀಯೆ॥ ... ... ॥೭॥

ಗೀತಾ॥ ಕಾದಚಿನ್ನಕ್ಕೆನಸುಬೆಳಗಾರಸೋಂಕೆ । ಚೆಚ್ಚುವಂದದಿ ಮೊದಲಮಂತ್ರೋಚ್ಚಾರಣೆಯು।ಕರಣದಿಂಶುದ್ಧನಾದನೀಂಕಾಬ।ನಾನೇ ಪುರುಷನೆಂದೀವಿಕಾರವಂಪೊಂದೆಮುಂದೆ॥ ॥ಟೀ॥ ಚನ್ನಾಗಿ ಕಾಸಿದ ಚಿನ್ನಕ್ಕೆ ಟಂಕದಕೂಡೆ ಸ್ವಲ್ಪವಾಗಿ ಬೆಳಗಾರ ಸೋಂಕಿದರೆ ಅಂಟಿಕೊಂಬುವಹಾಗೆ ಪೂರ್ವದಲ್ಲಿ ಹಂಸಮಂತ್ರ ಜಪಮಾಡಿದ್ದರಿಂದ ಪರಿಶುದ್ಧನಾದ ನೀನು ನಾನೇಪುರುಷನುಯಂಬದಾಗಿ ನಿನ್ನ ಸ್ವರೂಪು ನೀನು

ಕಾಣುತ್ತಲಿದ್ದೀಯೆ. ಜನನಮರಣಉಳ್ಳ ದೇಹರೂಪ ವಿಕಾರವನ್ನು ಹೊಂದುವದಿಲ್ಲ. ಯತಾರ್ಥವು॥ ... ॥೧॥

ಮೂ॥ ವ॥ ಇಂತ ಜಪಗಾಯತ್ರಿವಿಧಾನಮಂಪೇಳಿ, ಪಂಚಾಕ್ಷರಿಮಹಾ ಮಂತ್ರಮಂ ಸರ್ವಮಂತ್ರೋಜ್ಜೀವನಮಂ ತಾರಕಮಂ ಯೆಲ್ವೈಭೂಪಾ ಲನೆ॥ ॥ಟೀ॥ ಈಪ್ರಕಾರವಾಗಿ ಅಜಪಗಾಯಿತ್ರಿಮಾಡುವ ವಿಧಿಯ ನ್ನುಹೇಳಿ ಸಕಲಮಂತ್ರಂಗಳನ್ನು ಉತ್ಕೃಷ್ಟವಾಗಿ ಜೀವಿಸುವಹಾಗೆ ಮಾಡುವಂಥಾ ಅಜ್ಞಾನವನ್ನುತ್ತರಿಸುವಹಾಗ ಮಾಡುವಂಥಾ ಪಂಚಾಕ್ಷ ರೀಯೆಂಬ ಮಹಾಮಂತ್ರವನ್ನು ಪೇಳ್ದುದಿಲ್ಲಿಗೆ ಮನೋಭೂಪಾಲನೆ॥

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕವಿ
ಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣಪ್ರಭು
ವಿರಚಿತವಾದ ನಿಜದೀಪಿಕಾ ರತ್ನಗ್ರಂಥದಲ್ಲಿ
ಪದ್ಧತಿ ೧೮ ಕ್ಕಂ ಅಜಪಗಾಯತಾದಿ
ಮಹಾಲಕ್ಷಣ ಸಂಪೂರ್ಣಂ॥

(ಇತಿಪದ್ಧತಿ ೧೮ ಅಜಪಗಾಯಿತ್ರಿ ಪದ್ಧತಿ ಪೇಳಿದಿಲ್ಲಿಗೆ ಮಂಗಳಂ)

---

## ೧೯ ಮಂತ್ರಯೋಗ ಪದ್ಧತಿ ಪ್ರಾರಂಭವು.

---

ಮೂ॥ ತ್ರಿಪುಡೆ॥ ಭೂತಕಾರಣಮಪ್ಪವರ್ಣಸ । ಮೇತಮಾದಮ ಹಾಮನುವಸಂ।ಪ್ರೀತಿಯಿಂತಿಳಿವುದತದರ್ಥವಪಿರಿಯರಿಂದಾ॥ ॥ಟೀ॥ ಪಂ ಚಭೂತಗಳಿಗೆ ಕಾರಣವಾದ ಅಕ್ಷರಸಹಿತವಾದ ಮಹಾಮಂತ್ರದ ಅ

ರ್ಥವನ್ನು ಅತ್ಯಾಂತ ವಿಶ್ವಾಸದಿಂದ ಈ ಮಂತ್ರಾರ್ಥವೇನೆಂದು ದೊಡ್ಡವರಿಂದ ಕೇಳಿತಿಳಿದು ಕೊಳ್ಳುವದು॥ ... ॥೧॥

ನಿತ್ಯಮಂಗಲವಾದನಿರ್ಮಲ।ನಿಜವಶಿವಶಬ್ದಲಕ್ಷ್ಯವಾಚ್ಯಂ। ಪ್ರತ್ಯಯಕ್ಕೆಚತುರ್ಥಿಯಸುಸಂಬಂಧಮರ್ಥಂ॥ ॥ಟೀ॥ ಯಾವಾಗ್ಯ ಸುಖಸ್ವರೂಪವಾದ ಮಾಯಾಮಲರಹಿತವಾದ ಸದ್ರೂಪವಾದ ವಸ್ತುವೇ ಶಿವಶಬ್ದಕ್ಕೆ ಮುಖ್ಯವಾಗಿ ಹೇಳುವದಕ್ಕೆ ಯೋಗ್ಯವಾದವಸ್ತು ನಾಲ್ಕನೆ ವಚನವಾದ ಪ್ರತ್ಯಾಯಕ್ಕೆ ಜೀವೇಶ್ವರರಿಗೆ ಏಕಸ್ವರೂಪ ಸಂಬಂಧ ಅರ್ಥವು॥ ... ... ... ॥೨॥

ಅಭಿಲಷಿತವಸ್ತ್ವಾಪ್ತಿಯರ್ಥವ।ನಧಿಕರಿಸಿದನಮಃಪದವಜೀ । ವಿಭವಣಿಯೆನಿಪುದುಪೂರ್ವಾಪರಪದಗಳಿ॥ ॥ಟೀ॥ ಇಚ್ಛೈಸಲ್ಪಟ್ಟ ಪದಾರ್ಥದ ಪ್ರಾಪ್ತಿಯನ್ನು ಹೊಂದಿದಂಥಾ ನಮಃಯೆಂಬುವಪದವು ಜೀವವಾಚಕವಾದಂಥಾದ್ದು. ಪ್ರಥಮಪದ ಯರಡನೆ ಪದಗಳ॥ ॥೩॥

ಯುಗದೊಳಾವುದುಮುಖ್ಯಮೆನೆಮೊದ। ಲೊಗೆದುದದರಿರವೇನೆನಲ್ಭಾ।ವಗತಭೇದಗಳಿರಲಿಭಾವ್ಯಂವಸಿಸಿರುವುದು॥ ॥ಟೀ॥ ಪೂರ್ವಾಪರ ಪದಗಳೆರಡರಲ್ಲಿ ಯಾವದು ಮುಖ್ಯವಾದುದುಯೆಂದರೆ ಮುಂದಹೇಳಿದ್ದು ಅದು ಇರೋಣ ಹ್ಯಾಗೆಅಂದರೆ ನಾನಾಮತಸ್ತರ ಭಾವದಲ್ಲಿ ಹೊಂದಿಯಿರುವ ಭೇದಗಳು ಯೆಲ್ಲಿಯಾದರುಹೋಗಲಿ ಭಾವಿಸುವದಕ್ಕೆ ಯೋಗ್ಯವಾದ ವಸ್ತುವನ್ನು ಹೊಂದಿಯಿರುತ್ತಲಿಧೆ॥ ॥೪॥

ಯಾವನಿಜದಿಂದದನೆಪಡೆವುದು।ಭಾವವಿಾಭಾವಾಕೃತಿತ್ವವ।ಸೇವಿಸದುತದ್ಭಾವ್ಯಮಿದುಸತ್ಯಾವಬೋಧಂ॥ ॥ಟೀ॥ ಯಾವ ಸಚ್ಚಿದಾನಂದ ಸ್ವರೂಪವಾದ ನಿಜವಸ್ತುವಿನ ಭಾವನೆಯಿಂದ ಆ ಸಚ್ಚಿದಾನಂದ ಸ್ವರೂಪವಾಗುವದೊ। ಆಭಾವದ ಆಕಾರವನ್ನು ಹೊಂದುವದಿಲ್ಲ. ಪೂರ್ವಹೇಳಿದ ಭಾವದಿಂದ ಭಾವಿಸತಕ್ಕ ಸತ್ಯಜ್ಞಾನಾನಂದ ವಸ್ತುವು ॥೫॥

ರವಿಯುಪೂಜಾಫಲವುತಾಮಸ।ಭವನಮೇಚಂದ್ರಾರ್ಚನೆಯುತಾ।ಜವನೊಡರ್ಚುವದೇ ಕೃಶಾನುಸಪರ್ಯೆಯಹುದೇ॥ಟೀ॥ಸೂರ್ಯಾರ್ಚನೆಮಾಡಿದಫಲವು ಕತ್ತಲೆವುಂಟುಮಾಡಿಕೊಟ್ಟೀತೆ।ಚಂದ್ರನಪೂಜೆ ಮಾಡಿದಕ್ಕೆ ಫಲವು ದೇಹ

ಕ್ಕೆ ತಾಪವನ್ನು ಕೊಟ್ಟೀತೆ. ಸಾಯಂಪ್ರಾತಾಗ್ನಿ ಹೋತ್ರನ ಪೂಜೆ ಮಾಡಿದಫಲವುಅಪ್ರಯೋಜನವು ಆದೀತೆ ||೬||

ದೀನತೆಗೆ ಹರಿಭಜನೆದೂನಾ । ದಿಗತಿದಾಯಕವೇಗಿರೇಂದ್ರಸು । ತಾಸು ಸುಪರ್ಣಾವಮಹುದೆಪರಿಭವದಾನದುರ್ಯಂ ||ಟೀ|| ದಾರಿದ್ರತ್ವಕ್ಕೆವಿಷ್ಣುವಿನ ಸ್ಮರಣೆ ಮಾಡಿದರೆ ದೂಷೋದಿಮಾರ್ಗ ಗಮನಕೊಟ್ಟೀತೇ. ಪರ್ವತರಾಜಕುಮಾರಿಯಾದ ಪಾರ್ವತಿಯು ಉಪಾಸನೆ ಮಾಡಿದ ಫಲವು ಅಪಜಯ ಕೊಡುವದಾದೀತೆ|| ... ||೧||

ಏಕದಂತೋಪಾಸನೆಯುವಿ । ಘ್ನೈಕ ಕಾರಣವೇಯುಜನಮಂ। ನಾಕನದಿ ಪೇರುವದೆ ದುಷ್ಕೃತ ಭೀಕರವನು ||ಟೀ|| ವಿನಾಯಕನಪೂಜೆಮಾಡಿದ ಫಲವು ಕಾರ್ಯವಿಘಾತತ್ವಕ್ಕೆ ಮುಖ್ಯಕಾರಣವಾದೀತೆ. ದೇವಗಂಗೆಯ ಸ್ನಾನಪಾನ ಪೂಜಾದಿಗಳು ಮಹಾಭೀತಿಕರವಾದಂಥಾ ಪಾಪಭಯವನ್ನು ಕೊಟ್ಟೀತೆ|| ... ||೮||

ಇಲ್ಲಪುಸಿ ಕಾಮಾನುಗುಣರುಚಿ । ಯಿರಲಿ ಭಜಕರ ಪಙ್ತಿಯಲಿತ । ನ್ನಲ್ಲಿರುವ ಸತ್ಯವನೆ ಶಿವಪದವಾ ಚರಿಪ್ಪುದು ||ಟೀ|| ಅಬದ್ಧವಾದಂಥಾ ಸಂಕಲ್ಪದಿಂದ ಹುಟ್ಟಿದ ಇಚ್ಛಾ ವಿಶೇಷಣ ಅನುಸರಿಸಿದಂಥಾ ಆಸಕ್ತಿಯು ಅನುಭವಿಗಳಲ್ಲಿ ಇಲ್ಲ. ಅಥವಾ ಕಾಮಾನುಗುಣ ರುಚಿಯಿದ್ದರು ಇರಲಿ ಹ್ಯಾಗೆಯಿಲ್ಲವೆನ್ನುತ್ತೀರಿ ಅಂದರೆ ಅನುಭವಿಗಳಾದಂಥಾವರ ಗುಂಪಿನಲ್ಲಿ ಇರುವಸತ್ತಾವಾತ್ರವೇಶಿವಸ್ವರೂಪವನ್ನು ಆಚರಣೆಮಾಡುತ್ತಲಿಧೆ||

ಅದರ ಬಗೆಯೇನೆನಲುಕಾರಣ । ವಾದಪರಬೊಮ್ಮವದು ತತ್ಸಂ। ಗದ ಬಳಕೆಯುಂಟಾದುದೇ ಮಧ್ಯದಲಿ ಮರೆವಾ ||ಟೀ|| ಆಶಿವಸ್ವರೂಪದ ಬಗೆಯು ಯೇನುಅಂದರೆ ಸಕಲ ಜಗತ್ಕಾರಣವಾದ ಪರಬ್ರಹ್ಮವೆ ಅದು. ಆಪರಬ್ರಹ್ಮ ಸಂಬಂಧ ಬಳಸೋಣ ಉಂಟಾದುದೇ ಮೊದಲಲ್ಲಿ ಇಲ್ಲದೆ ಕಡೆಯಲ್ಲಿ ತೋರದೆನಡುವೆಕಾಣಿಸಿಕೊಂಡುಯಿರುವ ||೧೦||

ಅಭ್ರಮುಖ ಭೂತಂಗಳುಪಸಂ । ಹಾರವಾ ಬಳಿಕಾಗಿರುವೆನೀಂ । ಶುಭ್ರಸಪ್ವಯನ ಪ್ರಮೇಯಂ ಶುದ್ಧಸತ್ವಂ ||ಟೀ|| ಆಕಾಶಾದಿ ಮಹಾಭೂತಗಳು ನಾಶವಾಗಿ ಹೋದಮೇಲೆ ನೀನೇ ಮಾಯಾಮಲರಹಿತನಾ

ಗಿರುವೆ. ನಾಶರಹಿತವಾದಂಥಾವನುಪ್ರಮಾಣಾತೀತವಾದಂಥಾವನುಶುದ್ಧ ಸತ್ತಾ ಮಾತ್ರವಾದಂಥಾವನು ಆಗುತ್ತಲಿದ್ದೀಯೋ॥ ॥೧೧॥

ವ॥ ಇಂತೆಂದು ಮಂತ್ರಯೋಗ ಪದ್ಧತಿಯುಂ ಚಿತ್ತಂಗೊಳುವಂತೆರಚಿಸಿ ಇನ್ನೊಂದು ಪ್ರಕಾರಮಂ ಪೇಳುರ್ತಿಪನದೆಂತೆನೆ ॥ಟೀ॥ ಈ ಪ್ರಕಾರವಾಗಿ ಮಂತ್ರಯೋಗ ಪದ್ಧತಿಯನ್ನು ಮನಸ್ಸಿಗೆ ಒಪ್ಪುವಹಾಗೆ ಹೇಳಿ ಇನ್ನೊಂದುಮಾರ್ಗವಾಗಿ ಹೇಳುತ್ತಲಿದ್ದಾನೆ. ಅದು ಹ್ಯಾಗೆಅಂದರೆ॥ ... ...

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕವಿ
ಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣಪ್ರಭು
ವಿರಚಿತಮಾದ ನಿಜದೀಪಿಕಾ ರತ್ನಗ್ರಂಥದಲ್ಲಿ
ಪದ್ಧತಿ ೧೫ ಕ್ಕಂ ಮಂತ್ರಯೋಗ
ಲಕ್ಷಣಂ ಸಂಪೂರ್ಣಂ॥

(ಇತಿಪದ್ಧತಿ ೧೫ ಮಂತ್ರಯೋಗಲಕ್ಷಣಂ ಪೇಳಿದಿಲ್ಲಿಗೆ ಮಂಗಳಂ)

---

## ೧೬ ವೈರಾಗ್ಯ ಪದ್ಧತಿ ಪ್ರಾರಂಭವು.

---

ಮೂಲ॥ ಸಾಂಗತ್ಯ॥ ಕಾಲತ್ರಯಜ್ಞಾನಮುಳ್ಳವರೆ ಜ್ಞಾನ । ಸೀಲರೆಂಬರು ಕೆಲರೇನು ॥ ಹಾಲುವಕ್ಕಿಗೆ ಮುಂದೆ ಬರುವ ವೃತ್ತಾಂತವ । ಪೇಳುವಲ್ಲರಿವುಂಟು ನೃಪನೆ ॥ಟೀ॥ ಮನೋರಾಜನು ಸಿದ್ಧಿಗಳಲ್ಲಿ ಇಚ್ಛೆಯುಂಟಾದಂಥಾವನಾಗಿ, ಪ್ರಶ್ನೆಮಾಡಿದಂಥಾವನಾದ, ಭೂತಭವಿಷ್ಯದ್ವರ್ತಮಾನವೆಂಬ ಮೂರುಕಾಲದಲ್ಲಿಯೂ, ಆದಂಥಾ ವೃತ್ತಾಂತವನ್ನು,

ನಡೆಯುವಂಥಾ ವೃತ್ತಾಂತವನ್ನು, ಯಂಬವುೂರು ವೃತ್ತಾಂತವನ್ನು ಹೇಳುವಂಥಾವರೆ, ಜ್ಞಾನಿಗಳು ಯೆಂದು ಹೇಳುತ್ತಲಿದಾ್ಧರಷ್ಟೆ, ಅದೇನು ಶ್ರೀ ಗುರುವೆ, ಕೇಳ್ಕೆಯ್ಯ ಅರಸೆ, ಹಾಲವಕ್ಕಿಗೆ ಮುಂದೆ ಆಗುವಂಥಾ ಕೆಲಸಗೆಳುಹೇಳುವದರಲ್ಲಿ ಜ್ಞಾನವುಂಟು, ಈ ಸಿದ್ಧಿಯಿಂದ ಪ್ರಯೋಜನವಿಲ್ಲ.

ಧರೆಯೊಳ್ಭಾರದಾಜ ಪಕ್ಷಿಗೆ ಲೋಕದ । ಪೊರಗೊಳಗಣ ವೃತ್ತಾಂತವನು॥ ಅರಿವಲ್ಲಿ ಬಲವುಂಟು ಬೂದಿಯರಾಶಿಯೊ । ಳೆರಗಿದ ಜಾಯಿಲಗಳಿಗೆ ॥ಟೀ॥ ಭೂಮಿಯಲ್ಲಿ ಭಾರದ್ವಾಜ ಪಕ್ಷಿಗೆ ಲೋಕದ ಹೊರಗೆ ಯಿರುವಂಥಾ ವೃತ್ತಾಂತವು, ವಳಗೆ ಯಿರುವ ವೃತ್ತಾಂತವಂ ತಿಳಿದುಕೊಂಬುದರಲ್ಲಿ ಸಾಮರ್ಥ್ಯವುಂಟು. ತಿಪ್ಪೆಯಲ್ಲಿ ಹಾಕಿ ಇರುವ ಬೂದಿರಾಶಿಯಮೇಲೆ ಮಲಗಿರುವ ನಾಯಿಗಳಿಗೆ. ... ॥೧॥

ಕನಸಿನ ಬಿಗುವಿರುವನ್ನ ಬಾರಂ ತನ್ನ । ಜನು ಮಂಗಳನು ಹಿಂದೆ ಪೋದ ॥ ಜನುಮಂಗಳನು ಮುಂದೆ ಬರುವ ಸಪ್ತಾಂತಂಗ । ಳನು ತಿಳಿವಲ್ಲುಂಟುಶಕ್ತಿ ॥ಟೀ॥ ಸ್ವಪ್ನಾವಸ್ಥೆ ಯಿರುವ ಪರಿಯಂತರವು, ಹಿಂದೆ ಹೋದಂಥಾ ಯೇಳು ಜನ್ಮಂಗಳ ವೃತ್ತಾಂತವನ್ನು, ಮುಂದೆ ಬರುವಂಥಾ ಯೇಳುಜನ್ಮಂಗಳ ವೃತ್ತಾಂತವನ್ನು ಅರಿವುದರಲ್ಲಿ ಬಲವುಂಟು ॥೩॥

ಆಹಾರ ವಿಜಯಮುಳ್ಳವರೇ ಧನ್ಯರೆಂ । ದೂಹಿಸುವರು ಕೆಲರೇನು ॥ ನೀಹಾರ ಬಿಂದುಮಾತ್ರದಿ ಜೀವಿತ ವನವ । ಗಾಹಿಸ ವೇಚಕೋರಗಳೂ॥

॥ಟೀ॥ ಊಟಬಿಟ್ಟರುವವರೆ ಧನ್ಯರೆಂದು ಕೆಲವರು ಹೇಳುತ್ತಾರೆ. ಅದೇನು, ಮಂಜಿನ ಬಿಂದುಮಾತ್ರದಿಂದಲೆ ಬದುಕಿ ಯಿರುವದಿಲ್ಲ ವೇಚಕೋರ ಪಕ್ಷಿಗಳು. ... ... ॥೪॥

ವಾತಗ್ರಹಣಮಾತ್ರದಿಂಪ್ರಾಣಧೃತಿಯಹಿ । ವ್ರಾತಮಾಚರಿಸಿರವೇ॥ ಮೂತನಿರ್ಮುಕ್ತ ಸಲಿಲಕಣಮಾತ್ರದಿ। ಜಾತಕವೊಡಲರಕ್ಷಿಸದೆ॥

॥ಟೀ॥ ವಾಯು ಆಹಾರಮಾಡಿಕೊಂಡು ಸರ್ಪಗಳು ಪ್ರಾಣ ಧರಿಸಿಕೊಂಡು ಇರುತ್ತಲಿವೆ, ಮೇಘದಿಂದಬಿಡಲ್ಪಟ್ಟಂಥಾಉದಕದಬಿಂದುಮಾತ್ರದಿಂದ ಚಾತಕಪಕ್ಷಿಯು ಶರೀರವನ್ನು ಕಾಪಾಡಿಕೊಳ್ಳುತ್ತ ಇರದೆ॥೫॥

ಇಂದ್ರಿಯವಿಜಯವಿಭೂತಿಯುಳ್ಳವರೆಮ|ಹೇಂದ್ರರೆಂಬರುಕೆಲರೇನು॥
ತಂದ್ರತೆಯಿಲ್ಲದೆಕೇಳವರವರವಿ|ರುಂಗ್ರತೆಯುಸುಸಾಹಸದಲಿ॥ ||ಟೀ|| ದ
ಶೇಂದ್ರಿಯಗಳ ಜಯವೆಂಬ ಐಶ್ವರ್ಯ ಉಳ್ಳವರೆ ಭೂಮಿಯಲ್ಲಿ ದೇವೇಂದ್ರ
ರುಯೆಂದು ಕೆಲರು ಹೇಳುತ್ತಲಿದ್ದಾರೆ, ಅದೇನು, ನಿದ್ರೆಯಿಲ್ಲದೆ ಕೇಳು-
ಯುಂದರೆ, ಏಕಾಗ್ರತೆಯಿಂದ ಕೇಳ್ವೆಯು ಮನಃಪ್ರಭುವೆ|ಹೀಗೆ ಹೇಳಿಕೊ-
ಳ್ಳುವಂಥಾ ಆಯಾಜನಗಳ ಸಾಹಸಂಗಳಲ್ಲಿ ವಿರೋಧವನ್ನು॥ ||೬||

ಅತಿಸೂಕ್ಷ್ಮವಾದಧ್ವನಿಯುಸಾಲಿಸದಘೋಣಿ|ತತಿಘೋರಾರಣ್ಯಮ
ಧ್ಯದಲಿ ||ಪ್ರತಿಕಾರ್ಯದಲಿತಜ್ಞನಿಲಸ್ಪೃಷ್ಟಿಮಾತ್ರದಿಂ | ರುತವಪೀರವಕು-
ಕ್ಕುಟಗಳೂ॥ ||ಟೀ|| ಅತ್ಯಂತ ಸೂಕ್ಷ್ಮವಾಗಿರುವಂಥಾ ಶಬ್ದವನ್ನ
ಅರಣ್ಯದಲ್ಲಿ ಯಿರುವ ಹಂದಿಗಳ ಗುಂಪುಕೇಳವೆ, ಕಾಲಕಾಲದಲ್ಲಿ ಹುಟ್ಟಿ
ದಂಥಾ ವಾಯುವಿನಸ್ಪರ್ಶಮಾತ್ರದಿಂದಲೆಕೋಳಿಗಳುಕೂಗುವದಿಲ್ಲವೆ॥೭॥

ಕಣ್ಣಿನಿಂದಖಿಲವಕಂಡವರೆಜಾತ| ಪುಣ್ಯರೆಂಬರುಕೆಲರೇನು|ಕಣ್ಣಿಮು-
ಚ್ಚಿಯೆಜತುಕೆಗಳುವಿಶ್ವದವಸ್ತು|ಪುಣ್ಯವನಾಲೋಕಿಸುವವು॥
||ಟೀ|| ಕಣ್ಣಿನಿಂದ ಪ್ರತ್ಯಕ್ಷವಾಗಿ ಸಕಲಜಗಜನ್ಯಪದಾರ್ಥಗಳ
ನೋಡಿದಂಥಾವರು ಯಾರೊ, ಹುಟ್ಟಿದಂಥಾ ಪುಣ್ಯ ಉಳ್ಳವರುಯೆಂದು
ಕೆಲವರು ಹೇಳುತ್ತಾಯಿದ್ದಾರಲ್ಲ, ಅದುಯೇನು, ಹಾಗಾದರೆ ಕೇಳ್ವೆಯು,
ಕಣ್ಣುಗಳ ಮುಚ್ಚಿಕೊಂಡು ಜತಕೆಗಳುಯೆಂಬ ಹುಳುಗಳು, ಪ್ರಪಂಚ
ದಲ್ಲಿ ಯಿರುವ ವಸ್ತುಗಳನ್ನು ನೋಡುತ್ತಲಿದ್ದಾವಲ್ಲ, ಅದರಿಂದ ಪ್ರ
ಯೋಜನನೇನು॥ ... ... ||೮||

ಒಂದುಕಣ್ಣಿಂದೆರಡರನೋಟವನುಕಾಕ | ಬೃಂದವುಪೊಂದಿನಡಸದೆ॥
ಒಂದೆತೆರದಿಹಗಲಿರುಳನೊಳಖಿಲರ್ಥ | ವೊಂದಿನೋಡವಪಿಡಾಲಗಳೂ॥
||ಟೀ|| ಒಂದುಕಣ್ಣಿಂದಲೆ ಯರಡು ಕಣ್ಣಿನ ನೋಟವನ್ನು ಹೊಂದಿ
ವಾಯಸಗಳ ಸಮೂಹವು ನೋಟುವಂಥಾ ನೋಟವನ್ನು ನಡಸುತ್ತಲಿ
ರಲಿಲ್ಲವೆ ಒಂದೇ ಪ್ರಕಾರವಾಗಿ ಹಗಲು ರಾತ್ರೆಗಳಲ್ಲಿ ಸಕಲವಸ್ತುಗಳನ್ನು
ಮಾರ್ಜಾಲಗಳು ನೋಡುತ್ತಲಿರಲಿಲ್ಲವೆ॥ ... ||೯||

ಸರಟಂಗಳಿಗೆಕಾಣಿಸವಪಾತಲಸಾಥ |ಹರಿಪತಿಗಳಭುವನಗಳು||ಸುರಭಿ
ಕಾಣಿಸದೇಪತಿಪದ್ಧಿಮ| ಕರಮಂಡಲಸ್ಥೈಕಕಲೆಯೂ॥ ||ಟೀ|| ಹಂಟೆ

ಗೊದ್ದನೆಂಬ ತಿರ್ಯಗ್ಜಂತುಗಳಿಗೆ, ಪಾತಾಳದಲ್ಲಿ ಯಿರುವ ನಾಗಾದಿ ಪತಿಗಳ ಲೋಕಗಳು ಕಾಣುತ್ತ ಯಿರಲಿಲ್ಲವೆ, ತಿರ್ಯಗ್ಜಂತುಗಳಿಗೆ ಬಂದ ಫಲವೇನು. ಗೋವಿಗೆ, ಪಾಡ್ಯಮಿಯಲ್ಲಿ ಹುಟ್ಟಿದ ಚಂದ್ರನ ಒಂದು ಕಳೆಯು ಕಾಣಿಸುತ್ತಲಿರಲಿಲ್ಲವೆ, ಅದರಿಂದ ಗೋವಿಗೆಬಂದ ಫಲವೇನು॥ ॥೧೦॥

ಹಾಲಿಗೆನೀರಬೆರೆಯಲದನೂಳಿಸಿ ಮರಾಳವಮಾಪಾಲಸೇವಿಸದೆ॥ಮೂಲವನಾಘ್ರಾಣಿಸಿಪಿಪೀಲಿಕೆಫಲ।ಜಾಲವಪೊಂದದೆಮೇಲೆ॥ ॥ಟೀ॥ ಕ್ಷೀರಕ್ಕೆ ನೀರಬೆರಸಿಯಿರಿಸಿದರೆ, ಆನೀರ ವಿಭಾಗವಮಾಡಿಬಿಟ್ಟು, ಹಂಸೆಯು ಆಕ್ಷೀರವಮಾತ್ರವನ್ನು ತೆಗದುಕೊಳ್ಳುತ್ತಾ ಯಿರಲಿಲ್ಲವೆ. ವೃಕ್ಷದ ಬೇರನ್ನು ವಾಸನೆ ನೋಡಿದ ಮಾತ್ರದಿಂದಲೇ,ಯಿರುವೆಗಳು ವೃಕ್ಷದ ಕೊನೆಯಲ್ಲಿಯಿರುವ ಫಲಗಳ ರಸಸ್ವಾದವಂ ಮಾಡುತ್ತಾ ಯಿರಲಿಲ್ಲವೆ॥ ॥೧೧॥

ಇಹದಲ್ಲಿಕಾಯಸಿದ್ಧಿಯನುಳ್ಳವರೆಧನ್ಯ।ರಹರೆಂಬವೃತ್ತಾಂತವೇನು॥ಆಹುದೈಯಕೇಳುಸಿದ್ಧರಲಿನಾಗಾರ್ಜುನ।ಬಹುಸಾಹಸಗಳಮಾಡಿದನೂ॥ ॥ಟೀ॥ ಈಲೋಕದಲ್ಲಿ ಶರೀರ ಹೋಗದೆ ಯಿರುವಹಾಗೆ ಸಿದ್ಧಿ ಮಾಡಿಕೊಂಡುಯಿರುವಂಥಾ ಸಿದ್ಧಪುರುಷರೆ ಕೃತಕೃತ್ಯರು ಯೆಂಬದಾಗಿ, ಕೆಲವರು ಹೇಳುತ್ತಾ ಯಿದ್ದಾರಷ್ಟೆ, ಅದು ಯೇನೈಯ ಗುರುವೆ, ಅದು ಆಹುದೈಯಕೇಳು, ಕಾಯಸಿದ್ಧರ ಸಮೂಹದಲ್ಲಿ, ನಾಗಾರ್ಜುನನೆಂಬ ಕಾಯಸಿದ್ಧನು, ಈಲೋಕದಲ್ಲಿ ಅನೇಕವಿಧಗಳಾದಂಥಾ ಸಾಹಸ ಕೆಲಸಗಳ ಮಾಡಿದನು॥ ... ... ॥೧೨॥

ಕಡೆಯಲ್ಲಿವಿಷ್ಣುಚಕ್ರಕೆತಲೆಯಿತ್ತನು।ಬಡಜೋಗಿಗಳನುಧಿಕ್ಕರಿಸಿ॥ಕಡೆಯಲ್ಲಿಪ್ರಭುವಿನಿಂಗೋರಕ್ಷಕನಗರ್ವ।ಮಡದಿಯಪಾಲಾಯಿತೈಸೆ॥

॥ಟೀ॥ ಯೆಲ್ಲಾಸಾಹಸಗಳನ್ನು ನಾಗಾರ್ಜುನನೆಂಬ ಕಾಯಸಿದ್ಧಪುರುಷನುಮಾಡಿ, ಆಮೇಲೆ ವಿಷ್ಣುವಿನ ಆಯುಧವಾದ ಚಕ್ರಕ್ಕೆ ತಲೆಯನ್ನು ಕೊಟ್ಟಂಥಾವನಾದ. ಪ್ರಮಥರಾದಂಥಾವರು ಬಡಜೋಗಿಗಳಾಗಿ ಬಂದು ಹೇಳಿದಂಥಾವರನು ಧಿಕ್ಕಾರ ಮಾಡಿದಂಥಾವನಾದನು, ಅಂತ್ಯದಲ್ಲಿ ಗೋರಕ್ಷಕನೆಂಬ ಸಿದ್ಧನ ಹಾಂಕಾರವು ಅಲ್ಲಮ ಪ್ರಭುವಿನ ಶಾಪದಿಂದ ಸ್ತ್ರೀಗೆ ಸ್ವಾದೀನವಾಯಿತು॥ ... ॥೧೩॥

ಬದ್ಧರಸದದೆಸೆಯಿಂದಶರೀರದ। ಸಿದ್ಧಿಯಪಡದುಜೀವಿಸುವ ॥ ಸಿದ್ಧರೆಂತೆಂಬಡವಿಯಕಾಲವೆಂಬಗ್ನಿ।ವೃದ್ಧಮಾಗಿಯೆದಹಿಸಿದುದು॥ ॥ಟೀ॥ ಬಂಧಿಸಲ್ಪಟ್ಟಂಥಾ ಪಾದರಸದ ದೆಸೆಯಿಂದ, ಕಾಯಸಿದ್ಧಿಯನ್ನು ಹೊಂದಿ ಬದುಕಿಯಿರುವಂಥಾ ಸಿದ್ಧರ, ಸಮೂಹವೆಂಬ ಅರಣ್ಯವನ್ನು ಅವರ ಅದೃಷ್ಟ ಕಾಲವೆಂಬ ಅಗ್ನಿ ಪ್ರವರ್ಧಮಾನವಾಗಿ, ಸುಟ್ಟು ಬಿಟ್ಟಂಥಾದ್ದಾಯಿತ್ತೈಯ ... ... ॥೧೪॥

ದಿವ್ಯದೇಹವನುಳ್ಳವರೆ ಧನ್ಯರೆಂತೆಂಬ । ಕಾವ್ಯದ ಕಥೆಗಳಿವೇನು ॥ಭವ್ಯನಾದ ಜನ ತಲೆಗೆ ಕೇಡು ಬಂದುದು । ಕಾವ್ಯನ ಕಣ್ಣೊಂದಳಿದುದು॥

॥ಟೀ॥ ದೇವತಾಲೋಕಗಳಲ್ಲಿ ಹುಟ್ಟಿದಂಥಾ ದೇಹಗಳುಳ್ಳ ದೇವತೆಗಳೇ ಕೃತಾರ್ಥರು ಯೆಂಬ ಪುರಾಣಗಳಲ್ಲಿ ಹೇಳಿ ಇರುವ ಕಲ್ಪನಾಕಥೆಗಳು ಇವುಯೇನು. ಇದರ ವೃತ್ತಾಂತ ಚನ್ನಾಗಿ ಹೇಳತಕ್ಕದ್ದು. ಶ್ರೇಷ್ಠವಾಗಿರುವ ಐದು ಮುಖಂಗಳುಳ್ಳ ಬ್ರಹ್ಮನ ಒಂದುತಲೆ ಛೇದನವಾಗಿ ಹೋಯಿತು. ನವಗ್ರಹಗಳೊಳಗೆ ಶುಕ್ರನೆಂಬ ಹೆಸರುಳ್ಳ ಗ್ರಹದಕಣ್ಣು ಒಂದುಹೋಯಿತು. ... ... ॥೧೫॥

ಯಜ್ಞಪುರುಷನ ಪೊಂದುದು ತಲೆ ಸರ್ವರ । ಯಜ್ಞವ ನಡಸುವ ಶುಚಿಯ ॥ ಪ್ರಾಜ್ಞನ ನಾಲಿಗೆಯೊಳು ಶೀಳಾಯ್ತುಕೃ । ತಜ್ಞರಾಗಿಹಸೂರ್ಯೇಂದ್ರರಿಗೆ ॥ಟೀ॥ ಯಜ್ಞಮಾಡುವ ದಕ್ಷಪ್ರಜಾಪತಿಯ ಶಿರಸ್ಸು ಕತ್ತರಿಸಿ ಹೋಯಿತು. ಸಮಸ್ತ ಜನಗಳ ಅಪ್ತುರ್ಯಾಗ ವಾಜಪೇಯ ಪೌಂಡರೀಕಾದಿ ಯಜ್ಞಗಳ ನಡಸುವ ಅಗ್ನಿಹೋತ್ರನ, ನಾಲಿಗೆಯೋಳು ಶೀಳಾಯಿತ್ತೈಯ, ಬುದ್ಧಿವಂತನೇ! ಮಾಡಿದ ಉಪಕಾರದ ಸ್ಮರಣೆ ಉಳ್ಳಂಥಾ ಸೂರ್ಯನಿಗೂ, ದೇವೇಂದ್ರನಿಗೂ. ... ॥೧೬॥

ದಂತಬೀಜಂಗಳ ಸ್ಥಿತಿಯಿಲ್ಲ. ಮಿಕ್ಕವ । ರಂತರವನು ಹೇಳಲೇನು ॥ ಇಂತಿವರನು ಜೈಸಿದ ದೈತ್ಯರೊಡಲಿನ । ಪಜ್ಜೆಗಳಾವ ಪಾಡಾಯಿತು.

॥ಟೀ॥ ಸೂರ್ಯನಿಗೆ ದಂತಗಳು ಇಲ್ಲದೆ ಹೋಯಿತು. ಇಂದ್ರನಿಗೆ ಬೀಜಗಳು ಇಲ್ಲದೆ ಹೋಯಿತು. ಮಿಕ್ಕಾದವರ ಪಾಡು ಹೇಳತಕ್ಕದ್ದುಯೇನು, ಇಂಥಾ ದೇವೇಂದ್ರ ಮೊದಲಾದ ದೇವತೆಗಳನ್ನು, ಜೈಸಿದಂಥಾ

ರಾಕ್ಷಸ ಶರೀರಗಳು ನಾಶವಾಗಿ ಹೋದವು. ... ||೧೭||

ಹೊತ್ತವರಳಿದರು ಭೂಮಿಯು ಭೂಮಿಗೆ । ಕೆತ್ತವರಳಿದರೆಸುವನು॥
ಬಿತ್ತಿದವರು ಪಾತ್ರದಲಿ ಧರ್ಮಬೀಜವ । ನೆತ್ತಪೋದರೊ ಕಾಣೆನವರಾ॥

॥ಟೀ॥ ಭೂಮಿಯನ್ನು ಹೊತ್ತಂಥಾ ಆದಿಶೇಷಮೊದಲಾದವರು ಬ್ರಹ್ಮಕಲ್ಪಾವಸಾನಕಾಲದಲ್ಲಿ । ಅವರು ಮೃತವಾಗಿಹೋದರು । ಈಭೂಮಿಗೆ ದಹನಕೊಟ್ಟು ಅನುಭವಿಸಿದಂಥಾ ದೊರೆಗಳು ಪ್ರಾಣಗಳ ಬಿಟ್ಟರು, ಸತ್ಪಾತ್ರದಲ್ಲಿ ಧರ್ಮವಾಗಿ ದಾನಕೊಟ್ಟಂಥಾವರು ಯಾವ ದಾರಿಯನ್ನು ಹಿಡಿದುಕೊಂಡು ಹೋದರೊ ಅವರನ್ನು ಕಾಣೆ ... ||೧೮||

ಕಾಲಚಕ್ರದತಿರುಗುಣಿಯಲಿಶಿಕ್ಕಿಕ । ಪಾಲಭೇದಕಯೋಗಪರರಾ॥ಹೇ
ಳುವರಿಲ್ಲದೆಹೆಸರುಗೆಟ್ಟುದುಗಾಢ । ಕೀಲಜಾಲದಕಲ್ಪಾನಲದಿ॥

॥ಟೀ॥ ಕಾಲವೆಂಬಚಕ್ರದ ಹೊರಳಿನಲ್ಲಿಶಿಕ್ಕಿ, ಬ್ರಹ್ಮರಂಧ್ರವನ್ನು ಭೇದಿಸುವಂಥಾ, ಹಟಯೋಗದಲ್ಲಿ ಆಸಕ್ತರಾದಂಥಾವರುಗಳು, ಹೇಳುವರಿಲ್ಲದೆ ಅವರ ಹೆಸರುಗಳು ದೃಢವಾದಂಥಾ ಜ್ವಾಲಾ ಸಮೂಹವುಳ್ಳಂಥಾ ಕಲ್ಪವೆಂಬ ಅಗ್ನಿಯಲ್ಲಿ ಸುಟ್ಟುಹೋಯಿತು॥ ||೧೯||

ಸತ್ಕರ್ಮಗಳಮಾಡಿದವರೆಕೃತಾರ್ಥರೆಂ । ಬೌತ್ಕಂಟ್ಯವೇನುಪೇಳ್ಗೆಯು॥
ಸತ್ಕರಿಸಿದಕೆನ್ನವಾಕ್ಯವಪುರಾಣ । ಕೋಕ್ತಿಚಕಥೆಯಮೂಲದಲಿ॥

॥ಟೀ॥ ಸಂಧ್ಯಾವಂದನಾದಿ ಪುಣ್ಯಕೆಲಸಗಳು ಮಾಡಿದಂಥಾವರೆ ಕೃತಾರ್ಥರುಯೆಂಬ ಆಸಕ್ತಿ, ಯಿದೇನುಹೇಳಬೇಕು ಗುರುವೆ, ನನ್ನ ಸಂಬಂಧವಾದ ವಾಕ್ಯಗುಳನ್ನು ಚನ್ನಾಗಿಕೇಳಿ, ಆದರಣೆಮಾಡಿ, ಪುರಾಣದಲ್ಲಿ ಹೇಳಿಯಿರುವ ಅಧಿಕವಾದ ವಾಕ್ಯಗಳಲ್ಲಿಯಿರುವ ಕಥಾ ಮೂಲದಲ್ಲಿ, ಆದರಣೆಮಾಡಿ ಚನ್ನಾಗಿ ಪ್ರತ್ಯುತ್ತರವ ಹೇಳುವದು॥ ||೨೦||

ಇವನನ್ನದಾನವಇವವಸ್ತ್ರದಾನವ । ಇವಭೂಮಿದಾನವನಿತ್ತ॥ಇವಗಜ
ದಾನವಕನ್ಯದಾನವ । ನಿವಗೃಹದಾನವನಿತ್ತ॥ ॥ಟೀ॥ ಈಪುರುಷನು ಅನ್ನದಾನವನ್ನು ಮಾಡಿದಂಥಾವನು, ಈ ಪುರುಷನು ವಸ್ತ್ರಗಳನ್ನು ದಾನಮಾಡಿದಂಥಾವನು, ಈ ಮನುಷ್ಯನು ಭೂಮಿದಾನವನ್ನು ಮಾಡಿದಂಥಾವನು, ಈ ಪುರುಷನು ಆನೆಗಳ ದಾನಮಾಡಿದಂಥಾವನು, ಈ ಪು

ರುಷನು ಕನ್ಯಾದಾನವನ್ನು ಮಾಡಿದಂಥಾವನು, ಈ ಪುರುಷನು ಗೃಹ ದಾನವನ್ನು ಕೊಟ್ಟಂಥಾವನು॥ ... ॥೭೧॥

ಕೆರೆಯುಕಟ್ಟಿಸಿದಪೂದೋಟವಮಾಡಿಸಿ।ಯರವಟ್ಟಿಗೆಯುರಚಿಸಿದನು॥ಮ ರೆಹೊಕ್ಕವರಸಲಹಿದನಿವಗೋಗ್ರಾಸ।ವಿುರದಿತ್ತನಿವನೆಂದೆನಿಸುವಾ॥

॥ಟೀ॥ ಈ ಪುರುಷನು ತಟಾಕಪ್ರತಿಷ್ಠೆ ಮಾಡಿಸಿದಂಥಾವನು, ಈ ಪುರುಷನು ಹುವ್ವಿನ ತೋಟವನ್ನು ಮಾಡಿಸಿದಂಥಾವನು, ಈ ಪುರುಷ ನು ಅರವಟಿಗೆ ಯಿಕ್ಕಿಸಿದಂಥಾವನು, ಈಪುರುಷನು ಮರೆಹೊಕ್ಕವರ ನ್ನು ಕಾಪಾಡಿದಂಥಾವನು, ಈ ಪುರುಷನು ಗೋವುಗಳಿಗೆ ನಿರಂತರವು ಹುಲ್ಲುಹಾಕಿಸಿದಂಥಾವನು,ಹೀಗೆಂದುಹೇಳಿಸಿಕೊಳ್ಳುವಂಥಾ ॥೭೨॥

ಯುಮನಿಂದ ಸತ್ಕರಿಸಲ್ಪಟ್ಟ ಧರ್ಮಿಗ। ಳಮರಲೋಕದ ಸುಖಮುಂ ಡು ॥ ಕ್ರಮದಿಂದ ಭೂಮಿಗಿಳಿದುರಾಯುರಾಗಿವಿ। ಕ್ರಮಗಳ ನಡಸಿ ಕಾ ಲದಲಿ ॥ಟೀ॥ ಯುಮಧರ್ಮರಾಯುನಿಂದ ಬಹು ಮಾನವನ್ನು ಮಾಡ ಲ್ಪಟ್ಟಂಥಾ, ಪೂರ್ವೋಕ್ತವಾದ ಧರ್ಮವನ್ನು ಮಾಡಿದಂಥಾ ಪುರುಷ ರು, ಸ್ವರ್ಗಲೋಕದ ಸೌಖ್ಯವನ್ನು, ಅವರಿಗೆ ಯೆಷ್ಟು ಯೆಷ್ಟು ಅನು ಭವವೋ, ಅಷ್ಟು ಅನುಭವಿಸಿ, ಭೂಲೋಕದಲ್ಲಿ ಹುಟ್ಟಿ ಧೊರೆಗಳಾಗಿ ಪ ರಾಕ್ರಮಗಳ ನಡಸಿ, ತಾವು ಬದುಕಿ ಇರುವಕಾಲದಲ್ಲಿ. ॥೭೩॥

ಪುಣ್ಯತೀರಿದ ಕಾಲದಲಿ ಮೋಣವರು ಪಟ್ಟ। ಕಣ್ಣನೀರಿನ ಭವಣೆಯು ನು॥ ಗಣ್ಯಮಾಗಲ್ಕೆಂತು। ಪೇಳ್ವುದೈಯ ವಿುವರ। ನಣ್ಣೆಯಕಲ್ಲನಾಡಿ ದುದೂ ॥ಟೀ॥ ಪುಣ್ಯವನ್ನು ಅನುಭವಿಸಿ ತೀರಿಸಿದ ಸಮಯದಲ್ಲಿ,ಮ ತ್ತು ಅಪುಣ್ಯವಂತರು ಬಿದ್ದಂಥಾ ದುಃಖಾನುಭವವನ್ನು, ಲೆಕ್ಕಮಾಡು ವದಕ್ಕೆ ಹ್ಯಾಗೆ ಹೇಳುವದಕ್ಕೆ ಆದೀತು? ದೇವರು ಈ ಪುಣ್ಯಮಾಡಿದವ ರನ್ನು, ಹುಡುಗರು ಅಣ್ಣೆಕಲ್ಲುಗಳನ್ನಾಡಿದಂತೆ, ಸ್ವರ್ಗಲೋಕಕ್ಕೆ ಹೋ ಗುವದು. ಭೂಲೋಕಕ್ಕೆ ಬರುವದು ಯೆಂಬ ಈ ಪ್ರಕಾರವಾಗಿ ತಿ ರುಗುತ್ತಲಿರುವದು. ... ... ॥೭೪॥

ಅಂತಃಕರಣಸಿದ್ಧಿಯುಳ್ಳವರೇಭಾಗ್ಯ।ವಂತರೆಂತೆಂಬುದೇನಯ್ಯ॥ ಅಂ ತಗವನಿಜಲವನ್ನನಿಲಾಕಾಶ। ಸ್ವಾಂತಮಷ್ಟ ಹವೋಘದಿಂದಾ॥

॥ಟೀ॥ ಭಾವನಾರೂಪವಾದ ಅಂತಃಕರಣ ಜೈಸಿ, ಸಿದ್ಧಪಡೆದವರೆ ಅಧಿಕಭಾಗ್ಯವುಳ್ಳವರು ಯೆಂಬುವ, ವೃತ್ತಾಂತವೇನ್ನೆಯು ಗುರುವೆ ಹೇಳಬೇಕು. ಹಾಗಾದರೆ ಕೇಳು, ಭೂಮಿಯು, ಉದಕವು, ಅಗ್ನಿಯು, ವಾಯುವು, ಆಕಾಶವು, ಮನಸ್ಸು, ಬುದ್ಧಿಯು, ಹಾಂಕಾರವು, ಯೆಂಬ ತತ್ವಗಳ ಸಮೂಹದಿಂದ॥ ... ... ॥೨೫॥

ಬೇರೊಂದರೊಂದರಿಂದೆಂಟೆಂಟುಸಿದ್ಧಿಯು । ಬಾರಿಬಾರಿಗುವೃದ್ಧಿಯಿಂದಾ॥ಸಾರಿರುತಿಹಭೂತಮುಖಬ್ರಹ್ಮವಧಿಕಶ।ರೀರಗಳೊಳಗೊಬ್ಬರೆಣಿಸು॥

॥ಟೀ॥ ಒಂದೊಂದು ತತ್ವಜಯಕ್ಕೆ ಬೇರೆಬೇರೆ ಸಿದ್ಧಿಗಳು ವೃದ್ಧಿಯಿಂದ ಬಾರಿಬಾರಿಗು ಯೆಂಟೆಂಟಾಗಿ ಅರವತ್ತನಾಲ್ಕು ಸಿದ್ಧಿಗಳುಉಂಟು, ಆ ಸಿದ್ಧಿಗಳನ್ನು ಹೊಂದಿಯಿರುವ ಪಂಚಭೂತಗಳು ಮೊದಲಾಗಿ, ಬ್ರಹ್ಮನು ಕಡೆಯಾದಂಥಾ ಶರೀರಗಳ ಉಳ್ಳಂಥಾ ಸಿದ್ಧಿಯು ಪಡೆದವರುಗಳೊಳಗೆ, ಒಬ್ಬರನ್ನು ತೋರಿಸಿಕೊಡು॥ ... ॥೨೬॥

ಆವರೀಗಪೆಟ್ಟುಬೀಳದೆರೋಗಾದಿಗಳಿಂದ।ಭವಣೆಗೆಬರದವರೆಂದು॥ ಅವರನನೋಡುವನಿಲ್ಲದಿರ್ದರೆನನ್ನ।ಕಿವಿಯಾರಕೇಳಿಸುಖಿಸುವೆ॥ ॥೬॥ ಇಂಥಾವರು ರೋಗಾದಿಗಳಿಂದ ನಾಶವನ್ನು ಹೊಂದದೆಯಿರುವವರನ್ನು, ಪುನಃ ಹುಟ್ಟದೆ ಯಿರುವವರನ್ನು, ಇಂತೆಂದು ಅವರುಗಳನ್ನ ಪ್ರತ್ಯಕ್ಷವಾಗಿ ತೋರಿಸಿದರೆ, ಕಣ್ಣಿಗೆ ಸಂತೋಷ ವಾಗುವಹಾಗೆ ನೋಡುತ್ತೇನೆ ಪ್ರತ್ಯಕ್ಷವಾಗಿಯಿಲ್ಲದೆಇದ್ದರೆಕಿವಿಯಾರಕೇಳಿ ಸುಖಉಳ್ಳವನಾಗುತ್ತೇನೆ॥೨೭॥

ನಾಯಬಾಲದಡೊಂಕತಿದ್ದಿಕಟ್ಟಿದರೆಕ। ಟ್ಟಾಯಕ್ಕೆಕಡೆಗುನಿಲ್ಲುವದೆ॥ ಕಾಯುವಹೊತ್ತುಪ್ರಾರಾಬ್ಧವನುಣ್ಣದ।ರಾಯರಾರುಂಟುಭುವನದಿ॥

॥ಟೀ॥ ನಾಯಿಬಾಲದ ಡೊಂಕನ್ನು ನೆಟ್ಟಗೆಮಾಡಿ, ದಬ್ಬೆಗಳು ಹಾಕಿ ಕಟ್ಟಿದರೆ, ಪುನಹಾ ಕಟ್ಟುಬಿಚ್ಚಿದರೆ ಡೊಂಕಿಲ್ಲದೆ ನೆಟ್ಟಗೆ ಯಿದ್ಧೀತೆ, ಶರೀರವನ್ನ ಹೊತ್ತುಕೊಂಡು ಪ್ರಾರಬ್ಧ ಕರ್ಮದಿಂದ ಬಂದ ಫಲವು ಯಾವದುಂಟೊ, ಆಫಲವನ್ನು ಉಣ್ಣದಂಥಾ ಶ್ರೇಷ್ಠರು ಮೂರು ಲೋಕದಲ್ಲಿ ಯಾರು ಇದ್ದಾರೆ॥ ... ... ॥೨೮॥

ಇತರಾಪೇಕ್ಷೆಯಿಂದಧಿಕರಲ್ಲವೆಯನ।ಲತಿಶಯವಿಲ್ಲಬೋಳೆಯರಾ॥ ವಿತತಿಯೊಳಾಗಿಕನೆಲದಿಯಂಬಲಿಯುಂಡ।ದಿತರರಿಗಾರುಪೇಳುವರೂ॥

||ಟೀ|| ಇಂಥಾಸಿದ್ಧಿಗಳ ಪಡದಂಥಾವರು, ಆ ಸಿದ್ಧಿಗಳು ಯಿಲ್ಲದಂಥಾವರಿಗಿಂತಅಧಿಕರಲ್ಲವೆ ಶ್ರೀಗುರುವೆ! ಅಹುದೈ, ಆಸಿದ್ಧಿಗಳುಂಟಾದವರು ಅಧಿಕರೇಅಹುದು. ಬ್ರಹ್ಮಾದಿದೇವತೆಗಳ ಸಮೂಹಕ್ಕಿಂತಲೂ, ಇವರು ಹೆಚ್ಚಾದವರಲ್ಲ, ಅದು ಯಾಕೆಅಂದರೆ, ಬ್ರಹ್ಮಾದಿದೇವತೆಗಳಶರೀರಗಳೇನಿಲ್ಲುವದಿಲ್ಲವಾದಕಾರಣ, ಇವರ ಶರೀರಗಳು ನಿಲ್ಲುವವೆ, ನಿಲ್ಲಲಾರವು. ಆದ್ದರಿಂದ, ಇವರು ದೇವತೆಗಳಿಗಿಂತ ಅಧಿಕರಲ್ಲ. ರಾಗಿ ಬೆಳೆಯುವಂಥಾ ಭೂಮಿಯಲ್ಲಿರುವವರು, ರಾಗಿಅಂಬಲಿ ಉಣ್ಣುತ್ತಾರೆ, ರಾಗಿ ಅಂಬಲಿ ಉಣ್ಣುವವರೆ ಹೆಚ್ಚಾದವರು ಯೆನ್ನುತ್ತಾ ಮಿಕ್ಕಾದವರಿಗೆ ಯಾರು ಹೇಳ್ಯಾರು||

ಜೋಳದನೆಲದಿರೊಟ್ಟಿಯತಿಂದುಪರರೊಳು|ಪೇಳುವರಾರತಿಶಯವಾ||
ಭೂಲೋಕದೊಳುಸರ್ವಸಾಧಾರಣದಫಲ|ಜಾಲದೊಳಿಚ್ಛೆಯಾರ್ಗುಂಟೆ||

||ಟೀ|| ಜೋಳ ಬೆಳೆಯುವಂಥಾ ಭೂಮಿಯಲ್ಲಿಇರುವ ಜನರು ಜೋಳದರೊಟ್ಟಿಯನ್ನು ತಿನ್ನುವಂಥಾವರಾಗಿ, ತಮಗಿಂತ ಇತರರಲ್ಲಿ ಅತಿಶಯಯುಂಬದಾಗಿ ಹೇಳುವಂಥಾವರುಯಾರು, ಈ ಮನುಷ್ಯಲೋಕದಲ್ಲಿ, ಸರ್ವಜನಕ್ಕು ಸಾಧಾರಣವಾದ ಫಲಾನುಭವ ಸಮೂಹದಲ್ಲಿ ಅಭಿಲಾಷೆ ಸರ್ವರಿಗು ಹುಟ್ಟೀತೆ, ಹುಟ್ಟುವದಿಲ್ಲ|| ... ||೩೦||

ಆದವಾಬಲದಿಂದಕೇಡಿಗಪಾಯುವ|ಸಾಧಿಸಬಹುದೆನೆಬರುವ|| ಮೋದವಿಷಾದಪ್ರದದಕರ್ಮಗಳಿವನ|ದಾದಿಯಮಕ್ಕಳಿಹೇಳೂ|| ||ಟೀ|| ಹಾಗಾದರೆ ಪೂರ್ವೋಕ್ತವಾದ ಸಿದ್ಧಿಗಳ ಬಲದಿಂದ, ಶರೀರಕ್ಕೆಬರುವ ಹಾನಿಯನ್ನು ಯಿಲ್ಲದಹಾಗೆ ಮಾಡಿಕೊಳ್ಳಬಹುದೆಯೆಂದು ಕೇಳಿದರೆ, ಹೇಳುತ್ತಲಿದ್ದೇನೆ ಕೇಳೈಯ್ಯ, ತನಿಗೆ ಬರುವಂಥಾ ಸಂತೋಷವನ್ನು ದುಃಖವನ್ನು ಕೊಡುವಂಥಾ ಅನಾದಿಯಾದ ಕರ್ಮಗಳು, ಇವನ ಮನೆಯಲ್ಲಿ ಯಿರುವ ಗೌಡಿಯ ಮಕ್ಕಳೆ, ಇವನು ಹೇಳಿದಹಾಗೆ ಕೇಳುವದಕ್ಕೆ ನೀನು ಹೇಳು|| ... ... ... ||೩೧||

ನಲರಾಮಧರ್ಮನಂದನಮಹಿಷಾಸುರ|ಬಲಿಬಾಲಿಕರ್ಣಯಯಾತಿ||ಜಲಜಾಪ್ತಶಕ್ರೇಂದುಗಾಲವವ್ಯಾಸಾದಿ|ಗಳೊಳಾರನುಳಿದುದೀಕರ್ಮ||

||ಟೀ|| ನಳಮಹಾರಾಯನು, ರಾಮದೇವರು, ಯಮಧರ್ಮರಾಯ ನ ಮಗನಾದ ಧರ್ಮರಾಯನು, ಮಹಿಷಾಸುರನು, ಬಲಿಚಕ್ರವರ್ತಿಯು, ಕಿಷ್ಕಿಂದಾಧಿಪತಿಯಾದ ವಾಲಿಯು, ಕರ್ಣನು, ಯಯಾತಿ ಮಹಾರಾಯನು, ಸೂರ್ಯನು, ದೇವೇಂದ್ರನು, ಚಂದ್ರನು, ಗಾಲವನೆಂಬಋಷಿಯು, ವ್ಯಾಸರು, ಮೊದಲಾದವರೊಳಗೆ ಯಾರನ್ನಾದರು ಬಿಟ್ಟೀತೆ, ಈ ಕರ್ಮವು, ಯಾರನ್ನು ಬಿಡಲಿಲ್ಲ|| ... ... ||೩೦||

ಯಾರುಮೀರಿದರಿಕರ್ಮವನಿವರೊಳಗಿವೆ । ರಾರಿವರೆಣಿಸೆಮಾನ್ನವರು||
ಸಾರಿವಿಚಾರಿಸುಭ್ರಮೆಗೊಳ್ಳದಿರುದುರ್ನಿ। ವಾರವೆಂದರಿದುಕೊಭೂಪಾ||

||ಟೀ|| ಪೂರ್ವದಲ್ಲಿ ಹೇಳಿಯಿರುವ ಜನರುಗಳಲ್ಲಿ, ಈ ಕರ್ಮವನ್ನು, ಯಾರು ಮೀರಿನಡದವರು, ಶ್ರೇಷ್ಠವಾದ ಈ ದೇವತೆಗಳೊಳಗೆ, ಮಾನ್ನವರು ಲೆಕ್ಕಕ್ಕೆ ಯೆಷ್ಟುಮಾತ್ರವಾದರುಹೇಳಿ ಚನ್ನಾಗಿವಿಚಾರಣೆಮಾಡು, ಭ್ರಾಂತಿಯನ್ನು ಹೊಂದದೆಯಿರು, ಈ ಕರ್ಮವೆಂಬುವದನ್ನು ನಿವಾರಣೆ ಮಾಡುವದಕ್ಕೆ ಆಗುವದಿಲ್ಲ ವೆಂದು ತಿಳಿದುಕೊಳ್ಳೈಯ ಭೂಮಿಪನೆ||೩೩||

ಅನಿವಾರ್ಯಕರ್ಮಕ್ಕೆಸಿಲ್ಕಿದವರುಘನ । ರೆನಿಪರೆ ಪೇಳ್ಳೈ ಗುರುವೆ ||ಜ
ನಪಕೇಳ್ಳೈ ಕರ್ಮವಾರ ಬಾಧಿಪ್ಪುದೆಂದು । ನಿನಗಿಲ್ಲವಾಯ್ತು ವಿವೇಕಾ||

||ಟೀ|| ನಿವಾರಣೆ ಮಾಡುವದಕ್ಕೆ ಅಶಕ್ಯವಾದಂಥಾ ಕರ್ಮಕ್ಕೆ ಶಿಕ್ಕಿದಂಥಾವರು ದೊಡ್ಡವರು ಆದಾರೆ, ಹೇಳೈಯ ಶ್ರೀಗುರುವೆ, ಯೆಲೈನರಪಾಲನೆ ನೀನು ಕೇಳು ಹೇಳುತ್ತೇವೆ, ಈ ಕರ್ಮವು ಯಾರನ್ನು ಬಾಧಿಸುತ್ತಲಿಥೆಯೆಂಬ ವಿಚಾರಣೆ ನಿನಗೆ ಇಲ್ಲದೆ ಹೋಯಿತಲ್ಲ. ||೩೪||

ಪಂಚಭೂತದ ವಿಕೃತಿಯ ಲಿಂಗದೇಹಪ್ರ। ಪಂಚವ ಬಾಧಿಪ್ಪುದಿದರಾ||
ಅಂಚಿನೊಳ್ಪೊಳೆವ ಚಿತ್ತನು ಸೋಂಕಲರಿಯದೀ । ಚಂಚಲ ಕರ್ಮ
ಪ್ರಾರಾಬ್ಧಾ ||ಟೀ|| ಅಪಂಚೀಕೃತ ಪಂಚಭೂತ ವಿಕಾರವಾದ ಲಿಂಗದೇಹ ವಿಸ್ತಾರವನ್ನು ಬಾಧೆಪಡಿಸುತ್ತಲಿಥೆ ಈ ಕರ್ಮ. ಲಿಂಗದೇಹದ ಸಮೀಪದಲ್ಲಿ ಪ್ರಕಾಶಿಸುತ್ತಲಿರುವ ಚಿದ್ವಸ್ತುವನ್ನು ಮುಟ್ಟುವದಕ್ಕೆ ಈ ಚಪಲವಾದ ಕರ್ಮ ಪ್ರಾರಾಬ್ಧಕ್ಕೆ ಸಾಮರ್ಥ್ಯವಿಲ್ಲಾ. ||೩೫||

ಇನ್ನಿ ಪ್ರಾಕೃತರ ಮೋಹಕೆ ಸಿಲುಕದೆ ಸಿದ್ಧಿ। ಯನ್ನೆಣಿಸದೆ ಕೆಟು

ಪ್ರೋಸ || ತನ್ನ ಬಿಟ್ಟನ್ಯದೈವವ ಭಜಿಸದ ಗುರು | ವಿನ್ನಿಗಮಾರ್ಥವನಂ ಬು ||ಟೀ|| ಇನ್ನುಮೇಲೆ ಈ ಪ್ರತ್ಯಕ್ಷವಾಗಿ ಪ್ರಕೃತಿ ಸಂಬಂಧ ಉಳ್ಳಂಥಾವರ ಅಜ್ಞಾನಕ್ಕೆ ಸಿಕ್ಕದೆ, ಕೆಟ್ಟು ಹೋಗುವಂಥಾ ಸಿದ್ಧಿಗಳನ್ನು, ಯೆಣಿಸದೆ, ಆತ್ಮಸ್ವರೂಪವಾದ ತನ್ನಬಿಟ್ಟು, ಅನ್ಯದೈವವನ್ನು ಸ್ಮರಣೆ ಮಾಡದೆ ಇರುವಂಥಾ ಗುರುವಿನ ದೆಸೆಯಿಂದ, ವೇದಶಿರಸ್ಸಿನಲ್ಲಿ ಹೇಳಿ ಇರುವಂಥಾ ಅರ್ಥವನ್ನು ತಿಳಿದು, ಆ ಅರ್ಥವನ್ನು ನಿಶ್ಚಯವೆಂದು ನಂಬಿಕೊಂಡು ಇರು. ... ... ... ||೩೬||

ತನ್ನ ತಾನರಿದಲ್ಲದಳಿಯದು ಭವವೆಂದು | ಪನ್ನಗಾಭರಣಕಾಶಿಯಲಿ||
ಚೆನ್ನಾಗಿ ಮೃತರಾಗಿ ರುದ್ರರಾದರಿಗೆಂದ| ನೆನ್ನುವದೇ ಸತ್ಯವಾಕ್ಯ||

||ಟೀ|| ತನ್ನ ಸ್ವರೂಪವಾದ ಆತ್ಮವನ್ನ ತಾನು ಅರಿಯದಿದ್ದರೆ ಹುಟ್ಟುಪ್ರಳಯಗಳು ಅಳಿದು ಹೋಗುವದಿಲ್ಲವೆಂದು| ನಾಗಾಭರಣನಾದ ವಿಶ್ವನಾಥನು ಕಾಸಿಯಲ್ಲಿ ಹೇಳಿದನು. ಚೆನ್ನಾಗಿಸುತ್ತಲೂ ಕೂತುಕೊಂಡುಯಿರುವ ಏಕಾದಶ ರುದ್ರರಿಗೆ ಹೇಳಿದಂಥಾವನಾದ. ಹೀಗೆಹೇಳುವಂಥಾ ಮಾತುಯಾವದುಂಟೋ, ಅದೇ ಸತ್ಯವಾದವಾಕ್ಯ. ||೩೭||

ಇದರಿಂದಖಿಲ ಸಿದ್ಧಿಗಳಿಂದ ದೊರಕಿದ | ಪದದ ಭೋಗಗಳಾಸೆಯನು || ವಿದಳಿಸಿ ನಿನ್ನೊಳಗಿರುವ ಚೈತನ್ಯದ | ಪದವಿ ಪಡೆದು ಸುಖಿಯಾಗು ||ಟೀ|| ಈಗ ಹೇಳಿದಮಾತಿನಿಂದ ಸಮಸ್ತವಾದಂಥಾ ಸಿದ್ಧಿಗಳಿಂದ ಶಿಕ್ಕಿದಂಥಾ, ಯಾವ ಸ್ಥಾನಗಳಲ್ಲಿ ಆಗುವ ಸುಖಗಳಲ್ಲಿ ಅಭಿಲಾಷೆಯನ್ನು ಬಿಟ್ಟು, ನಿನ್ನೊಳಗಿರುವ ಸದಾತ್ಮಕವಾದ ಯಾವ ಬ್ರಹ್ಮಚೈತನ್ಯವುಂಟೋ, ಆಬ್ರಹ್ಮಸ್ವರೂಪವೆ ನೀನಾಗಿ ಆನಂದ ಉಳ್ಳಂಥಾವನಾಗು. ... ... ||೩೮||

ಮೂ|| ವ|| ಇಂತೆಂದು ಸಕಲಸಿದ್ಧಿಸಂಪಾದಿತ ಸರ್ವಲೋಕಭೋಗವ್ಯೂಹ ವಿರಾಗಪದ್ಧತಿಯುಂಪೇಳಿ|ಇನ್ನೊಂದುಪ್ರಕಾರಮಂಪೇಳುತ್ತಿರ್ದಪನದೆಂತೆನೆ|| ||ಟೀ|| ಈರೀತಿಯಾಗಿಹೇಳಿ ಸಮಸ್ತ ಸಿದ್ಧಿಗಳಿಂದ ಸಂಪಾದಿಸಲ್ಪಟ್ಟ, ಸಕಲಲೋಕಗಳಲ್ಲಿ ಆಗುವ ಭೋಗಸಮುದಾಯಗಳಲ್ಲಿ, ವಿರಾಗಬರುವ ಮಾರ್ಗವನ್ನುಹೇಳಿ, ಇನ್ನೊಂದುಪ್ರಕಾರವಾದ

ಮಾರ್ಗವನ್ನು ಹೇಳುತ್ತಲಿದ್ದಾನೆ, ಅದುಹ್ಯಾಗೆಅಂದರೆ॥

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವ ತಾತ್ವಿಕ ವಿಚಾರ
ಪಾರೀಣಶಾಲ್ಯಕ್ಷಿತಿಪಾಲಕೃಷ್ಣ ಪ್ರಭುವಿರಚಿ
ತಮಾದ ನಿಜದೀಪಿಕಾ ರತ್ನಗ್ರಂಥದೊಳ್
ಪದ್ಧತಿ ೧೬ಕ್ಕಂ ವಿರಾಗಪದ್ಧತಿ
ಸಂಪೂರ್ಣಂ.

ಇತಿ ಪದ್ಧತಿ ೧೬ ವಿರಾಗಪದ್ಧತಿ ಪೇಳಿದಿಲ್ಲಿಗೆ ಮಂಗಳಂ.

---

## ೧೭ ಪ್ರತ್ಯಕ್ಷ ಪ್ರಮಾಣ ಪದ್ಧತಿ ಪ್ರಾರಂಭವು.

---

ಗೀತಾ॥ ಇಪ್ಪುದಂತಃಕರಣಮೆತಾನೆರಡುತೆರದೊಳೀಗೆ। ಹಂವೃತ್ತಿ
ಯೊಂದಿದಂವೃತ್ತಿಯೆಂದು । ರೂಪಮೆವಿವರ್ಶವಾದವೃತ್ತಿಪಡೆವುದಿದಂತ್ವ
ಮಂಚಿತ್ತಮಂಹವ್ಮ ಧರಿಸುತಿರ್ಪು೦॥ ॥ಟೀ॥ ಭಾವನಾರೂಪವಾದ
ಅಂತಃಕರಣಒಂದೇ; ಯೆರಡುಪ್ರಕಾರವಾಗಿಯಿಧೆ. ಅದು ಹ್ಯಾಗೆಅಂದ
ರೆ, ಅಹಂವೆಂಬೊ ವೃತ್ತಿಒಂದು, ಇದಂವೊಂಬೊ ವೃತ್ತಿಒಂದು, ಈಯೆ
ರಡು ವೃತ್ತಿಗಳಲ್ಲಿ, ಪ್ರತ್ಯಕ್ಷವಾಗಿ ಕಾಣಿಸುವ ಪ್ರಪಂಚವನ್ನು, ಇದುಘ
ಟ, ಇದು ಕುಡ್ಯವೆಂಬುವ ರೂಪುಗಳ ವಿವರಗಳನ್ನು ಮನಸ್ಸೆ ಹೊಂ
ದುತ್ತಾ ಇರುತ್ತಲಿಧೆ. ಇದಂತ್ವ ಕಾರಕಾರಿತ ವೃತ್ತಿಯನ್ನು, ಮನಸ್ಸೆಪಡೆ
ವುದು. ಚಿತ್ಸ್ವರೂಪವನ್ನು ವಳಗೆ ಹಾಂಕಾರವ ಧರಿಸಿಕೊಂಡುಯಿಧೆ॥

ಕಂ॥ ಪೊರಗಣವೃತ್ತಿಯುಪಡೆದಿಹ। ಕರಣಮುಮನಮಂತರಂಗವೃತ್ತಿ
ಯುಪಡೆದಿಹ।ಕರಣಮಹಂಕೃತಿಮಾನಸ।ಮರಣಂಸ್ವಜ್ಞಾನಮಿದರಮರಣಂ
ಜ್ಞಾನಂ॥ ॥ಟೀ॥ ಜಾಗ್ರದವಸ್ಥೆಯಲ್ಲಿ ಹೊರಗಿರುವ ಪದಾರ್ಥಗಳ ತಿ

ಳಿಯುವ ವೃತ್ತಿಯನ್ನ ಹೊಂದಿಯಿರುವಂಥಾ ಅಂತರಿಂದ್ರಿಯವೆ ಮನಸ್ಸು-ವಳಗಿರುವಂಥಾ ಚಿದಾಕಾರ ಕಾರಿತವೃತ್ತಿಯನ್ನ ಹೊಂದಿ ಯಿರುವಂಥಾ ಅಂತರಿಂದ್ರಿಯವೆ ಹಾಂಕಾರವು. ಆತ್ಮನಲ್ಲಿ ಯಿಲ್ಲದಂಥಾ ಹಾಂಕಾರಮನಸ್ಸುಗಳು ಲಯವಾಗಿಹೋಗುವ ಪ್ರಕಾರಗಳು ಹ್ಯಾಗೆಅಂದರೆ, ಇದುಮನಸ್ಸುಯೆಂದು ತಿಳಿದಾಗಲೆ ಮನೋವೃತ್ತಿಗೆ ಉತ್ಪತ್ತಿ ಸ್ಥಿತಿಲಯಗಳು ಮೂರು ಆಯಿತು. ಇದು ಮನೋವೃತ್ತಿ ಲಯ,ಹಾಂಕಾರಕ್ಕೆ ಲಯಹ್ಯಾಗೆ ಅಂದರೆ, ಆತ್ಮಸ್ವರೂಪವಾದ ಜ್ಞಾನಸ್ವರೂಪವೆ ನಾನು ಯೆಂಬ ಜ್ಞಾನವುಂಟಾದಮೇಲೆ, ಹಾಂಕಾರಲಯವಾಗಿ ಹೋಯಿತು॥ ... ॥೧॥

ಮೂ॥ ಜಂಪೆ॥ ಮನದೊಡನೆಯಾತ್ಮನಾಮನವಿಂದ್ರಿಯಗಳೊಡನೆ। ವಿನಯವಾಗಲುವಿಕ್ಷ್ಯಗಣವುಚಿತವಾದಾ॥ ॥ಟೀ॥ ಮನಸ್ಸಿನಕೂಡಾ ಚೈತನ್ಯಸ್ವರೂಪವಾದ ಆತ್ಮನು ಕೂಡಿದರೆ, ಆತ್ಮನಿಂದ ಕೂಡಿದ ಮನಸ್ಸು ಯಾವದುಂಟೊ, ಆ ಮನಸ್ಸು ಇಂದ್ರಿಯಂಗಳಕೂಡೆ ಕೂಡಿದರೆ, ಆ ಮನಸ್ಸಿನಿಂದ ಕೂಡಿದ ಯಿಂದ್ರಿಯಂಗಳು ತವುತವುಗೆ ಯೋಗ್ಯವಾದ॥ ... ... ... ॥೧॥

ಗೋಚರಗಳೊಡನೆತದ್ಗೋಚರಗಳುಂಬಳಿಕ। ರೋಚಿಸುವದಸೆಯಿಂದ ರೂಪಿಲ್ಲದಿರಲೂ॥ ॥ಟೀ॥ ಇಂದ್ರಿಯಾರ್ಥಗಳೊಡನೆಇಂದ್ರಿಯವಿಷಯಗಳು, ಅವೇಲೆ ಪ್ರಕಾಶಿಸುವ ದಸೆಯಿಂದ, ಆ ಪ್ರಕಾಶವಾದ ವಸ್ತುವ ರೂಪತಿಳಿಯದೆ, ಇರುವದ್ದರಿಂದ॥ ... ... ॥೨॥

ಪರಮನಪರೋಕ್ಷನೆಂಬರಿವುಧೃಡವಾಗುವದು। ಅರಿವಪಿಂದಿಕ್ಕಿಮುಂದಿರವುಭೂತಗಳೂ॥ ॥ಟೀ॥ ಪರೋಕ್ಷವಾಗಿರುವ ಬ್ರಹ್ಮಸ್ವರೂಪವು, ಪ್ರತ್ಯಕ್ಷವಾಯಿತುಯೆಂಬ ಅರಿವು ಧಾರಾಢ್ಯವಾಗುವದು. ಹಾಗಾದುದರಿಂದ, ಅರಿವನ್ನು ಹಿಂದಿಕ್ಕಿ, ಪಂಚಭೂತಗಳು ಇವುಗಳ ಕಾರ್ಯಗಳು, ಆ ಅರಿವಿಗಿಂತಲೂ ಮುಂದಿಗಲಾರವು ... ॥೩॥

ಭೂತವೈಕೃತವಾದ ಧಾತ್ರಕೋಶಂತದನು। ಭೂತಿಯಿಂ ಚಿನ್ಮಯನೆ ಧಾತವಂಸರ್ವಂ ॥ಟೀ॥ ಭೂತವಿಕಾರವಾದಂಥಾ ಬ್ರಹ್ಮಾಂಡವು, ಆ ಚಿದಾನುಭವದಿಂದ ಈ ಬ್ರಹ್ಮಾಂಡ ಸೃಷ್ಟಿಸಂಬಂಧವಾದಂ

ಥಾ, ಸಕಲ ಜಗತ್ತನ್ನು ಚಿತ್ಸ್ವರೂಪವೆ. ||೪||

ಈ ಚಿದಾತ್ಮನೇ ಬ್ರಹ್ಮನೆಂದು ಜೀವಾಕೃತಿಯು । ಮಾಯೆಯಿಂ ಮೇಲಾಂತು ಕಾಯತ್ರಯದಲಿ ||ಟೀ|| ಈಸಚ್ಚಿದಾನಂದಾತ್ಮನೆ ಬ್ರಹ್ಮಸ್ವರೂಪನ್ನುಯೆಂದು, ಮಾಯೆಯನ್ನು ಮೇಲೆವರಿಸಿ ಕೊಂಡು, ಜೀವಸ್ವರೂಪವಂ ಹೊಂದಿ, ಸ್ಥೂಲ, ಸೂಕ್ಷ್ಮ, ಕಾರಣಗಳೆಂಬ ಮೂರು ಶರೀರಗಳಲ್ಲಿಯು. ... ... ||೫||

ವಿಹರಿಸುವುದದು ಬ್ರಹ್ಮವೆಂದು ಈ ಪುರುಷನೆ । ಸಹಜವಾಗನೆನುತ್ತ ಸಾರಿಯಾತ್ಮನನೂ ||ಟೀ|| ಕ್ರೀಡಿಸುತ್ತಲಿರುವವನು ಯಾವಜೀವನೊ, ಆ ಜೀವನೆ ಬ್ರಹ್ಮವೆಂದು, ಈ ಪುರುಷ ಶಬ್ದವಾಚ್ಯವಾದ ವಸ್ತುವೆ, ಸ್ವಭಾವವಾಗಿ ನಾನೆನುತ್ತ ಹೇಳಿಕೊಂಡು ಆತ್ಮಸ್ವರೂಪವನ್ನು ||೬|| ಆವಂ ತಿಳಿವನವಂ ಯಾರಕಾಮುಕನ್ಕಾಗಿ । ಚೀವಂತೆ ಮಾಳ್ಪನೇ ಬೆದರಿ ದೇಹವನೂ ||ಟೀ|| ಯಾವ ಪುರುಷನು ತಿಳಿದು ಕೊಳ್ಳುತ್ತಾನೆಯೊ, ಆ ಪುರುಷನು ಯಾರ ಆನಂದಕ್ಕೋಸ್ಕರವಾಗಿ ಭಯಪಟ್ಟು, ತನ್ನ ದೇಹವನ್ನು ಸಂತಾಪ ಉಳ್ಳಂಥಾದ್ದಾಗಿ ಮಾಡ್ಯಾನು. ... ||೭||

ಬಯಸಿ ಮಾಡುವನೇನ ಭಾವದಿಂದೆಂದು ಶೃತಿ । ಚಯಮುಘೋಷಿಪ್ಪುದರಿಂ ಚತುರನೆಂತೆಂತು ||ಟೀ|| ತನ್ನ ಅಭಿಪ್ರಾಯದಿಂದ ಇಚ್ಛೈಸಿ, ಯಾವ ಕೆಲಸವನ್ನು ಮಾಡ್ಯಾನು ಯನ್ನುತ, ಶೃತಿಗಳ ಸಮೂಹ ಕೂಗುತ್ತಲಿರುತ್ತಿಧೆ ಯಾದವಿಚಾರ ಹ್ಯಾಗೋಹಾಗೆ. ... ||೮||

ಆವರಣ ಮಳಿದುಭುವನಾವಳಿಯ ನುಂಗಿಜೀ।ರ್ಣಾವಸ್ಥೆಯೊಂದಿರುವುದಾವುದದುನೀನೆ ||ಟೀ|| ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ, ಮಹಾತತ್ವ, ಪ್ರಕೃತಿಗಳೆಂಬ ಸಪ್ತಾವರಣಂಗಳನ್ನು ಕೆಡಿಸಿ, ಚತುರ್ದಶ ಭುವನಂಗಳನ್ನು ತಿಂದು ಬಿಟ್ಟು, ಜೀರ್ಣಾವಸ್ಥೆಯನ್ನು ಹೊಂದಿಯಿರುವದುಯಾವವಸ್ತುವೋ, ಆ ಆತ್ಮಸ್ವರೂಪನೇನೀನು ||೯||

ಮೂ|| ವ|| ಇಂತೆಂದು ಪ್ರತ್ಯಕ್ಷ ಪ್ರಮಾಣ ಪದ್ಧತಿಯಂ, ಮತಿಗೆ ಸಮ್ಮತಂ ಪಡಿಸಿ ಇನ್ನೊಂದು ಪ್ರಕಾರಮಂ ಪೇಳುತಿರ್ದಪನದೆಂತೆನೆ||

॥ಟೀ॥ ಈ ರೀತಿಯಾಗಿ ಪ್ರತ್ಯಕ್ಷ ಪ್ರಮಾಣ ಮಾರ್ಗಮಂ ತಿಳಿಸಿ, ಬುದ್ಧಿಗೆ ಸಮ್ಮತವಾಗುವ ಹಾಗೆ ಮಾಡಿ, ಇನ್ನೊಂದು ವಿಧವಾಗಿ ಹೇಳುತ್ತಲಿದ್ದಾನೆ. ಅದು ಹ್ಯಾಗೆ ಅಂದರೆ.

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕ
ವಿಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣ
ಪ್ರಭು ವಿರಚಿತವಾದ ನಿಜದೀಪಿಕಾ
ರತ್ನಾಖ್ಯಗ್ರಂಥದಲ್ಲಿಪದ್ಧತಿ೧೭ಕ್ಕಂ
ಪ್ರತ್ಯಕ್ಷಪ್ರಮಾಣ ಲಕ್ಷಣಂ
ಸಂಪೂರ್ಣಂ.

(ಇತಿ ಪದ್ಧತಿ ೧೭ ಪ್ರತ್ಯಕ್ಷಪ್ರಮಾಣ ಲಕ್ಷಣಂ ಪೇಳಿದಿಲ್ಲಿಗೆ ಮಂಗಳಂ)

---

## ೧೮ ಅನುಮಾನಪ್ರಮಾಣ ಪದ್ಧತಿ ಪ್ರಾರಂಭವು.

---

ಮೂಲ॥ ಅಟತಾಳ॥ ವಚನ ಮನಗಳಿಗಳ ವಡದಸರ । ವಸ್ತುವೆನು ಈ ವಿಶ್ವದ। ರಚನೆಯಿಂ ಸ್ಥಿತಿಯಿಂ ವಿಲಯದಿಂ ರಾಜಿಸುವದು॥

॥ಟೀ॥ (ಶೃತಿ. ಯತೋವಾಚೋನಿವರ್ತಂತೆ ಅಪ್ರಾಪ್ಯಮನಸಾಸಹ) ಯಂಬ ಶೃತ್ಯಾರ್ಥಾನುಸಾರವಾಗಿ ಹೇಳುತ್ತಲಿದ್ದಾನೆ. ವಾಕ್ಕುಗಳಿಗು, ಮನಸ್ಸಿಗು ಹೀಗೆ ಇಧೆಯೆಂದು ಹೇಳುವದಕ್ಕು, ತಿಳಿಯುವದಕ್ಕು, ಶಿಕ್ಕದೆ ಇರುವಂಥಾ ಪರಬ್ರಹ್ಮ ಸ್ವರೂಪವು, ಪ್ರಪಂಚವನ್ನು ಮಾಡುವದರಿಂದಲು, ಜಗತ್ತು ಇರೋಣಾದುದರಿಂದಲು, ನಾಶವಾಗೋಣಾದುದರಿಂದಲು ಪ್ರಕಾಶಿಸುತ್ತಲಿಧೆ. ... ॥೧॥

ಯೆಂದು ನಿಶ್ಚೈಸುವದೆಶೆಯೆೊಳೊಡ । ನೊಂದು ತೀಡಹುದುಕಾರಣ ।
ವೆಂದು ದೃಷ್ಟಾಂತ ಪ್ರತಿಜ್ಞೆಯೊ ಮೇಲಿಮೇಲೆ ॥ಟೀ॥ ಹೀಗೆಯೆಂ
ದು ನಿಶ್ಚಯುನಮಾಡುವ ಅವಸ್ಥೆಯಲ್ಲಿ, ಅದರ ಕೂಡಲೆ ತೋರುತ್ತಲಿಥೆ.
ಹೇತುವೆಂದು, ಉಪನಯವೆಂದು, ಸಿದ್ಧಾರ್ಥವೆಂದು, ಕೂಡಕೂಡಲೆ॥೨॥

ಆದರ ಸುಖದಿಂ ಜೀವಿಸುವದೀ । ಯುಖಿಲ ಮೆನಲುೂ ಗಾತ್ರವು । ಮೊ
ದಲನೆಯದೆರಡನೆಯದೇ ಭೂತದವಿಕೃತಿಯುೂ ॥ಟೀ॥ ಆ ಬ್ರಹ್ಮಾನಂದ
ದಿಂದಲೆ, ಸಕಲ ಜಗತ್ತು ಜೀವಿಸಿಕೊಂಡು ಇಥೆಯನ್ನುವದರಿಂದ, ಮೊದ
ಲು ಹೇಳಿದ ಹೇತುವೆಂಬ ಶರೀರನ್ನು, ಪಂಚಭೂತಗಳು, ತತ್ಕಾರ್ಯನ್ನು ಇರ
ದೆ, ಯರಡನೆಯು ಶರೀರನ್ನು ... ॥೩॥

ಮಿಕ್ಕ ನಾಲ್ಕರ ತೋರಲಭ್ರದಿ ಮರೆಯದಂತು ದೋಷವು । ದಕ್ಕಿದ
ಕ್ಕದರಂತೆ ಮಾಯೆಯುತಗುಲಸೆಯದು ॥ಟೀ॥ ಪೃಥ್ವಿ, ಅಪ್ಪು, ಅಗ್ನಿ,
ವಾಯುಗಳೆಂಬ, ನಾಲ್ಕು ಭೂತಗಳ ಸಂಬಂಧ, ಆಕಾಶದಲ್ಲಿ ಯಿದ್ದಾಗ್ಯಾ
ದರು, ಆ ಅಂತರಿಕ್ಷದಲ್ಲಿ ಈ ನಾಲ್ಕು ಭೂತಗಳ ದೋಷ ಹ್ಯಾಗೆ ಪ್ರಕಾಶಿ
ಸಲಿಲ್ಲವೋ, ಅದರೋಪಾದಿಯಲ್ಲಿ ಮಾಯಾಸಂಬಂಧದಪ್ರಕಾಶವಿಲ್ಲನು ॥೪॥

ಯೆನುವದೀಪ್ರಾಕೃತಿಯುತದಧಿಕರಣಿತೆಮೆಂದುಪೇಳ್ವುದೆ । ಘನರು
ಮೂರನೆಯಂಗಮೆಂದದನನುಕರಿಪರುೂ॥ ॥ಟೀ॥ ಇಂತೆನ್ನುವದರಿಂದ
ಈ ಮೂಲಪ್ರಕೃತಿಯು, ಆ ಪರಬ್ರಹ್ಮವೆ ಅಧಿಷ್ಠಾನವಾಗಿ ಉಳ್ಳಂಥಾ
ದ್ದು ಯೆಂದುಹೇಳುವುದು ಯಾವದುಂಟೊ.ಅದನ್ನು ದೊಡ್ಡವರಾದಂಥಾವ
ರುಮೂರನೆಅಂಗವೆಂದು ಅಂಗೀಕರಿಸುತ್ತಲಿಧ್ದಾರೆ ॥೫॥

ಯಿಲ್ಲಿಪರಿಣತವಾದಮತಿಯೊಳಿಗಿಲ್ಲವಾಗೇಸಂದೆಗಾ। ಮುಲ್ಲಸತ್ಫಲವಿ
ದಕೆನುವರುವಿಬುಧರಹುರೂ॥ ॥ಟೀ॥ ಹಿಂದೆ ಹೇಳಿದ ಅರ್ಥದಲ್ಲಿ ಪ
ರಿಪಕ್ವವಾದಂಥಾ ಬುದ್ಧಿಯೊಳಗೆ, ಸಂಶಯುವಿಲ್ಲದೆಯಿದ್ದರೆ, ಆ ನಿಶ್ಚಯು
ವಾದ ಜ್ಞಾನವೆ, ಆ ಸಂದೇಹವಿಲ್ಲದುದಕ್ಕೆ ಫಲವೆಂದು ಹೇಳುವವರೆ; ಆ
ತ್ಮಜ್ಞಾನವುಳ್ಳವರೆಂದು ಹೇಳುತ್ತಲಿದ್ದಾರೆ॥ ... ॥೬॥

ಆತುಮನುತಾನತ್ವಯಹೃಷಿಕಾಳಿಯಾದಾದೆಶೆಯಿಂ । ದೀತೆರದೊಳನು

ಮಾನವಿುರೆಶುಭಮನಿಸಲಕ್ಕುಂ॥ ॥ಟೀ॥ ಆತ್ಮಸ್ವರೂಪವಾದಾತನು, ಯಿಲ್ಲದಂಥಾ ಇಂದ್ರಿಯಸನು ಊಹೆಗಳುಳ್ಳವನಾದಕಾರಣ, ಮೇಲೆಹೇಳಿದ ಪ್ರಕಾರ ಅನುಮಾನ ಪ್ರಮಾಣದಿಂದ ಆತ್ಮಾನು ಭವವಾದರೆ, ಮೋಕ್ಷ ಪ್ರಾಪ್ತವಾಯಿತೆಂದು, ಯೆಣಿಸುವದಕ್ಕೆ ಆಗುತ್ತಲಿದೆ॥ ॥೩॥

ವ॥ ಅಂತೆಂದನುಮಾನ ಪ್ರಮಾಣಪದ್ಧತಿಯಂ ಸಮಾಧಿಯುಪ್ಪಂತೆ ಬೋಧಿಸಿ, ಇನ್ನೊಂದು ಪ್ರಕಾರಮಂಪೇಳುತಿರ್ದಪನದೆಂತೆನೆ॥ ಟೀ॥ ಈ ಪ್ರಕಾರವಾಗಿ ಅನುಮಾನ ಪ್ರಮಾಣ ಮಾರ್ಗವನ್ನು ಚನ್ನಾಗಿ ತಿಳಿಯು ವ ಹಾಗೆಹೇಳಿ, ಇನ್ನೊಂದು ರೀತಿಯಾಗಿ ಹೇಳುತ್ತಲಿದ್ದಾನೆ ಅದು ಹ್ಯಾಗೆ ಅಂದರೆ.

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕವಿ
ಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣಪ್ರಭು
ವಿರಚಿತಮಾದ ನಿಜದೀಪಿಕಾ ರತ್ನಗ್ರಂಥದಲ್ಲಿ
ಪದ್ಧತಿ ೧೪ ಕ್ಕಂ ಅನುಮಾನ ಪ್ರಮಾಣ
ಲಕ್ಷಣಂ ಸಂಪೂರ್ಣಂ॥

(ಇತಿಪದ್ಧತಿ ೧೪ ಅನುಮಾನಪ್ರಮಾಣ ಲಕ್ಷಣಂ ಪೇಳಿದಿಲ್ಲಿಗೆ ಮಂಗಳಂ)

---

## ೧೫ ಉಪಮಾನ ಪ್ರಮಾಣ ಪದ್ಧತಿ ಪ್ರಾರಂಭವು.

---

ಮೂಲ॥ ಜಂಪೆ॥ ಶುಚಿಗ್ನಿ ಸಂ ರ್ಗದಿ ಶುದ್ಧಜಲಮೂಷ್ಣಭಾ॥ ಮಚಿರಮಾದಂತೆ ಪರವಸ್ತು ಸಂಗತಿಯಿಂ ॥ಟೀ॥ ಅಗ್ನಿಸಂಬಂಧದಿಂದ, ತಣ್ಣಗೆ ಇರುವಂಥಾ ಉದಕವು ಪೂಷ್ಣತ್ವದ ವೃದ್ಧಿಯು ಆದಹಾಗೆ, ಪರಬ್ರಹ್ಮದ ಸ್ವರೂಪದ ಸಂಬ ದ. ... ॥೧॥

ಕಾಯೇಂದ್ರಿ ಹೃದಯ ಹಂಕಾರಂಗಳಲಿ ಕ ರಾದಿ । ಸಾಯಾಸಮಿಲ್ಲದೆ ಪ್ರಕಟ್ಟಮಾಗುವೂ ॥ಟೀ॥ ಶರೀರವು, ಇಂದ್ರಿಯಗಳು, ಮನಸು,

ಹಾಂಕಾರನ್ನು ಸಹ, ಕ್ರಮವಾಗಿ ಪರಬ್ರಹ್ಮದ ಸಂಗದಿಂದ, ಆಯಾಸವಿಲ್ಲ ದೆ ಕೊಡಿಕೊಂಡು ಇರುವನ್ನು. ... ... ||೨||

ಅಧ್ಯಾಸಗಳು ನಾಲ್ಕು ಹಾರ್ಯಮಾಗನ್ನುಮೂರು । ಬುದ್ಧ್ಯಪೇಕ್ಷಿತ ವೊಂದು ಪೊಂದಿರುತ್ತಿಹುದು ||ಟೀ|| ಆತ್ಮನಲ್ಲಿ ಅಧ್ಯಾರೋಪಗಳು ನಾಲ್ಕುವಿಧವಾಗಿರುತ್ತಾವೆ, ಆ ನಾಲ್ಕರೊಳಗೆ ಹೋಗಾಡಿಸಲ್ಪಟ್ಟಂಥಾವು ಮೂರು, ಬುದ್ಧಿಯಿಂದ ಪರಿಹರಿಸಲ್ತಕ್ಕದ್ದಾಗಿ ಒಂದು, ಹೊಂದುತ್ತಲಿ ರುತ್ತಯಿಧೆ. ... ||೩||

ಆವುದೆನಲಾತ್ಮನೇಹವ್ಮಾದುದಾಬಳಿಯು । ಭಾವಿಸಲುರಜ್ಜು ಸರ್ಪನ್ಯಾ ಯಯೋಗ್ಯಂ ||ಟೀ|| ಅದುಯಾವುದು ಅಂದರೆ, ಆತ್ಮನೆ ಹಾಂಕಾರ ಮಾದುದು. ಆವಸ್ಥಳದಲ್ಲಿ ವಿಚಾರಿಸಿ ನೋಡಿದರೆ ದೃಷ್ಟಾಂತವು ಹೇಳುವ ದಕ್ಕೆ, ರಜ್ಜು ಸರ್ಪನ್ಯಾಯವೆಯೋಗ್ಯವಾಗಿಇರುತ್ತಲಿಧೆ. ಇದುನಿರುಪಾಧಿ ಕಧ್ಯಾಸನ್ನು. ... ||೪||

ಮನವಾತ್ಮನಾದಲ್ಲಿ ಮಹಿಂತರಕ್ತಂಸ್ಪಟಿಕ । ಮೆನುವ ಪೋಲಿಕೆ ವೀ ರ್ಯಮೇತಾನೆನಿಪ್ಪಾ ||ಟೀ|| ಮನಸ್ಸೆ ಆತ್ಮನೆಂಬುವ ಅರ್ಥದಲ್ಲಿ, ನಿ ರ್ಮಲವಾದಂಥಾ ಸ್ಪಟಿಕನ್ನು ರಕ್ತವರ್ನವು ಯಂಬುವದು, ಹ್ಯಾಗೋಹಾ ಗೆ, ಇಂದ್ರಿಯಂಗಳೆ ತಾನೆಂಬುವಪಕ್ಷದಲ್ಲಿ, ಇದುಸೋಪಾಧಿಕಧ್ಯಾಸನ್ನು||೫||

ಬಳಿಯೋಳ್ಪ್ರವಾಹ ಜಲಪತಿ ತರವಿಬಿಂಬಮೆ । ತುಲನಾಸ್ಪದಂ ನಿ ಜಂ ಸ್ಥೂಲತನುವೆಂಬ ||ಟೀ|| ಹರಿಯುವ ಹೊಳೆಯ ಜಲದಲ್ಲಿ ಇದ್ದಂ ಥಾ ಸೂರ್ಯನ ಪ್ರತಿಬಿಂಬವೆ ಸಮಾನವೆಂದು ಹೇಳುವದಕ್ಕೆ, ಸ್ಥಾನವು, ಇದುತದ್ಧರ್ಮ ತಾಧ್ಯಾಸನ್ನು, ಇದೆ ಯತಾರ್ಥನ್ನು, ಸ್ಥೂಲಶರೀರವೆ ಆತ್ಮ ನೆಂಬಸ್ಥಲದಲ್ಲಿ ... ... ||೬||

ದಿಕ್ಕಿನಲಿಹರಿಗೋಲಪಕ್ಕಮೇಭಾವ್ಯಮಾ। ಶಿಕ್ಕಿನಿಂತನ್ನಕಡೆಸಿಡಿವಂತೆ ಸೆಳೆಯೆ|| ||ಟೀ|| ಹರಿಗೋಲಸಂಬಂಧವಾಗಿ ಭಾವಿಸತಕ್ಕದ್ದು, ಇದು ಸಂಬಂಧಮಾತ್ರಾಧ್ಯಾಸನ್ನು, ಈ ತೊಡಕಿನಿಂದ ಆತ್ಮಸ್ವರೂಪವನ್ನು, ಕಡೆಶಿತಿಯುವಹಾಗೆ ಆಕರ್ಷಣೆ ಮಾಡಿಕೊಂಡರೆ|| ||೭||

ಗುರುನಯವಿಚಾರಗಳಕರಣದಿಂನೀನಪ್ಪೆ।ಮರಳಿದೋಽಪಭ್ರಮೆಗೆಬರದಪರತತ್ವಂ॥ ॥ಟೀ॥ ಗುರುಉಪದೇಶದಿಂದಲು, ಶಾಸ್ತ್ರವಿಚಾರಮಾಡಿದುದರಿಂದಲು, ಪ್ರಸಕ್ಷ, ಜನನಮರಣಕ್ಕೆ ಬಾರದೆಯಿರುವ ಪರಮಾತ್ಮಸ್ವರೂಪನೀನೆ ಆಗುತ್ತಲಿದ್ಧೀಯೆ॥ ... ... ॥೮॥

ಯಿದುಸಂಸ್ಮರಣವಿಷಫಲದತಾಮಸಿಲತಾ। ವಿದಳನಲವಿತ್ರಯುಂಬುದುಸಾಧುಹೃದ್ಯಂ॥ ॥ಟೀ॥ ಹೀಗೆ ತಿಳಿದ ಆತ್ಮಸ್ವರೂಪಾನುಭವ ಬಂದುದು, ಯಾವದುಂಟೊ, ಅದು, ಸಂಸಾರವೆಂಬುವ ವಿಷಪೂರಿತವಾದ, ಫಲಕೊಡುವಂಥಾ, ತಮೋಗುಣ ಸಂಬಂಧಉಳ್ಳ ಬಳ್ಳಿಯನ್ನು ಛೇದಿಸುವದಕ್ಕೆ ಬಂಡಿ ಕುಡಗೋಲುಯನ್ನುವದು. ತಿಳಿದಂಥಾವರಿಗೆ, ಮನಸ್ಸಿಗೆ ಮನೋಹರ ಮಾದಂಥಾದ್ದು॥ ... ... ॥೯॥

ಗಗನದಂದದಿನಿರ್ವಿಕಾರವಾಗಿರುತಿಹುದು।ಖಗಪನಂದದಿಭಾಸಕವೆನಿಸುತ್ತಿಹುದು॥ ॥ಟೀ॥ ಆಕಾಶದೋಽಪಾದಿಯಲ್ಲಿ, ಮಾಯಾವಿಕಾರ ರಹಿತವಾಗಿಯಿರುತ್ತಲಿಧೆ ಆತ್ಮಸ್ವರೂಪವು. ಸೂರ್ಯನಹಾಗೆ ಪ್ರಕಾಶಸ್ವರೂಪವು, ಯೆನಿಸಿಕೊಳ್ಳುತ್ತಲಿಧೆ॥ ... ॥೧೦॥

ಕುಂದನದಪರಿಹೆಚ್ಚುಕುಂದಿಲ್ಲದೊಪ್ಪುವದು। ಮಂದಾಕಿನಿಯುವ್ರೋಲ್ನಿರ್ಮಲಾಗೆಸೆಯೆ॥ ॥ಟೀ॥ ಬಣ್ಣದಲ್ಲಿಹೆಚ್ಚುಕಡಮೆಯಿಲ್ಲದ ಕುಂದಣದಹಾಗೆ ಪ್ರಕಾಶಿಸುತ್ತ ಇರುತ್ತಲಿಧೆ.ದೇವಗಂಗೆಯಹಾಗೆ ಅತಿನೈರ್ಮಲ್ಯವಾಗಿ ಶೋಭಿಸುತ್ತಲಿಧೆ॥ ... ... ॥೧೧॥

ಶರಧಿಯೆೋಲ್ಗಂಭೀರಶಕ್ತಿಯಿಂಮೆರದಿಹುದು।ಸುರಭಿಯಂದದಿಸುಖಸ್ಫುರಣಿಯಾಂತಿಹುದು॥ ॥ಟೀ॥ ಮತ್ತು ಸಮುದ್ರದೋಽಪಾದಿಯಲ್ಲಿ ಗಾಂಭೀರ್ಯಸಾಮರ್ಥ್ಯದಿಂದ ಪ್ರಕಾಶಿಸುತ್ತಲಿಧೆ, ಒಳ್ಳೆ ಸುಗಂಧದೋಽಪಾದಿಯಲ್ಲಿ ಸುಖಪ್ರಕಾಶತ್ವವನ್ನು ಹೊಂದಿ ಯಿರುತ್ತಲಿಧೆ॥ ... ॥೧೨॥

ವಿಬುಧಾಲಯದತೆರದಿವಿಚಲನವನುಳಿದಿಹುದು। ಪ್ರಬಲನಂದದಿಜಗದ್ಘಟಿತವಾಗಿಹುದು॥ ॥ಟೀ॥ ಮೇರುಪರ್ವತದೋಽಪಾದಿಯಲ್ಲಿ ಕದಲದೆಯಿರುವದು, ಏಕಚಕ್ರಾಧೀಶ್ವರನೋಽಪಾದಿಯಲ್ಲಿ ಜಗತ್ತಿನಲ್ಲಿ ಆದ್ಯಾಂತವು ತುಂಬಿಕೊಂಡು ಕದಲದಹಾಗೆ ಯಿರುವದು॥ ... ॥೧೩॥

ಮಾಂಸಪಿಂಡದನ್ವೊಲತಿಮಜ್ಜೆಯಂತಳಿದಿಹುದು । ಹಂಸನಂಗದಿಮಾನಸಾವಾಸಿಯಹುದು॥ ॥ಟೀ॥ ಮಾಂಸದ ಮುದ್ದೆಯೋಪಾದಿಯಲ್ಲಿ, ಹೆಚ್ಚಾದಂಥಾ ಮೇಧಸ್ಸಿನ ಬಲವುಂಟಾದ್ದು ಹ್ಯಾಗೋ, ಆ ಯೋಪಾದಿಯಲ್ಲಿ ಜಗತ್ತಿನೆಲ್ಲಾ, ಬಲವನ್ನು ಹೊಂದಿ ಯಿರುವಂಥಾದ್ದಾಗಿಯಿರುತ್ತೆ, ಮಾನಸ ಸರೋವರದಲ್ಲಿ ಯಿರುವಂಥಾ ಹಂಸನೋಪಾದಿಯಲ್ಲಿ, ಜೀವರುಗಳ ಮನಸ್ಸೆಂಬ ಮಾನಸ ಸರೋವರದಲ್ಲಿ ಆ ವಾಸಮಾಡಿಕೊಂಡು ಯಿರುವಂಥಾದ್ದಾಗುತ್ತೆ॥ ... ... ॥೧೪॥

ದೃಷ್ಟಾಂತದೊಳಗೇಕಧೃಡಗುಣವಪಿಡಿದಿಲ್ಲಿ। ಧೃಷ್ಟಿಸಂತಸ್ಥಮಹದೇವನಾನೆಂದು॥ ॥ಟೀ॥ ಈ ವಿಷಯದಲ್ಲಿ ಹೇಳಿಯಿರುವಂಥಾ ದೃಷ್ಟಾಂತವಾದ ವಸ್ತುಗಳಲ್ಲಿ, ಗಟ್ಟಿಯಾಗಿರುವುದೊಂದು ಗುಣವ ಗ್ರಹಿಸಿಕೊಂಡವನಾಗಿ ಪಂಚಕೋಶ ಗುಹಾಂತಸ್ಥನಾಗಿ ಯಿರುವ ದೇವನೆ ನಾನೆಂದು ನೋಡು॥ ... ... ... ॥೧೫॥

ಮೂ॥ ವ॥ ಇಂತೆಂದು ಉಪಮಾನಪ್ರಮಾಣಪದ್ಧತಿಯಂ ಸಿದ್ಧನೆನಿಸಿ, ಇನ್ನೊಂದುಪ್ರಕಾರಮಂ ಪೇಳುತ್ತಿರ್ದಪನದೆಂತೆನೆ॥ ॥ಟೀ॥ ಈ ಪ್ರಕಾರವಾಗಿ ಉಪಮಾನ ಪ್ರಮಾಣ ಮಾರ್ಗದ ಯತಾರ್ಥವನ್ನುಂಟುಮಾಡಿ, ಇನ್ನೊಂದುರೀತಿಯಾಗಿ ಹೇಳುತ್ತಾರೆ, ಅದು ಹ್ಯಾಗೆಅಂದರೆ॥

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕ ವಿ
ಚಾರ ಪಾರೀಣರಾದ ಶಾಲ್ಯಕ್ಷಿತಿಪಾಲ
ಕೃಷ್ಣಪ್ರಭು ವಿರಚಿತವಾದ ನಿಜ
ದೀಪಿಕಾ ರತ್ನಗ್ರಂಥದಲ್ಲಿ ಪ
ದ್ಧತಿ ೧೯ಕ್ಕಂ ಉಪಮಾ
ನಲಕ್ಷಣ ಸಂಪೂರ್ಣಂ॥

ಇತಿ ಪದ್ಧತಿ ೧೯ಕ್ಕಂ ಉಪಮಾನಪ್ರಮಾಣಲಕ್ಷಣ ಪೇಳಿದಿಲ್ಲಿಗೆಮಂಗಳಂ.

——*——

## ೨೦ ಶಬ್ದಪ್ರಮಾಣ ಪದ್ಧತಿ ಪ್ರಾರಂಭವು.

—*—*—

ವೃತ್ತ॥ ವಿಶ್ವಸನೀಯವಾವುದುಯಥಾರ್ಥಮೆನಿಪುದುವವಾಕ್ಯಮ
ಲ್ಲಿಯೇ। ವಿಶ್ವಸನೀಯವಾವುದುಸನಾತನವಾಗಿಹವೇದವಲ್ಲಿಯೇ। ವಿಶ್ವಸನೀ
ಯವಾವುದುನಿಜಪ್ರತಿಪಾದಕವಾದುದಲ್ಲಿಯೇ। ವಿಶ್ವಸನೀಯವಾವುದದು
ತತ್ತ್ವಮಸೀತಿಪದತ್ರಯಂಶಿವಂ॥ ॥ಟೀ॥ ಪ್ರೀತಿಮಾಡುವದಕ್ಕೆ ಯೋಗ್ಯ
ವಾದಂಥಾದ್ದು ಯಾವುದುಅಂದರೆ, ಅಬದ್ಧವಾಗದೆ ನಿಜವಾಗುವಂಥಾ
ಮಾತುಗಳು, ಆಮಾತುಗಳಲ್ಲಿಯು ವಿಶ್ವಾಸಮಾಡುವದಕ್ಕೆ ಯೋಗ್ಯವಾ
ದಂಥಾದ್ದು ಯಾವದುಅಂದರೆ, ಅಪೌರುಷೇಯವಾಗಿ ಪುರಾತನಗಳಾಗಿಯಿ
ರುವಂಥಾ ವೇದಗಳು, ಆ ವೇದ ನಾಲ್ಕರಲ್ಲಿಯು, ವಿಶ್ವಾಸಮಾಡುವದಕ್ಕೆ
ಯೋಗ್ಯವಾದಂಥಾದ್ದು ಯಾವದುಅಂದರೆ, ಆತ್ಮಸ್ವರೂಪವನ್ನ ಹೇಳು
ವಂಥಾ ವಚನಗಳು, ಆ ಆತ್ಮಸ್ವರೂಪವನ್ನ ಹೇಳುವಂಥಾ ಶೃತಿಗಳಲ್ಲಿ,
ವಿಶ್ವಾಸ ಮಾಡುವದಕ್ಕೆ ಯೋಗ್ಯವಾದಂಥಾದ್ದು ಯಾವದುಅಂದರೆ, ತ
ತ್ವಮಸಿಯೆಂಬ ಪದತ್ರಯವು, ಅನೇಕಶುಭಕರವಾಗಂಥಾದ್ದು॥ ॥೧॥

ಮೂ॥ ವ॥ ಅದರಂಗವೆಂತೆನೆ, ॥ಟೀ॥ ಅದರ ಅವಯವಗ
ಳು ಹ್ಯಾಗೆಅಂದರೆ॥ ... ...

ಮೂ॥ ಜಂಪೆ॥ ತತ್ತೆಂಬಪದದೊಳರ್ಥಂಘಟಿಪುದೀತೆರದಿ ! ಮತ್ತ
ಮಾತ್ವಂಪದದೊಳೊತ್ತರಿಪ್ಪುದಿಂತು॥ ॥ಟೀ॥ ತತುಯೆಂಬ ಪದದಲ್ಲಿ
ಯರಡುಪ್ರಕಾರವಾಗಿ ಅರ್ಥ ಘಟನೆಯಾಗುತ್ತೆ, ಮತ್ತು, ತ್ವಂಯೆಂಬ
ಪದದಲ್ಲಿಯೂ ಯರಡುಪ್ರಕಾರವಾಗಿ ಅರ್ಥ ಘಟಿಸುತ್ತೆ॥ ॥೧॥

ವಾಚ್ಯಲಕ್ಷ್ಯೋಪಪದವಾರದಿಂತತ್ವದಕೆ। ವಾಚ್ಯಾರ್ಥಮೀಶ್ವರರವರ್ಗ
ವೊಂದಾಗಿ॥ ॥ಟೀ॥ ವಾಚ್ಯಾರ್ಥವೆಂಬ ಉಪಪದದಿಂದಲು, ತತ್ವ
ದಕ್ಕೆ ಈಶ್ವರತ್ರಯವು ವಾಚ್ಯಾರ್ಥವು॥ ... ॥೨॥

ಲಕ್ಷ್ಯಾರ್ಥಮಿವರಿಂವಿಲಕ್ಷಣಿಸಿದಾಬೊಮ್ಮ। ವೀಕ್ಷಿವಿಸಾತೆರದಿಂದವಿಶ್ವಾ
ದಿಗಳಲಿ॥ ॥ಟೀ॥ ಇನ್ನು ಲಕ್ಷ್ಯಾರ್ಥವನ್ನು ಹೇಳುತ್ತಿದ್ದಾನೆ, ವಿರಾ
ಟ್, ಹಿರಣ್ಯಗರ್ಭ, ಅವ್ಯಾಕೃತರೆಂಬ, ಈಶ್ವರತ್ರಯದ ಲಕ್ಷಣವಿಲ್ಲದೆ

ಯಿರುವಂಥಾ, ಜಾತಿನಾಮರೂಪ ಕ್ರಿಯಾರಹಿತವಾದ ಪರಬ್ರಹ್ಮವೆ, ಲಕ್ಷ್ಯಾರ್ಥವು, ವಿಶ್ವ, ತೈಜಸ, ಪ್ರಾಜ್ಞರೆಂಬ, ಜೀವತ್ರಯದಲ್ಲಿಯು ಈ ದೇಪ್ರಕಾರವಾಗಿ, ವಾಚ್ಯಾರ್ಥ ಲಕ್ಷ್ಯಾರ್ಥಗಳು, ಇದರಹಾಗೆ ನೋಡಿ ಕೊಳ್ಳತಕ್ಕದ್ದು ॥ ... ... ... ॥೩॥

ತ್ವಂಪದದಿಸಂಶ್ರಯಿಪವಾಚ್ಯಾರ್ಥಮಿವರಿಂದ । ಲುಂಪೆರತೆನಿಸಿಗಳಿತ ಲೋಲನಾದಾತ್ಮಂ॥ ॥ಟೀ॥ ತ್ವಂಯೆಂಬ, ಪದದಲ್ಲಿ ಹೊಂದಿದಂಥಾ ಜೀವತ್ರಯವು ವಾಚ್ಯಾರ್ಥವು, ಈ ಜೀವತ್ರಯದಿಂದಲು ಬೇರೆಯೆನ್ನಿಸಿ, ಹೋಗಾಡಿಸಲ್ಪಟ್ಟಂಥಾ, ಚಂಚಲತ್ವ ಉಳ್ಳ ಜೀವಾತ್ಮನಿಗು॥ ॥೪॥

ಪ್ರತ್ಯಗಾತ್ಮನೆನಿಪ್ಪ ಪರಬೊಮ್ಮಕೀತಗಂ । ಸತ್ಯವಾದದ್ವೈತಸಾರಕ್ಕೆ ಸುಲಭಂ ॥ಟೀ॥ ವಿಶುದ್ಧನಾದ ಜೀವಾತ್ಮನಿಗು, ಲಕ್ಷ್ಯಾರ್ಥಭೂತನಾದ ಪ್ರತ್ಯಗಾತ್ಮ ಬ್ರಹ್ಮಕ್ಕು, ಯಥಾರ್ಥವಾದಂಥಾ ಏಕತ್ವವಾದ ಐಕ್ಯವು ಹೇಳುವದಕ್ಕೆ ಸುಲಭವು. ... ॥೫॥

ತ್ವಂತತ್ವದಂಗಳಿಗೆ ವಾಚ್ಯಾರ್ಥರಾಗಿರ್ಪ । ಸ್ವಾಂತಭೂಪತಿಯೆ ವಿಶ್ವಾದಿ ಜೀವರಿಗು ॥ಟೀ॥ ಯೆಲೈ ಮನಃಪ್ರಭುವೆ! ತ್ವಂಪದಕ್ಕು, ತತ್ವದಕ್ಕು, ವಾಚ್ಯಾರ್ಥರಾಗಿರುವಂಥಾ, ವಿಶ್ವ, ತೈಜಸ, ಪ್ರಾಜ್ಞರೆಂಬ ಜೀವತ್ರಯಕ್ಕು. ... ॥೬॥

ಆವಿರಾಟ್ಪುರುಷಾದಿ ಯಾಧೀಶ್ವರತ್ರಯಕಂ । ವ್ಯಾವಹಾರಿಕ ಗುಣದ ವರ್ಗಮಂ ಕಳೆದು ॥ಟೀ॥ ಆ ಪೂರ್ವೋಕ್ತವಾದ, ವಿರಾಟ್, ಹಿರಣ್ಯಗರ್ಭ, ಅವ್ಯಾಕೃತೇಶ್ವರರೆಂಬ, ಈಶ್ವರತ್ರಯಕ್ಕು, ವ್ಯವಹಾರಕ್ಕೆ ಬಂದಂಥಾ ಗುಣಗಳ ಸಮೂಹವನ್ನು ಕಳೆದು. ... ॥೭॥

ವಸ್ತುಮಾತ್ರೈಕ್ಯವಂ ಪೇಳ್ವದಸಿಪದಂ । ಶಕ್ತಭಾಗತ್ಯಾಗ ಚಾರುಲಕ್ಷಣೆಯಿಂ ॥ಟೀ॥ ಚಿದ್ವಸ್ತು ಮಾತ್ರಕ್ಕೆ ಐಕ್ಯವನ್ನು ಹೇಳುತ್ತಲಿಥೆ ಅಸಿಪದವು, ಪ್ರಶಸ್ತವಾದ ಮನೋಹರವಾದಂಥಾ, ಜಹದ ಜಹಲ್ಲಕ್ಷಣೆಯಿಂದ ಚೈತನ್ಯಾಖ್ಯವನ್ನು ಅಸಿಪದ ಹೇಳುತ್ತಲಿಥೆ. ... ॥೮॥

ಮತ್ತೆ ಸೋಯಂ ದೇವದತ್ತಯೆಂಬುದವೊಲಿದಿ । ಗುತ್ತರ ಮಿದರಜಾಗೆಯೊಳೊಂದುವದೆ ಭೇದಂ ॥ಟೀ॥ ಮತ್ತು ಸೋಯಂದೇವದತ್ತಃ ಯಂ

ಬ ಪದವು, ವಾದಿಗಳಾದಂಥಾ ಇತರಮತಾಂತರಸ್ಥರಿಗೆ ಪ್ರತ್ಯುತ್ತರವು, ಈ ಉತ್ತರ ಪ್ರಕಾರದಲ್ಲಿ ಭೇದವು ಬಂದೀತೆ? ಬರುವದಿಲ್ಲವೆಂಬರ್ಥ (ತತ್ವಮಸಿಯೆಂಬ ವಾಕ್ಯಕ್ಕೆ) ಇನ್ನು ಮಹಾ ವಾಕ್ಯಾರ್ಥವು ಯೆಲ್ಲರಿಗು ತಿಳಿಯುವ ಹಾಗೆ ಆ ಅರ್ಥವನ್ನು ತಿಳಿಸಲ್ಪಡುತ್ತಲಿದ್ದಾನೆ ಪೂರ್ವೋಕ್ತ, ಸ್ಥೂಲ, ಸೂಕ್ಷ್ಮ, ಕಾರಣ, ವೆಂಬ ತನುತ್ರಯ ಸಮಷ್ಠಿರೂಪವಾದ, ವಿರಾಟ್, ಹಿರಣ್ಯಗರ್ಭ, ಅವ್ಯಾಕೃತೇಶ್ವರರೆಂಬ, ಈಶ್ವರತ್ರಯವನ್ನು, ಬ್ರಹ್ಮವು ಕೂಡಿ, ತಪ್ತಾಯಃ ಪಿಂಡದೋಪಾದಿಯಲ್ಲಿ, ಏಕಾಕಾರವಾಗಿ ತಿಳಿಯೋಣವೆ, ತತ್ತೆಂಬ ಪದಕ್ಕೆ ವಾಚ್ಯಾರ್ಥವೆನಿಸಿಕೊಂಬುದು. ಮತ್ತು ತನುತ್ರಯ ವ್ಯಷ್ಠಿರೂಪವಾದ, ವಿಶ್ವ, ತೈಜಸ, ಪ್ರಾಜ್ಞರೆಂಬ, ಜೀವತ್ರಯವು ಪ್ರತ್ಯಗಾತ್ಮನಾದ ಕೂಟಸ್ಥ ಚೈತನ್ಯವು ಕೂಡಿ, ತಪ್ತಾಯಃ ಪಿಂಡದ ಹಾಗೆ ಏಕಾಕಾರವಾಗಿ ನೋಳ್ಪುದೆ, ತ್ವಂ, ಯೆಂಬ ಪದಕ್ಕೆ ವಾಚ್ಯಾರ್ಥವು. ವಿರಾಟ್ಪುರುಷಾದಿಯಾದ ಈಶ್ವರತ್ರಯವನ್ನು, ಬೇರ್ಪಡಿಸಿದ ನಿರುಪಾಧಿಕವಾದ ಬ್ರಹ್ಮ ಚೈತನ್ಯವೆ, ತತ್ಪದಲಕ್ಷ್ಯಾರ್ಥವು ಮರಳಿ ವಿಶ್ವಾದಿ ಜೀವತ್ರಯವನ್ನು ಬೇರೆಯಾಗಿ ಮಾಡಿದ ಪ್ರತ್ಯಗಾತ್ಮ ಬ್ರಹ್ಮ ಚೈತನ್ಯವೆ, ತ್ವಂಪದಕ್ಕೆ ಲಕ್ಷ್ಯಾರ್ಥವು. ಮತ್ತು ಲಕ್ಷಣಗಳು ಯೆಂಥಾವು ಅಂದರೆ, ಜಹಲ್ಲಕ್ಷಣೆ, ಅಜಹಲ್ಲಕ್ಷಣೆ, ಜಹದ ಜಹಲ್ಲಕ್ಷಣೆ, ಮೂರು ಪ್ರಕಾರವಾಗಿ ಇರುವದು, ಅದರಲ್ಲಿ ಭಾಗತ್ಯಾಗ ಲಕ್ಷಣೆಯಿಂದ, ಕಿಂಚಿಜ್ಞತ್ವ, ಸರ್ವಜ್ಞತ್ವಾದಿ ಗುಣಂಗಳು, ಮಾಯಾವಿದ್ಯಾಂಶಗುಣಂಗಳೆಂದು ಕಳೆದು ಏಕಚೈತನ್ಯವನ್ನು ಹೇಳುವದು, ಆಸಿಪವು. ಇದೇ ಬ್ರಹ್ಮಾತ್ಮೈಕ್ಯವು (ಸದೇವಸೌಮ್ಯೇ ಇದಮಗ್ರ ಅಸೀತ್) ಯೆಂಬಶ್ರುತ್ಯಾರ್ಥಾನುಸಾರವಾದ ಬ್ರಹ್ಮದೊಡನೆ ಐಕ್ಯವು. ...

ಕಂ॥ ಇದು ಸಂಸಾರಾಟವಿಗಂ। ಸದಾವಾನಲಮೆಂದುಸಾಮಶಿರದಿಂತೆಗೆದೊ।ಪ್ಪಿದೊಳುದ್ದಾಲಕನೊರೆದಂ। ಮುದದಿಂದಂಶ್ವೇತಕೇತುವಿಗೆನವವಾರಂ॥ ॥೮೬॥ ಪೂರ್ವೋಕ್ತವಾದ ತತ್ವಮಸಿಯೆಂಬ ಪದಕ್ಕೆ ಅರ್ಥವಾದ, ಜೀವಬ್ರಹ್ಮಾತ್ಮೈಕ್ಯಾನುಭಾವವು, ಜನನ ಮರಣ ರೂಪವಾದ ಸಂಸಾರವೆಂಬ ಅರಣ್ಯ ಹೊಂದುವದಕ್ಕೆ ಅಶಕ್ಯವಾದ ದಾವಾಗ್ನಿ

ಯೆಂದು, ಸಾಮವೇದಶಿರಸ್ಸಾದ ಉಪನಿಷತ್ತಿನಿಂದ ತತ್ವಮಸಿಯೆಂಬವಾಕ್ಯವನ್ನು ತೆಗೆದುಚನ್ನಾಗಿಉದ್ದಾಲಕನು ತನ್ನಮಗನಾದಶ್ವೇತಕೇತುವಿಗೆ ಸಂತೋಷದಿಂದ ಒಂಭತ್ತು ಬಾರಿಹೇಳಿದನು॥ ... ॥೧॥

ಮೂ॥ ವ॥ ಮತ್ತ ವಿಶಾರ್ಥದಲ್ಲಿ ಪರಮ ಶಿವದ್ರೋಹಿಗಳಾಗಿ, ಯೇಷ್ಯದೈಭಗ್ಯಮಹಾನರಕ ಯಾತನಾಫಲಭೋಕ್ತೃಗಳಾದಪುರುಷರ್ಗೆ, ನೋಡಲಿದುಯುವತ್ಯಾದಿಭಾವ್ಯರಮ್ಯಮಾದ ನಗರಮಲ್ಲ, ಮತ್ತೇನ್ಯೆಯುಯೆಂದೊಡೆ, ಮಂದಾರಅಲರ ಭಸ್ಸಂಗಮಾನಮರಂದ ಮಧುರ ಮಂದಾಕಿನೀತೀರ ಬೃಂದಾರಕವಾಟಿಯುಂಬಂತರ್ಥಮಾದ ಮೆಂಗುತೋರ್ಪುದು॥

॥ಟೀ॥ ಮತ್ತು ಈಯರ್ಥದಲ್ಲಿ, ಪರಮೇಶ್ವರನಲ್ಲಿ ದ್ರೋಹಿಗಳಾಗಿರುವದ್ದರಿಂದ, ಮುಂದೆ ಬರುವಂಥಾ ಅನುಭವಕ್ಕೆ ಯೋಗ್ಯಮಾದ, ಮಹಾನರಕದಲ್ಲಿ ಅಧಿಕವಾದ ವೇಧನೆಯೆಂಬ ಫಲವನ್ನು ಉಣ್ಣುವಂಥಾವರಾದ, ನರರಿಗೆ ನೋಡುವದಕ್ಕೆ ಇದು ಪೂರ್ವೋಕ್ತಮಾದ ಬ್ರಹ್ಮಸ್ವರೂಪವು, ಆ ಪುರುಷರಿಗೆ ಮನಸ್ಸಿಗೆ ಸಂತೋಷಕರವಾದ ಯುವತಿ ಸಮೂಹದಿಂದ ರಮಿಸುವದಕ್ಕೆ ಯೋಗ್ಯಮಾದ ಪಟ್ಟಣವೆ ಆಗುವದಿಲ್ಲ, ಇನ್ನೇನಾಗುತ್ತೆಯೆಅಂದರೆ, ಮಂದಾರ ವೃಕ್ಷದಲ್ಲಿ ಯಿರುವ, ಹುವ್ವಿನ ಗೊಂಚಲಿನಿಂದ ಸುರಿಯುವಂಥಾ ಮಕರಂದದಿಂದ ಶೀಯಾಗಿ ಯಿರುವಂಥಾ ದೇವಗಂಗೆಯ ತೀರದಲ್ಲಿಯಿರುವ, ದೇವತೆಗಳ ಸಮೂಹವೆಂಬಂತೆ, ಅರ್ಥವಾದವೆಂದು ತೋರುವದು॥ ... ... ॥೧॥

ಮೂ॥ ವ॥ ತದ್ದೇವತಾಚಿನ್ಹ ಚಿನ್ಹಿತಶಿಲಾಪ್ರತಿಮಾಚಯದಲ್ಲಿ ಸಾಕ್ಷಾತ್ತದ್ದೇವತಾಬುದ್ಧಿಯು ಅವ್ಯಭಿಚಾರಿತಮಾಗಿ ಬಂದಂತೆ ಉಪಾಸನಾಪರತೆಯಿಂದೆಂದು ತಿಳಿಉದು॥ ॥ಟೀ॥ ಯಾವಯಾವ ದೇವತೆಗಳ ಗುರುತುಗಳಿಂದ ಸುರಿಸಲ್ಪಟ್ಟ ಶಿಲಾದಾರು ಆದಿಯಾದ ವಿಗ್ರಹಗಳ ಸಮೂಹದಲ್ಲಿ, ಪ್ರತ್ಯಕ್ಷವಾಗಿ ಯಿರುವ ಆಯಾಯ ದೇವತಾ ಬುದ್ಧಿಯು ಭೇದಮಾಗದೆ ಪ್ರಾಪ್ತಮಾದಂತೆ, ಈ ವಾಕ್ಯವು ದೇವತಾ ಉಪಾಸನಾಪರವ್ಯಾಗೋಹಾಗೆ, ಭೇದವಿಲ್ಲೆಂದು ತಿಳಿವುದು. ... ॥೨॥

ವ॥ ಈತಂ ಬ್ರಹ್ಮಚಾರಿಯೆ ವೀತಿಹೋತ್ರನಲ್ಲವೆಯುಂಬ ವಾಕ್ಯದಂ

ತೆ, ಗುಣಸಾದೃಶ್ಯವೆಂದು ಚಿತ್ತಕ್ಕಭ್ಯುಪಗಮಂ ಸೇರುವುದು॥

॥ಟೀ॥ ಯೆದುರಾಗಿ ಕಾಣಿಸುವಂಥಾ ಬ್ರಹ್ಮಚಾರಿಯೆ ಯಜ್ಞೇಶ್ವರನಲ್ಲವೆ ಯೆಂಬವಚನದಹಾಗೆ, ಗುಣಸಾಮ್ಯವೆಂದು ಮನಸ್ಸಿಗೆ ಅಂಗೀಕಾರವು ಆಗುವದು॥ ... ... ॥೩॥

ಮೂ॥ ವ॥ ಈಚತುಷ್ಟ್ಯತ್ವಕುವ್ಯೂಹಮಧ್ಯದೊಳಿದು ಗೋವಿನ ದೇಹವೇ ಸರಿಯೆಂದು, ಅಸಾಧಾರಣ ಲಕ್ಷಣದಿಂ ನಿರ್ಧರಿಸುವಂತೆ ಜಾತಿ ವ್ಯಕ್ತಿ ಪರೋಕ್ತಿಯೆಂಬರಿವು ತಲೆಯೆತ್ತುವದು॥ ॥ಟೀ॥ ಈಪದ ಚತುಷ್ಟಯಮುಳ್ಳ ಜೀವಜಂತುಗಳ ಗುಂಪಿನನಡುವೆ, ಇದು ಗೋವಿನ ದೇಹವೇಸರಿ ಯೆನ್ನುವ ಗಂಗೆ ದೊಗಲುಯೆಂಬ ಅಸಾಧಾರಣ ಲಕ್ಷಣದಿಂದ, ನಿಶ್ಚೈಸಿದಹಾಗೆ ಜಾತಿವ್ಯಕ್ತಿ ಆದೀನವಾದ ವಾಕ್ಯವುಯೆಂಬ ತಿಳಿವು ಪ್ರಕಾಶಿಸುತ್ತಲಿಧೆ॥ ... ... ॥೪॥

ಮೂ॥ ವ॥ ಆತತ್ವಂ ಪದಗಳಿಗರ್ಥಂಗಳಾಧೀಶ್ವರ ಜೀವರು, ಮೃತ್ತಿಕಾ ಘಟಂಗಳಂತೆ, ಕಾರಣ ಕಾರ್ಯ ಸಂಬಂಧಮುಳ್ಳವರೆಂಬುದು ಸ್ತರ್ಕಕ್ಕೆ ವಿಸ್ತಾರವಾದ ಹಸ್ತಾವಲಂಬನ ಮುಂಟಾಗುವದು॥ ॥ಟೀ॥ ಪೂರ್ವ ಹೇಳಿದಂಥಾ ತತು ಯೆಂಬುವಪದಕ್ಕು, ತ್ವಂ ಯೆಂಬುವಪದಕ್ಕು, ಮುಖ್ಯಾರ್ಥಂಗಳಾದ ಈಶ್ವರ ಜೀವರು, ಉಪಾದಾನ ಕಾರಣವಾದ ಮೃತ್ತಿಕೆಗು, ತತ್ಕಾರ್ಯ ಭೂತವಾದ ಘಟಕ್ಕು, ಕಾರ್ಯ ಕಾರಣ ಸಂಬಂಧ ಹ್ಯಾಗೆಯೋ ಹಾಗೆ, ಈಶ್ವರನು ಕಾರಣ ಭೂತವಾದವನು, ಜೀವನು ಕಾರ್ಯಭೂತವಾದವನುಯೆಂಬ, ದೃಷ್ಟವಾದ ಯುಕ್ತಿಗಳಿಗೆ ವಿಸ್ತಾರವಾದ ಕೈಯಾಧಾರ ಕೊಟ್ಟಹಾಗೆ ಆಗುವದು॥ ... ॥೫॥

ಮೂ॥ ವ॥ ನೀಲಶಬ್ಧಮುತ್ಪಲಕ್ಕೆ ಗುಣತೆಯಂ ಸಂಪಾದಿಸುವಂತೆ, ತಚ್ಛಬ್ದ ಗುಣವಿಶಿಷ್ಟವಾತ್ವಂ ಪದಮೆಂಬ, ದುಸ್ಸಮಾಸಜ್ಞಾನಂ ಪುಟ್ಟುವದು॥ ॥ಟೀ॥ ನೀಲಶಬ್ಧವುಕನ್ನೈದಿಲೆ ಪುಷ್ಪಕ್ಕೆ ಕಪ್ಪಾಗಿರುವ ಗುಣವ ಸಂಪಾದಿಸಿಕೊಟ್ಟಹಾಗೆ, ತಚ್ಛಬ್ದಕ್ಕೆ ಮುಖ್ಯಾರ್ಥವಾದ, ಈಶ್ವರನ ಗುಣದೊಡನೆ ಕೂಡಿಕೊಂಡು ಯಿರುವನು. ತ್ವಂಪದಕ್ಕೆ ವಾಚ್ಯಾರ್ಥನಾದ ಜೀವನುಯೆಂಬ, ದುಷ್ಟವಾದಸಮಾಸಜ್ಞಾನ ಹುಟ್ಟುತ್ತಲಿಧೆ॥೬॥

ಮೂ॥ ವ॥ ಅವಿಕಾರವಾದ ಹಾಲಿಗೆ ಮೊಸರಾಗುವದೆಂತು ವಿಕಾರವೊ, ಹಾಗೆ, ತತ್ಪದಕ್ಕುಪಾಧಿಯಿಂ, ತ್ವಂಪದರೂಪವಿಕಾರವಿವರರ್ಥಂಗಳಾದೀಶ್ವರ ಜೀವರ್ಗೆ ಬಂದುದೆಂದು, ಪರಿಣಾಮತ್ವ ಮಳವಡುವದು॥ ॥ಟೀ॥ ವಿಕಾರರಹಿತವಾದಂಥಾ ಹಾಲಿಗೆ, ಹುಳಿಮಿಶ್ರದಿಂದ ಮೊಸರಾಗುವದು ಯೆಂತು ವಿಕಾರವೋ, ಅದರೋಪಾದಿಯಲ್ಲಿ, ತತ್ಪದಾರ್ಥನಾದ ಈಶ್ವರನಿಗೆ ಮಾಯಾ ಉಪಾಧಿಯಿಂದ, ತ್ವಂಪದಾರ್ಥರೂಪ ಜೀವತ್ವ ವಿಕಾರವೆಂಬ ಪರಿಣಾಮತ್ವವು, ಈಶ್ವರಜೀವರಿಗೆ ಬಂದು ಪ್ರಾಪ್ತವಾಗುವದು॥ ... ... ॥೭॥

ಮೂ॥ ವ॥ ವಾರ್ಧಿಯಲ್ಲಿ ಕಣಕ್ಕೆ ಭಾವಭೇದವೆಂತುಟಾ ತತ್ಪದಾರ್ಥನಾದೀಶ್ವರಂಗೆ, ತ್ವಂಪದಾರ್ಥನಾದ ಜೀವನ ಭಾವಭೇದವಾಯಿತೆಂಬಶಾಂಶಿಕಪ್ರಶಂಶೆಗೊಡಲಾಗುವದು॥ ॥ಟೀ॥ ಸಮುದ್ರದಲ್ಲಿ, ಉದಕಬಿಂದುವಿಗೆ, ಆಕಾರ, ಭೇದಹ್ಯಾಗೋಹಾಗೆ, ತತ್ಪದಾರ್ಥನಾದೀಶ್ವರಂಗೆ, ತ್ವಂಪದಾರ್ಥನಾದ ಜೀವನ ರೂಪಭೇದವಾಯಿತುಯಂಬುವ, ಜೀವನು ಅಂಶ, ಈಶ್ವರನು ಅಂಶಿಯುಯಂಬುವ ಮಾತಿಗೆ ಸ್ಥಾನವವಾಗುವದು॥ ... ... ... ॥೮॥

ಮೂ॥ ವ॥ ಬಿಂಬಕ್ಕೆ ಪ್ರತಿಬಿಂಬವೆಂತನ್ಯ ಸಂಬಂಧಮುಳ್ಳುದೊಡಂ, ಭಿನ್ನದೇಶಸ್ಥಿತವೆಂತುಟಂತು ತತ್ಪದಾರ್ಥೇಶ್ವರರಾದ ರೋಪಜೀವ್ಯವಾದ, ತ್ವಂಪದಾರ್ಥ ಜೀವನೀವನಾತಂಗಭಿಮುಖಿ ಭಿನ್ನ ದೇಶಸ್ಥಿತನೆಂಬ ದಾಷ್ಟಾರ್ಂತಿಕತ್ವಂಪೊಂದುವುದು॥ ॥ಟೀ॥ ಸೂರ್ಯಬಿಂಬಕ್ಕೆ ಭೂಲೋಕಸ್ಥವಾದ ಜಲದಲ್ಲಿ ಪ್ರತಿಬಿಂಬಿಸಿದ ಸೂರ್ಯನ ಪ್ರತಿಬಿಂಬವು, ಹ್ಯಾಗೆ ಅನಾನ್ಯ ಸಂಬಂಧಯಿಲ್ಲದೆ ಯಿದ್ದಂಥಾದ್ದಾದಾಗ್ಯು, ಭಿನ್ನದೇಶಸ್ಥಿತತ್ವ ಹ್ಯಾಗೋಹಾಗೆ, ತತ್ಪದಾರ್ಥನಾದ ಈಶ್ವರನ ಆಧಾರದಿಂದ ಬಾಳಿಕೊಂಡುಯಿರುವ, ತ್ವಂಪದಕ್ಕೆ, ಅರ್ಥಭೂತನಾದ ಜೀವನು ಯಿವನು, ಆ ಈಶ್ವರನಿಗೆ ಯೆದುರಾಗಿಯಿರುವಂಥಾ ಬೇರೆಯಾದ ಪ್ರದೇಶದಲ್ಲಿ ಯಿರುವನೆಂಬ ದೃಷ್ಟಾಂತವು ಹೊಂದುವದು॥ ... ॥೯॥

ಮೂ॥ ವ॥ ಈ ಬಂಭತ್ತು ದೋಷಂಗಳಂ ಕಳೆಯಲಾಗಿ, ತತ್ವಮ

ಸಿಯೆಂಬ ವಾಕ್ಯವೊಂದನೆ, ಒಂಭತ್ತು ವೇಳ್ಯೆಪೇಳಿದುದು, ಆದರೀದೋಷನಿವಾರಣಪ್ರಕಾರವೆಂತು.॥ ॥ಟೀ॥ ಈಪ್ರಕಾರವಾಗಿ ಹೇಳಿದ ಒಂಭತ್ತು ದೋಷಗಳನ್ನು ಕಳೆದು ಬಿಡಲಾಗಿ, ತತು, ತ್ವಂ, ಅಸಿ; ಯೆಂಬ ಮಹಾ ವಾಕ್ಯವೊಂದನ್ನೆ, ಒಂಭತ್ತಾವರ್ತಿ ಹೇಳಿದುದು. ಹಾಗಾದರೆ, ಈ ಒಂಭತ್ತು ದೋಷಗಳು ನಿವಾರಣವಾಗುವ ರೀತಿಹ್ಯಾಗೆ॥ ॥೧೦॥

ಮೂ॥ ವ॥ ಕೇಳ್ಳೆಪರಿವೃಢನೆ, ಅರ್ಥವಾದದಲ್ಲಿ ಮೋಹದಿಂದತಿಶಯಂ ಬಂದುದು। ಉಪಾಸನಾ ಪರತೆಯಲ್ಲಿ ಕಾರ್ಯದಿಂದಾರೋಪಂಬಂದುದು। ಗುಣಸಾದೃಶ್ಯದೊಳೇಕಧರ್ಮಂಬಂದುದು। ಜಾತಿವ್ಯಕ್ತಿಪರದಲ್ಲಿ ವಿಶೆಷಂಬಂದುದು। ಕಾರಣಕಾರ್ಯಸಂಬಂಧದಲ್ಲಿ ನಾಮರೂಪಂಗಳು ಬಂದವು। ವಿಶೇಷಣ ವಿಶೇಷ್ಯಸಂಬಂಧದಲ್ಲಿ ಪ್ರಧಾನೋಪಸರ್ಜನತ್ವಂಬಂದುದು। ಕ್ಷೀರದಧಿತ್ವದಲ್ಲಿ ಪರಿಣಾಮಂಬಂದು। ಅಂಶಾಂಶಿಕತ್ವದೊಳ ಗುಚ್ಚನೀಚತ್ವಂಬಂದುದು। ಪ್ರತಿಪ್ರತಿಬಿಂಬಭಾವದಲ್ಲಿ ದೇಶಭೇದ ನಿಮಿತ್ತದಿಂ ಭಾಸಕಭಾಸ್ಯತ್ವಂಬಂದುದು। ಈ ದೋಷಂಗಳಂ ಕಳೆಯಲಾಗಿ॥

॥ಟೀ॥ ಯೆಲೈ ಮನಃಪ್ರಭುವೆಕೇಳ್ಳೆ, ಅರ್ಥವಾದದಲ್ಲಿ ಅತ್ಯಾಂತ ಆಸಕ್ತಿಯಿಂದ ಆಧಿಕ್ಯಂ ಬಂದುದು, ಉಪಾಸನಾ ಪರತ್ವದಲ್ಲಿ ತನ್ನ ಕಾರ್ಯದಿಂದ ದೇವತಾಆರೋಪತ್ವ ಬಂದುದು, ಗುಣಸಮಾನತ್ವದಲ್ಲಿ ಯಿಬ್ಬರಿಗು ಒಂದೇ ಧರ್ಮಬಂದಂಥಾದ್ದಾಯಿತು, ಜಾತಿಯೊಳಗ ವ್ಯಕ್ತಿಪರತ್ವದಲ್ಲಿ ವಿಶೇಷಬಂತು (ಕಾರ್ಯೋಪಾಧಿರಯಂಜೀವಕಾರಣೋಪಾಧಿರೀಶ್ವರಃ) ಯೆಂಬುವನ್ಯಾಯದಿಂದ, ಕಾರ್ಯಕಾರಣ ಸಂಬಂಧದಲ್ಲಿ ಹೆಸರು, ರೂಪುವುಬಂದವು, ವಿಶೇಷಣವೆಂಬ ವಿಶೇಷ್ಯವೆಂಬ ಸಂಬಂಧದಲ್ಲಿ, ಮುಖ್ಯತ್ವವು ಉಪಸರ್ಜನತ್ವವು ಬಂದುದು, ಹಾಲು ಮೊಸರುಯೆಂಬಲ್ಲಿ ಪರಿಣಾಮತ್ವದೋಷಬಂತು, ಅಂಶಾಂಶಿಕತ್ವದೊಳಗೆ ಹೆಚ್ಚುಕಡಿಮೆಯೆಂಬ ದೋಷಬಂತು, ಬಿಂಬ ಪ್ರತಿಬಿಂಬವಾದದಲ್ಲಿ ಭಿನ್ನದೇಶಸ್ಥತತ್ವಯೆಂಬ ಹೇತುವಿನಿಂದ ಪ್ರಕಾಶಮಾಡುವದೊಂದು, ಪ್ರಕಾಶಮಾಡಿಸಿಕೊಂಬುವದೊಂದುಯೆಂಬ ದೋಷಬಂತು. ಈ ದೋಷಂಗಳಂನ್ನು ಕಳೆದುಬಿಡಲಾಗಿ, ಆಚಾರ್ಯಸ್ವಾಮಿಗಳವರು; (ಸಂಸರ್ಗೋವ ವಿಶಿಷ್ಟೋವ ವಾಕ್ಯಾ

ರ್ಥೋ ನಾತ್ರಸಂಮ್ಮತಃ, ಅಖಂಡೈಕರಸತ್ವೇನವಾಕ್ಯಾರ್ಥೋವಿದುಷಾಂ ಮತಃ) ॥ಟೀ॥ ದ್ರವ್ಯಕ್ಕೆ ಯಿತರ ದ್ರವ್ಯದೊಡನೆ ಸಂಯೋಗವೇ ಸಂಸರ್ಗತ್ವವು. ವಿಶೇಷಣದಿಂದಕೂಡಿಕೊಂಡುಯಿರುವ ವಿಶೇಷತ್ವವೆ ವಿಶಿಷ್ಟತ್ವವು. ಈ ಬ್ರಹ್ಮವಿಷಯದಲ್ಲಿ, ಸಂಸರ್ಗ ವಿಶಿಷ್ಟವಾದ ವಾಕ್ಯಾರ್ಥವು ಸಮ್ಮತವಲ್ಲ. ಅದು ಯಾಕೆಅಂದರೆ, ಈ ಬ್ರಹ್ಮಸ್ವರೂಪದಲ್ಲಿ ಪದಾರ್ಥಾಂತರ ಸಂಬಂಧವು ವಿಶೇಷಣದೊಡನೆ ಕೂಡಿಕೊಂಡುಯಿರುವ ಸಂಬಂಧವು, ಇವುಯೆರಡು ಯಿಲ್ಲದ ದಶೆಯಿಂದ ಇನ್ನೇನುಅಂದರೆ, ಸರ್ಪವು ಅಖಂಡರಸ ಸ್ವರೂಪಮಾತ್ರವುಯೆಂಬ ವಾಕ್ಯಾರ್ಥವೆ, ಆತ್ಮಾನುಭವಿಗಳಾದ ವಿದ್ವಾಂಸರುಗಳ ಸಿದ್ಧಾಂತವು॥ ... ... ॥೧೧॥

ಮೂ॥ ವ॥ ಇಂತೆಂದರಾಗಿ॥ ॥ಟೀ॥ ಹೀಗೆಹೇಳಿದರಾದಕಾರಣ॥೧೨॥

ಮೂ॥ ವ॥ ಸಮಾನವಿಭಕ್ತಿಕವಾದ ಪದಂಗಳಿಗೆ ಶಾಬ್ದಿಕರೈಕ್ಯಮಂ ಸಂಪಾದಿಸಿದರು॥ ॥ಟೀ॥ ಶಬ್ದಶಾಸ್ತ್ರಜ್ಞರು, ಸಮಾನ ವಚನಗಳಾದ ಪದಗಳಿಗೆ, ಏಕತ್ವವನ್ನು ಹೇಳಿದರು, ಹೀಗೆ ಏಕತ್ವ ಸಂಪಾದಿಸಿದಾಗ್ಯೂ, ಏಕ ವಿಭಕ್ತಿಗಳಾದ ಪದಗಳಿಗೆ, ಐಕ್ಯ ಬಾರದಹಾಗೆ, ಜೀವೇಶ್ವರರಿಗೆ ಭೇದವು ಸಿದ್ಧವಾಗುವದೆಂದು, ಹೇಳುವ ಶಾಬ್ದಿಕಪಕ್ಷವನ್ನು ಶಾಬ್ದಿಕ ಪಕ್ಷದಲ್ಲಿ ಯಿರುವದನ್ನು ಪರಿಹರಿಸಿ॥ ... ॥೧೩॥

ಮೂ॥ ವ॥ ಗುಣದ್ರವ್ಯಂಗಳಿಗೈಕ್ಯಮಂ ವೈಶೇಷಿಕರಂಗೀಕರಿಸಿದರು॥ ॥ಟೀ॥ ಗುಣಕ್ಕು ದ್ರವ್ಯಕ್ಕು ತಾರ್ಕಿಕರು ಏಕತ್ವ ಸಂಪಾದಿಸಿದರು. ಗುಣದ್ರವ್ಯಂಗಳಿಗೆ ಸ್ವರೂಪೈಕ್ಯವಿದ್ದರುಯಿರಲಿ, ದ್ರವ್ಯಕ್ಕೆ ಯಿತರವಾದ ಸ್ಥಲಗಳಲ್ಲಿ, ಗುಣಕ್ಕೆ ವ್ಯಾಪಕತ್ವ ವುಂಟಾದಹಾಗೆ, ಈಶ್ವರಾನ್ಯ ಸ್ಥಲದಲ್ಲಿ ಜೀವನಿಗೆ ಯಿರೋಣ ವುಂಟಾಗುವದುಯೆಂದು, ಜೀವೇಶ್ವರರಿಗೆ ಭೇದವನ್ನು ಸಂಪಾದಿಸಿದ ತಾರ್ಕಿಕಪಕ್ಷವನ್ನು, ತಾರ್ಕಿಕ ಪಕ್ಷಪಾತಿಗಳನ್ನು ಪೂರ್ವಪಕ್ಷಮಾಡಿ, ಆಚಾರ್ಯಸ್ವಾಮಿಗಳವರು, ಮಾಯಾವಿದ್ಯಗಳೆಂಬ ಉಪಾಧಿಗಳನ್ನು ಇಲ್ಲವೆಂದು ಖಂಡಿಸಿ, ಚಿನ್ಮಾತ್ರಸ್ವರೂಪವೆ ಏಕಸ್ವರೂಪವೆಂದು, ಸಿದ್ಧಾಂತವನ್ನು ಮಾಡಿದರು. ಚಿನ್ಮಾತ್ರಸ್ವರೂಪನಾನೆಂಬರ್ಥ ನಿನಗೆ ಯಾವಾಗ ಅನುಭವಕ್ಕೆ ಬರ್ಪುದೋ ಅ

ವಾಗ ನಾನು ಜೀವನೆಂಬ ಭ್ರಾಂತಿಹೋಗಿ, ಜೀವನ್ಮುಕ್ತನಾಗುತ್ತಿದ್ದೀಯೆ॥ ... ... ... ॥೧೪॥

ಮೂ॥ ವ॥ ಅದೆಂತು॥ ॥ಟೀ॥ ಅದು ಹ್ಯಾಗೆಯೆಂದು ಕೇಳಿದರೆ॥೧೫॥

ಮೂ॥ ವ॥ ಆವರೆಕೇಳು॥ ॥ಟೀ॥ ಹಾಗದರೆ ಕೇಳತಕ್ಕದ್ದು. (ಪರೋಕ್ಷಬ್ರಹ್ಮವಿಜ್ಞಾನಂ ಶಬ್ದಂದೇಶಿಕಪೂರ್ವಕಂ। ಬುದ್ಧಿಪೂರ್ವಕೃತಂ ಪಾಪಂ ಕೃತ್ಸ್ನಂದಹತಿವಹ್ನಿವತ್) ॥ಟೀ॥ ಸ್ವರ್ಗದರ್ಪಣಾದಿಯಲ್ಲಿ, ಶುದ್ಧ ಬುದ್ಧ ಸಚ್ಚಿದಾನಂದ ಸ್ವರೂಪವಾದ, ಬ್ರಹ್ಮ ಒಂದುಉಂಟು ಯೆಂಬದಾಗಿ, ಶ್ರೀಗುರುಗಳುಹೇಳಿದ ಶಬ್ಧದಿಂದ ನಿಶ್ಚೈಸಿದಂಥಾ ಪುರುಷನ ಜ್ಞಾನವು, ಅವನಬುದ್ಧಿಪೂರ್ವಕದಿಂದ ಮಾಡಿದ ಸಕಲ ಪಾಪವನ್ನು, ಅಗ್ನಿಹೋತ್ರನಹಾಗೆ ದಹಿಸಿಬಿಡುತ್ತಲಿಧೆ॥ (ಪ್ರತ್ಯಕ್ಷಬ್ರಹ್ಮವಿಜ್ಞಾನಂ ಶಬ್ಧಂದೇಶಿಕಪೂರ್ವಕಂ, ಸಂಸಾರಕಾರಣಜ್ಞಾನ ತಮಸಶ್ಚಂಡಭಾಸ್ಕರಂ॥)

॥ಟೀ॥ ಹಿಂದೆಹೇಳಿದ ಪರೋಕ್ಷಬ್ರಹ್ಮಜ್ಞಾನಂಯಾವದೋ, ಅಂಥಾಬ್ರಹ್ಮಸ್ವರೂಪವಾದಜ್ಞಾನವು,ನೀನೆಯೆಂದು ಪ್ರತ್ಯಕ್ಷಮಾಡಿಕೊಟ್ಟ ಶ್ರೀಗುರುವಿನ ಶಬ್ಧಪೂರ್ವಕವಾಗಿ, ಅನುಭವಕ್ಕೆ ಬಂದಂಥಾ ಜ್ಞಾನವು ಜನನಮರಣರೂಪ ಸಂಶೃತಿಗೆ ಕಾರಣವಾದ, ಅಜ್ಞಾನವೆಂಬ ಕತ್ತಲೆಗೆ ಚೈತ್ರಮಾಸದಲ್ಲಿಯಿರುವ ಆತ್ಯಾಂತ ತೀಕ್ಷಣಉಂಟಾದ ಸೂರ್ಯನು, ಫಲಿತಾರ್ಥವೇನಾಯಿತೆಂದರೆ, ಪ್ರತ್ಯಕ್ಷವಾಗಿ ತನಗೆ ಅನುಭವಕ್ಕೆ ಬಂದಂಥಾ ಜ್ಞಾನಸ್ವರೂಪನು, ಚನ್ನಾಗಿ ಅನುಭವಕ್ಕೆಬಂದರೆ ಪುನಹಾ ಹುಟ್ಟು ಸಾವು ಯಿಲ್ಲದ ಸ್ವರೂಪನಾಗುವನೆಯಂಬುದರ್ಥ॥ ... ॥೧೬॥

ಮೂ॥ ವ॥ ಇಂತೆಂದು ವಿದ್ಯಾರಣ್ಯ ಮುನೀಂದ್ರ ವಚನಮಿರ್ಪುದಾಗಿ, ಈ ಅರ್ಥದಲ್ಲಿ ಸಂದೇಹವಿಲ್ಲವೆಂದು ಶಬ್ದಪ್ರಮಾಣ ಪದ್ಧತಿಯಂ ಸಿದ್ಧವತ್ಕರಿಸಿ, ಅನ್ಯೊಂದುಪ್ರಕಾರವಂ ಪೇಳುತ್ತರ್ದಪನದೆಂತೆನೆ॥

॥ಟೀ॥ ಹೀಗೆಂದು ವಿದ್ಯಾರಣ್ಯಸ್ವಾಮಿಗಳು ಹೇಳಿದ ವಚನ ಯಿದ್ದದ್ದರಿಂದ, ಈ ಅರ್ಥದಲ್ಲಿ ಸಂಶಯ ಕಲಸವಿಲ್ಲವೆಂದು, ಶಬ್ಧಪ್ರಮಾಣ ಮಾರ್ಗವನ್ನು ಸಿದ್ಧಮಾಡಿ, ಅನ್ಯೊಂದು ರೀತಿಯಾಗಿ ಹೇಳುತ್ತಿದ್ದಾನೆ,

ಅದು ಹ್ಯಾಗೆಅಂದರೆ॥ ... ...

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕ
ವಿಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣ
ಪ್ರಭು ವಿರಚಿತವಾದ ನಿಜದೀಪಿಕಾ
ರತ್ನಾಖ್ಯಗ್ರಂಥದಲ್ಲಿಪದ್ಧತಿ೨೦ಕ್ಕಂ
ಶಬ್ದಪ್ರಮಾಣ ಲಕ್ಷಣಂ
ಸಂಪೂರ್ಣಂ.

(ಇತಿ ಪದ್ಧತಿ ೨೦ ಶಬ್ದಪ್ರಮಾಣ ಲಕ್ಷಣಂ ಪೇಳಿದಿಲ್ಲಿಗೆ ಮಂಗಳಂ)

---

## ೨೧ ಅರ್ಥಾಪತ್ತಿ ಪ್ರಮಾಣ ಪದ್ಧತಿ ಪ್ರಾರಂಭವು.

---

ಮೂ॥ ಚಂಪೆ॥ ಕರ್ತೃತ್ವಭೋಕ್ತೃತ್ವಗಳಿಗೆದೂರನುವಿಶ್ವ । ಭರ್ತೃತ್ವಧಾತೃತ್ವಪದವಿಹೀನಂ॥ ॥ಟೀ॥ ಕಾರ್ಯಗಳ ಮಾಡೋಣ ಯೆಂಬುವದಕ್ಕೆಯು, ತತ್ಫಲವನ್ನ ಅನುಭವಿಸೋಣವೆಂಬುವದಕ್ಕೆಯೂ ಯೆರಡು ಕೃತ್ಯಗಳಿಗು ದೂರವಾಗಿರುವಂಥಾವನು,ಈ ಪ್ರಪಂಚ ಧರಿಸುವಂಥಾ ಧರ್ಮವೆಂಬ, ಈ ಪ್ರಪಂಚ ಮಾಡುವಂಥಾಧರ್ಮವೆಂಬ, ಈ ಯೆರಡು ಮಾರ್ಗಗಳಿಲ್ಲದಂಥಾವನು॥ ॥೧॥

ಪ್ರಾಣವಿರಹಿತಮನೋಭಾವವಿರಹಿತಗುಣ । ಶ್ರೇಣಿವಿರಹಿತತಾನುಶ್ರೇಯೊವಿರಹಿತನು॥ ॥ಟೀ॥ ಪ್ರಾಣಾದಿವಾಯುಗಳು ಯಿಲ್ಲದಂಥಾವನು, ಮನೋಬುದ್ಧಿ ಚಿತ್ತ ಹಾಂಕಾರಗಳ ಭಾವ ವಿಲ್ಲದಂಥಾವನು, ಸತ್ವರಜಸ್ತಮೋಗುಣಗಳ ಸಮುದಾಯವಿಲ್ಲದಂಥಾವನು, ಸ್ಥೂಲಶರೀರ, ಸೂ

ಷ್ಮ ಶರೀರಗಳ ವೃದ್ಧಿ ಯಿಲ್ಲದಂಥಾವನು॥ ... ॥೨॥

ಕರ್ಮಮಾರ್ಗಮವೇದ್ಯ ಕಾಲಚಕ್ರಮಭೇದ್ಯ। ಧರ್ಮಮಾರ್ಗಮವೇದ್ಯಧಾತುಭಿದವೇದ್ಯಾ॥ ॥ಟೀ॥ (ಶ್ರುತಿ ನಕರ್ಮಣಾನಪ್ರಜಯಾಧನೇನಂ)ಯೆಂಬ ಶ್ರುತ್ಯಾರ್ಥವನ್ನು ಹಿಡಿದು ಹೇಳುತ್ತಾನೆ. ನಿತ್ಯನೈಮಿತ್ತಿಕಾದಿ ಕರ್ಮಗಳ ಮಾಡಿದ್ದರಿಂದ ತಿಳಿಯತಕ್ಕಂಥಾವನಲ್ಲ. ಸಕಲವಾದಂಥಾ ಧರ್ಮಗಳಮಾಡಿದಾಗ್ಯೂ ತಿಳಿಯಲ್ಪಡುವನಲ್ಲ, ಈ ಸಪ್ತ ಧಾತುಗಳನ್ನು ಬಿಡಿಸಿ ನೋಡುವದರಿಂದ ತಿಳಿಯತಕ್ಕವನಲ್ಲ॥ .. ॥೩॥

ನಿರ್ಗುಣನಿರಾವರಣನಿರ್ಮಲನಿರಾಭಾಸ, ಭರ್ಗನನೆಮಾಯ್ಯನಿರವದ್ಯಂ ಅಭೇದ್ಯಾ॥ ॥ಟೀ॥ ಸತ್ವಾದಿ ಗುಣಂಗಳಿಲ್ಲದಂಥಾವನು. ಮಾಯಾವರಣವಿಲ್ಲದಂಥಾವನು. ಮಾಯಾಮಲ, ಆಣ್ವೀಕಮಲ, ಕಾರ್ಮಿಕಮಲವೆಂಬ ಮೂರುಮಲಂಗಳಿಲ್ಲದವನು. ಹೋಗಾಡಿಸಲ್ಪಟ್ಟ ಜೀವೇಶ್ವರ ಪ್ರತಿಬಿಂಬ ವಿಲ್ಲದವನು. ತೇಜೋರೂಪವಾದವನು. ನಾಶವಿಲ್ಲದವನು. ಅವಿದ್ಯಾದೋಷವಿಲ್ಲದವನು. ಛೇದಿಸಲ್ಪಡದೆಯಿರುವವನು॥ ॥೪॥

ನಿಷ್ಕಲನಿರಾಕ್ಷೇಪನಿರ್ಭರನಿರಾಕಾರ। ಪ್ರಪಷ್ಕಲಪುರಾಣತಮಪುರುಷಪುರುಹೂತಾ॥ ॥ಟೀ॥ ಕಳೆಯೆಂಬ ಹೆಸರಿನಿಂದ ಕರಸಿಕೊಳ್ಳದೆ ಯಿರುವಂಥಾವನು. ಮತಾಂತರಸ್ಥರ ಅಕ್ಷೇಪಕ್ಕೆ ಶಿಕ್ಕದೆ ಯಿರುವಂಥಾವನು. ಪ್ರಪಂಚದ ಭಾರವಿಲ್ಲದೆ ಯಿರುವಂಥಾವನು. ಗುಣ, ಜಾತಿ, ನಾಮ, ಕ್ರಿಯಾರೂಪುಗಳಿಲ್ಲದಂಥಾವನು. ಪರಿಪೂರ್ಣವಾಗಿ ಯಿರುವಂಥಾವನು. ಅನಾದಿಯಾಗಿ ಶ್ರೇಷ್ಠನಾಗಿ ಯಿರುವಂಥಾ ಪುರುಷನಾದವನು. ಶರೀರವೆಂಬ ಪುರದಿಂದ ಕರೆಯಲ್ಪಟ್ಟವನು॥ ... ॥೫॥

ಮೂ॥ ವ॥ ಯಾವನಿಂತೆಣಿಸಲ್ಪಡುವನಾವಸ್ತುವೆ॥ ॥ಟೀ॥ ಯಾವ ಬ್ರಹ್ಮಸ್ವರೂಪವು, ಪೂರ್ವೋಕ್ತವಾದ ಶಬ್ದಂಗಳಿಂದ ಯೆಣಿಸಲ್ಪಡುತ್ತಾಯಿಧ್ಧಾನೊ, ಆ ಸಚ್ಚಿದಾನಂದವಸ್ತುವೆ॥ ...

ಮೂ॥ ಏಕತಾಳ॥ ನಿರ್ಗುಣವಾದರುನಿಜದಿಪ್ರಪಂಚದ। ಸರ್ಗದಿಂ

ದಿದಪುಟ್ಟಿಸಲುಯೋಗ್ಯಮಾದ॥ ॥ಟೀ॥ ಶಬ್ದಾದಿಗುಣಗಳಿಲ್ಲದೆ ಯಿರು ವಂಥಾದ್ದು, ಆದಾಗ್ಯು ಆ ವಸ್ತುವು ಯಥಾರ್ಥಸ್ವರೂಪದಿಂದ, ನಿಮಿತ್ತ ಕಾರಣ, ಉಪಾದಾನ ಕಾರಣಗಳು ತಾನೆ ಆಗಿ, ಪ್ರಪಂಚದ ಉತ್ಪತ್ತಿ ಯಿಂದ, ಯಿದರನ್ನ ಹುಟ್ಟಿಸುವದಕ್ಕೆ ಯೋಗ್ಯವಾಗಿ ಯಿರುವಂಥಾ।೧॥

ಧರಿಸಲುಮುಪಸಂಹರಿಸಲುಂಪಾತ್ರಮಾಗಿರುವಶಕ್ತಿಗದುವೆಯಿರವೆಂ ತೆಂದು॥ ॥ಟೀ॥ ಈ ಪ್ರಪಂಚವನ್ನ ಧರಿಸಿಕೊಂಡು ಯಿರುವದಕ್ಕು, ಯಿದನ್ನ ಸಂಹಾರಮಾಡುವದಕ್ಕು, ಪಾತ್ರವಾಗಿರುವಂಥಾ ಯಾವಜ್ಞಾನಶ ಕ್ತಿಯುಂಟೊ, ಅಂಥಾ, ತನ್ನ ಜ್ಞಾನಶಕ್ತಿಗೆ ಪೂರ್ವ ಹೇಳಿದ ಸನ್ಮಾತ್ರ ಬ್ರಹ್ಮ, ಅದರ ಭೂತಸ್ಥಾನವು ಹ್ಯಾಗೆಯೆಂದು॥ ... ॥೨॥

ಬಗೆವುದುಮತ್ತಮಪರಮಶಕ್ತಿಗದಕ್ಕೆ । ಆಗಲಿಕೆಯೆಂದಿಗುಮಾಗದೆಂ ದಿತ್ತ॥ ॥ಟೀ॥ ತಿಳಿದುಕೊಂಬುವದು, ಯೇನೆಂದು ತಿಳಿದುಕೊಳ್ಳುವ ದುಅಂದರೆ, ಮತ್ತು ಉತ್ಕೃಷ್ಟ ಚಿಚ್ಛಕ್ತಿಗು, ಸನ್ಮಾತ್ರ ವಸ್ತುವಿಗು ಬಿ ಡುಗಡೆ ಯಾವಾಗ್ಯು ಆಗದು ಈ ಪ್ರಪಂಚದಲ್ಲಿ॥ ... ॥೩॥

ತೋರಿದಭೂತವಿಕಾರದಿಪಧ್ಯವ।ಸಾರವಾದವಿಭಿನ್ನ ಶಕ್ತಿಮೂಲಕದಿ॥ ॥ಟೀ॥ ಕಾಣುತ್ತಿರುವ ಭೂತಗಳ ವಿಕಾರದ ಪ್ರಭುತ್ವಸ್ಥಿರಾಂ ಶವಾದಂಥಾ ಆತ್ಮನಲ್ಲಿ ಭೇದವಾಗದೆ ಯಿರುವಂಥಾ ಚಿಚ್ಛಕ್ತಿಮೂದಲಿ ನಿಂದಲೆ॥ ... ... ... ॥೪॥

ಯೋಚಿಸಿದೋಷವಯೋಗವಿಲ್ಲೆಂದರದ। ಕಾಚರಿಸಲುನಾನೆಂದೀಚರಾ ಚರದಿ॥ ॥ಟೀ॥ ಹೀಗೆಂದು ಆಲೋಚನೆಮಾಡಿ, ಆ ಸಾಮರ್ಥ್ಯಕ್ಕೆಮಾ ಯಾದೋಷಶಬಲತ್ವವಿಲ್ಲವೆಂದು ತಿಳಿದುಕೊಂಡು, ಈ ಚರಾಚರವಾದ ಜಗತ್ತು ತತ್ಸ್ವರೂಪವೆ, ಅದೇ ನಾನುಯೆಂದುತಿಳಿದರೆ॥ ॥೫॥

ಮೂ॥ ವ॥ ಆಗಲೇ ಜೀವನ್ಮುಕ್ತನಾಗುವೆಯೆಂದರ್ಥಾಪತ್ತಿಪ್ರಮಾ ಣಪದ್ಧತಿಯಂ ಹೃದ್ಯಂಗೈದು, ಇನಿತೊಂದುಪ್ರಕಾರಮಂ ಪೇಳುತ್ತಿರ್ದ ಪನದಂತೆನೆ॥ ॥ಟೀ॥ ಹೀಗೆಂದು ಯಾವಾಗ ತಿಳಿದೆಯೊ, ಆಗಲೇ ಜೀ ವನ್ಮುಕ್ತನು ಆಗುತ್ತಲಿದ್ದೀಯೆ, ಯೆಂದು ಅರ್ಥಾಪತ್ತಿ ಪ್ರಮಾಣಮಾ ರ್ಗವನ್ನು, ಮನೋಹರವಾಗಿಹೇಳಿ, ಇನ್ನೊಂದುರೀತಿಯಾಗಿ ಹೇಳುತ್ತ

ಶಿದ್ಧಾನೆ, ಅದು ಹ್ಯಾಗೆಅಂದರೆ॥　...　...

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕವಿ
ಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣಪ್ರಭು
ವಿರಚಿತವಾದ ನಿಜದೀಪಿಕಾ ರತ್ನಗ್ರಂಥದಲ್ಲಿ
ಪದ್ಧತಿ ೨೧ ಕ್ಕಂ ಅರ್ಥಾಪತ್ತಿ ಲಕ್ಷಣಂ
ಸಂಪೂರ್ಣಂ॥

(ಇತಿಪದ್ಧತಿ ೨೧ ಅರ್ಥಾಪತ್ತಿಲಕ್ಷಣ ಪೇಳಿದಿಲ್ಲಿಗೆ ಮಂಗಳಂ.)

---

## ೨೨ ಅಭಾವ ಪ್ರಮಾಣ ಪದ್ಧತಿ ಪ್ರಾರಂಭವು.

---

ಮ ೫॥ ತ್ರಿಪುಡೆ॥ ಆವುದಾನೊಂದಾದದೇಹವನಧಿಕರಿಸಿವಿಷಯೇಂದ್ರಿಯಗಳಿಂ । ದಾವಬಳಿಯಲಾವಸ್ಥಾಭಾವದಲ್ಲಿ॥ ॥ಟೀ॥ ನರಸುರಭುಜಂಗಾದಿ ದೇಹಗಳೊಳಗೆ, ಯಾವದಾದರು ಒಂದು ದೇಹವನ್ನು ಹೊಂದಿ ಇಂದ್ರಿಯಂಗಳಿಂದಲು, ಈ ಇಂದ್ರಿಯಗಳ ವಿಷಯಗಳಿಂದಲು, ಯಾವಸ್ಥಳದಲ್ಲಾದರು, ಜಾಗ್ರಸ್ವಪ್ನ ಸುಷುಪ್ತಿಗಳೆಂಬ ಅವಸ್ಥೆಗಳ ಭಾವದಲ್ಲಿ ಆದರು॥　...　...　...　॥೧॥

ತೋರಿಮರೆಯಾಗುತ್ತಿರುವಸಂಹಾರವ್ಯೆದುವವಸ್ತುಸಂಘಾ। ಚಾರದಿಂ ಮುಂದಿರ್ಪಭವನದವಾರದಲ್ಲಿ॥ ॥ಟೀ॥ ಕಾಣಿಸಿಕೊಂಡು ತಿರಿಗಿನೋಡಿದರೆ ಯಿಲ್ಲದೆ ಹೋಗುವಂಥಾ ಪದಾರ್ಥಗಳ ಸಮೂಹದ ಆಚರಣೆಯಿಂದ, ಮುಂದೆ ಕಾಣುತ್ತಲಿರುವ ಲೋಕಗಳ ಸಮೂಹದಲ್ಲಿ॥　॥೨॥

ಮೊದಲಹಾಗಿರದೆಂಬನಿಶ್ಚಯ । ಮುಂಕನಸಿನಂತಿರ್ಪತೋರ್ಕೆಯ।ಪದವಿಮಾಯಿಕರೀತಿಯುಂಸಂಪಾದಿಸುವದು॥ ॥ಟೀ॥ ಪ್ರಥಮದಲ್ಲಿನೋಡಿದಹಾಗೆ ಯಿರಲಿಲ್ಲವೆಂಬ ನಿಜತ್ವವನ್ನು, ಸ್ವಪ್ನದಹಾಗೆ ಯಿರುವಂಥಾ

ಮಾರ್ಗವನ್ನು, ಮಾಯಾಸಂಬಂಧವಾದ ಪ್ರಕಾರವನ್ನು ಸಂಪಾದನೆ ಮಾಡುತ್ತಲಿರುತ್ತಲಿಧೆ॥ ... ... ॥೩॥

ಯಿಲ್ಲವೆಂಬುದನಿರ್ದಕಾಲದೊಳಿರ್ದುದೇನಿದರಳಿವಿನಲಿತಾ।ನಿಲ್ಲವೆನಿಸದುದಾವುದದುಮಿತಿನಿಲುವುದೆಂತು॥ ॥ಟೀ॥ ಈ ಅಜ್ಞಾನಜನ್ಯವಾದ ಜಗತ್ತು ಯಿಲ್ಲದಕಾಲದಲ್ಲಿ, ಯಿದ್ದಂಥಾ ವಸ್ತುವೆ ಈ ಪ್ರಪಂಚದ ನಾಶಕಾಲದಲ್ಲಿ, ತಾನಿಲ್ಲವೆನಿಸದೆ ಯಿರುವಂಥಾ ಪದಾರ್ಥವು ನಿಜವಾಗಿ ಹ್ಯಾಗೆ ನಿಲ್ಲುವದುಯೆಂದು ಶಂಕೆಬರಲಾಗಿ ॥ ... ॥೪॥

ಆದರೊಳೆನೆಯಾವಸ್ತು ಉಂಟಾದದರದೆಸೆಯಿಂಮರಳಿಭವನ।ಕ್ಕಾದಯುಮಾದುದಿದಿರ್ದಕಾಲದೊಳುಂಟೆನಿಸಿಯೆ ॥ ॥ ಟೀ ॥ ಆ ನಾಶವಾದ ಮಾಯಾಪ್ರಪಂಚದಕೂಡೆ, ತಾನು ಲಯವಾಗದೆ, ತಾನಿದ್ದದ್ದರಿಂದ, ತಿರಿಗಿ ಚತುರ್ದಶಭುವನಗಳಿಗು ಆವಿರ್ಭಾವ ಮುಂಟಾಯಿತು. ಈ ಮಾಯಾಕಾರ್‍ಯಯಿರುವಕಾಲದಲ್ಲಿಯೂ, ಯಿದೇಯೆನಿಸಿಕೊಂಡುಸತ್ತಾಗಿಇಧೆ॥

ಮರದುದದುಮೇಣಿಲ್ಲಿಪ್ಪೋಗುವ।ದೆರಡೆನಾಮವುರೂಪವದರೊಳ।ಗಿರುವಸಚ್ಚಿತ್ಸುಖಗಳೆಂದಿನಪರಿಯೊಳಿಹುದು॥ ॥ಟೀ॥ ಉಂಟೆನಿಸಿಕೊಂಡೇಪ್ರಕಾಶಿಸಿಕೊಂಡುಯಿಧೆ, ಹಾಗಾದರೆ ಮತ್ತೆ ಈ ಮಾಯಾಜನ್ಯವಾದ ಲೋಕಗಳಲ್ಲಿ, ಹೋಗುವವು ಯಾವ್ಯಾವುಯಂದರೆ, ನಾಮರೂಪುಗಳು ಯರಡೆ; ಆನಾಮರೂಪುಗಳೊಳಗೆಯಿರುವ, ಸತ್ತು, ಚಿತ್ತು, ಆನಂದಸ್ವರೂಪನಾದ ಪರಬ್ರಹ್ಮವು. ಮಾಯಾಕಾರ್‍ಯ ವಿಲ್ಲದಾಗಲು ಮಾಯಾಕಾರ್‍ಯಗಳು ಯಿರುವಾಗಲು, ಮಾಯಾಕಾರ್‍ಯ ನಾಶವಾಗಲು, ಯಂಬ ಕಾಲತ್ರಯದಲ್ಲಿಯು ಮೊದಲು ಯಿದ್ದಹಾಗೆ ಯಿರುತ್ತಲಿಧೆ ॥ ॥೬॥

ತಂತುಮಿಲ್ಲದೊಡೆಂತುಪಟಸಂತಾನಮಪ್ಪುದುವಸ್ತುವಿಲ್ಲದೊ ।ಡಿಂತುತೋರ್ಪುದೆತತ್ವರಾವರಮಂತಿಳಿವುದು॥ ॥ಟೀ॥ ನೂಲುಯಿಲ್ಲದಯಿದ್ದರೆ ಬಟ್ಟೆಗಳ ಸಮೂಹವು ಹ್ಯಾಗೆ ಆದೀತು. ಸಚ್ಚಿದಾನಂದ ರೂಪವಸ್ತುವಿಲ್ಲದೆಹೋದರೆ ಈ ಪ್ರಪಂಚ ಹ್ಯಾಗೆ ತೋರೀತು. ಈ ಪ್ರಪಂ

ಚೆರೂಪವಾಗಿ ತೋರುವದು ಸಚ್ಚಿದಾನಂದವಸ್ತುವೆ ಹೊರ್ತು ಇ ನ್ನೊಂದಲ್ಲ॥ ... ... ... ॥೭॥

ಮುಗಿಲವಟ್ಟಿಗೆಯಲ್ಲಿಯೆಡದೆರಹಿಂಗೆವಿಷಯಮಿಲ್ಲದಶಶಾಂಕರು। ಚಿಗಳು ತೋರದಿರಲ್ಕೆವಸ್ತುವಿಶೇಷದಿಂದಾ॥ ॥ಟೀ॥ ಅಂತರಕ್ಷದಲ್ಲಿ ಯೆಡದೆರೆ ಪಿಗೆ ಸ್ಥಳವಿಲ್ಲದೆಯಿರುವ ಚಂದ್ರಕಿರಣಗಳು ಕಾಣುವದಿಲ್ಲವಾದ್ದರಿಂದ, ಗೋಡೆಗಳುಭೂಮಿಯು, ಇವು ಮೊದಲಾದ ವಸ್ತುಗಳ ವಿಶೇಷದಿಂದ॥೮॥

ತೋರಲೇನುಂಟಾಯಿತೇತಾಂತುರಗದಿತ್ತೀಮೊದಲಿವರವ್ಯೆ। ಕಾರಿಕವ ಪಡದಾಗದೋಷದಿಕಲಿಲಮಾಯ್ತು॥ ॥ಟೀ॥ ಕಂಡದ್ದರಿಂದ ಉಂಟಾ ಯಿತೆ, ತಾನುಯಿಲ್ಲದೆಯಿತ್ತೆ ಪ್ರಥಮದಲ್ಲಿ, ತಾನುಯೆಲ್ಲೆಲ್ಲಿ ಕಾಣಿಸಿಕೊಂ ಡಿತೋ, ಆಯಾಪದಾರ್ಧದೋಷಗಳಿಂದ ಕಲ್ಮಷಉಂಟಾದ್ದಾಯಿತೆ ॥೯॥

ಹ್ಯಾಗೆಚಂದ್ರಿಕೆಗಿಲ್ಲವೋಸಂಯೋಗಸಂಭವವಮಾದಕಲ್ಪನೆ। ಯಾಗು ಹೋಗೀಬ್ರಸ್ಮತತ್ವದೊಳನುಪಮದಲಿ॥ ॥ಟೀ॥ ಒಂದು ಪದಾರ್ಥದ ಸಂಬಂಧದಿಂದ ಹುಟ್ಟಿದ ಕಲ್ಪನೆ ಹ್ಯಾಗೆಯಿಲ್ಲವೊ, ಉಪಮಾನರಹಿತವಾ ದಂಥಾ ಈ ಸನ್ಮಾತ್ರವಾದ ಬ್ರಹ್ಮಸ್ವರೂಪದಲ್ಲಿ ಆಗುವದು ಹೋಗು ವದುಯಿಲ್ಲ॥ ... ... ... ॥೧೦॥

ಸುಖಮಯದಲಿನಿರಂಜನದಲಿವಿಶುದ್ಧದಲಿಯುಂದರಿದುನೀನಾ। ಮುಖ ವನಾರಲುಮುಕ್ತನಾಗುವೆಮೋಹದಿಂದಾ॥ ॥ಟೀ॥ ಸುಖಸ್ವರೂಪದ ಲ್ಲಿ, ಕಪ್ಪಿಲ್ಲದೆ ಯಿರುವದರಲ್ಲಿ, ನಿರ್ಮಲವಾದುದರಲ್ಲಿ, ಈ ದೋಷಗಳು ಯಿಲ್ಲವೆಂದು ತಿಳಿದು ಯೆಲೈ ಮನಃಪ್ರಭುವೆ, ನೀನು ಅಂಥಾ ಬ್ರಹ್ಮಕ್ಕೆ ಅಭಿಮುಖನಾದರೆ, ಮಾಯಾ ಕಲ್ಪಿತಮಾದ ಮೋಹಭ್ರಾಂತಿಯಿಂದ ಬಿಡ ಲ್ಪಡುತ್ತಿದ್ಧೀಯೆ॥ ... ... ... ॥೧೧॥

ಮೂ॥ ವ॥ ಇಂತೆಂದ ಭಾವಪ್ರಮಾಣ ಪದ್ಧತಿಯಂ ಸ್ವಭಾವದೊ ಡನೆ ಸಂಬಂಧಿಸಿ, ಇನ್ನೊಂದು ಪ್ರಕಾರಮಂ ಪೇಳುತಿರ್ದಪನದಂತೆನೆ॥

॥ಟೀ॥ ಹೀಗೆಂದು ಅಭಾವ ಪ್ರಮಾಣ ಮಾರ್ಗವನ್ನು, ಆತ್ಮಸ್ವಭಾ ವದೊಡನೆ ಕೂಡಿಸಿ, ಇನ್ನೊಂದು ರೀತಿಯಾಗಿ ಹೇಳುತ್ತಿದ್ದಾನೆ, ಅದು

ಹ್ಯಾಗೆ ಅಂದರೆ.

ಗದ್ಯ|| ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕ ವಿ
ಚಾರ ಪಾರೀಣರಾದ ಶಾಲ್ಯಕ್ಷಿತಿಪಾಲ
ಕೃಷ್ಣಪ್ರಭು ವಿರಚಿತವಾದ ನಿಜ
ದೀಪಿಕಾರತ್ನ ಗ್ರಂಥದಲ್ಲಿಪದ್ಧತಿ
೨೨ ಕ್ಕಂ ಅಭಾವಪ್ರಮಾಣ
ಲಕ್ಷಣಂ ಸಂಪೂರ್ಣಂ||

ಇತಿ ಪದ್ಧತಿ ೨೨ ಕ್ಕಂ ಅಭಾವಪ್ರಮಾಣಲಕ್ಷಣ ಪೇಳಿದಲ್ಲಿಗೆಮಂಗಳಂ.)

---*---

## ೨೩ ಐಯಿತೀಹ್ಯ ಪ್ರಮಾಣ ಪದ್ಧತಿ ಪ್ರಾರಂಭವು.

---*---*---

ಮೂಲ|| ಸಾಂಗತ್ಯ|| ಮೊದಲೀಶನಿಂದ ನಾರಾಯಣನಾತನಿಂ | ಪದುಮದ ಮಗನಾತನಿಂದ || ಮುದದಿಂ ಸನತ್ಕುಮಾರನು ವೇದಾಂತಾರ್ಥಸಂ | ಪದವನ್ನೈದಿದನಾತನಿಂದಾ ||ಟೀ|| ಮುಂದೆ ಈಶ್ವರನಿಂದ ನಾರಾಯಣನು, ಬ್ರಹ್ಮ ವಿದ್ಯೆಯನ್ನು ತಿಳಿದುಕೊಂಡನು. ಆನಾರಾಯಣನು ತನ್ನ ನಾಭೀಕಮಲದಲ್ಲಿ ಹುಟ್ಟಿದ ಚತುರ್ಮುಖಬ್ರಹ್ಮನಿಗೆ ಉಪದೇಶವನ್ನು ಮಾಡಿದನು. ಆ ಚತುರ್ಮುಖನೆಂಬ ಬ್ರಹ್ಮನಿಂದ ಸಂತೋಷದಿಂದ ಸನತ್ಕುಮಾರನು ಉಪನಿಷತ್ತುಗಳಲ್ಲಿ ಹೇಳಿಯಿರುವ ಅರ್ಥದ ಆಧಿಕ್ಯವನ್ನು ಹೊಂದಿದಂಥಾವನಾದನು. ಆ ಸನತ್ಕುಮಾರನಿಂದ. ... ... ||೧||

ಬಾದರಾಯಣನಾತನಿಂ ಶುಕನಾತನಿಂ | ಮೇದಿನಿಗವತರಿಸಿದುದು || ವೇದಾಂತವೆಂಬ ಪಾರಂಪರ್ಯವನ್ನೆನೀ| ನಾಧರಿಸ್ಯೆಯ್ದ್ಯಾ ಲೇಸಾಗಿ ||ಟೀ|| ಸನತ್ಕುಮಾರರಿಂದ ವ್ಯಾಸರು ವೇದಾಂತಾರ್ಥದ ಸಾಂಪ್ರದಾಯವನ್ನು ಅರಿತಂಥಾವರಾದರು. ಆ ವ್ಯಾಸರು ತನ್ನ ಮಗನಾದ ಶುಕಮುನಿಗೆ ಹೇ

ಳಿದಂಥಾವರಾದರು. ಆ ಶುಕಾಚಾರ್ಯರಿಂದ ಭೂಮಿಗೆ, ಈ ಬ್ರಹ್ಮವಿದ್ಯೆ ಆಳಿದಂಥಾದ್ದಾಯಿತು. ವೇದಾಂತ ವಿದ್ಯೆ ಪರಂಪರೆಯನ್ನು ನೀನು ಚಂನಾಗಿ ಆದರಣೆ ಮಾಡುವಂಥಾವನಾಗೈಯ್ಯ ... ||೨||

ಇದುವೆ ಬ್ರಾಹ್ಮಣವೆನಿಸುವದು ನಾರಾಯಣ | ವದನ ವ್ಯಾಪಾರದಿಂದರಿದಾ || ಅದಿತಿಯ ಮಕ್ಕಳೊಳ್ರವಿಯಾತನಿಂ ಮನು | ಹೃದಯ ಪ್ರವಿಷ್ಟವಾಯಿತು ||ಟೀ|| ಈಗ ಹೇಳಿದ್ದೇ ಬ್ರಹ್ಮಣವೆಂಬ ಗುರು ಸಾಂಪ್ರದಾಯವು. ಶ್ರೀಮಹಾ ವಿಷ್ಣುವಾದ ನಾರಾಯಣನ ಮುಖ ವಚನ ವ್ಯಾಪಾರಗಳಿಂದ ಅರಿತವನು ಅದಿತಿ ಪುತ್ರರಾದ ದೇವತೆಗಳೊಳಗೆ ಸೂರ್ಯನು. ಸೂರ್ಯನಿಂದ ವೈವಸ್ವತ ಮನುವೆಂಬವನ ಹೃದಯದಲ್ಲಿ ಈ ಬ್ರಹ್ಮವಿದ್ಯಾ ಪ್ರವೇಶವಾಯಿತು. ... ||೩||

ವೇದಾಂತ ವಿಜ್ಞಾನವಾತನಿಂದಿಕ್ಷ್ವಾಕು | ಸಾಧಿಸಿದನು ಬಳಿಕವನಿಂ || ಮೇದಿನಿ ಗೈದಿತ್ತಿದ ಕ್ಷಾತ್ರವೆನಿಪುದು | ಪಾಧಿಕ ಸಂಪ್ರದಾಯಕವೂ||

||ಟೀ|| ಉಪನಿಷತ್ತುಗಳಲ್ಲಿ ಹೇಳಿರುವಂಥಾ ವಿಜ್ಞಾನವ, ಆ ವೈವಸ್ವತ ಮನುವಿನಿಂದ ಇಕ್ಷ್ವಾಕು ಮಹಾರಾಯನು ಸಾಧಿಸಿ ಕೊಂಡಂಥಾವನಾದನು. ಆಮೇಲೆ ಇಕ್ಷ್ವಾಕು ಮಹಾರಾಯನಿಂದ ಭೂಮಿಯಲ್ಲಿ ವಿಸ್ತರಿಸಿತು. ಇದೇ ಕ್ಷತ್ರಿಯರಿಂದ ಹುಟ್ಟಿದ ಗುರು ಸಾಂಪ್ರದಾಯವು ||೪||

ಪಿಡಿಗಿಲ್ಲಿ ಪರಿನಿಷ್ಠಿತರ ಪಾದಪದ್ಮದೊ | ಳಿಡೆದೆರಪಿಲ್ಲದೆ ನಂಬಿ || ಪಡೆಯಲೀ ಸುಜ್ಞಾನ ಮುಕ್ತನಾಗುವೆ ಈ | ಯೊಡಲಿನ ಕಟ್ಟಿಂದ ತೊಲಗೀ||

||ಟೀ|| ಆ ಆತ್ಮಾನುಭವಿಗಳಾದಂಥಾವರುಗಳ ಪಾದ ಕಮಲಂಗಳ ಹಿಡಿದು, ಎಡೆದೆರಪಿಲ್ಲದೆ ಅವರನ್ನೇ ನಂಬಿಸುವಂಥಾ ಜ್ಞಾನಸ್ವರೂಪವಂನ ಹೊಂದಲು, ಈ ಅವಿದ್ಯಾ ಕಲ್ಪಿತವಾದ ಶರೀರದ ಬಂಧದಿಂದ ಬಿಡುಗಡೆ ಹೊಂದಿ ಮುಕ್ತನಾಗುತ್ತಲಿದ್ದೀಯೆ. ... ||೫||

ಮೂ|| ವ|| ಇಂತೆಂದೈತಿಹ್ಯ ಪ್ರಮಾಣ ಪದ್ಧತಿಯಂ ನೀತಿಯಿಂದ ಪ್ಪದಂತುಸುರಿ ಇನ್ನೊಂದುಪ್ರಕಾರಮಂ ಪೇಳುತಿರ್ದಪನದೆಂತೆನೆ||

||ಟೀ|| ಈ ರೀತಿಯಾಗಿ ಐತಿಹ್ಯ ಪ್ರಮಾಣ ಮಾರ್ಗವನ್ನು ನಿಯಮ ತಪ್ಪದ ಹಾಗೆ ಹೇಳಿ ಇನ್ನೊಂದು ಪ್ರಕಾರವಾಗಿ ಹೇಳುತ್ತಿದ್ದಾನೆ. ಅ

ದು ಹ್ಯಾಗೆ ಅಂದರೆ. ... ||೧||

ಗದ್ಯ|| ಇತಿ ಶ್ರೀಮತ್ಸಮಸ್ತ ತತ್ತ್ವ ತಾತ್ವಿಕ ವಿಚಾರ
ಪಾರೀಣಶಾಲ್ಯಕ್ಷಿತಿಪಾಲಕೃಷ್ಣ ಪ್ರಭುವಿರಚಿ
ತವಾದ ನಿಜದೀಪಿಕಾ ರತ್ನಗ್ರಂಥದೋಳ್
೨೩ ಕ್ಕಂ ಐತಿಹ್ಯಪ್ರಮಾಣ ಪದ್ಧತಿ
ಸಂಪೂರ್ಣಂ.

(ಇತಿ ಪದ್ಧತಿ ೨೩ ಕ್ಕಂ ಐತಿಹ್ಯಪ್ರಮಾಣ ಪೇಳಿದಲ್ಲಿಗೆ ಮಂಗಳಂ.)

—*—...—*—

## ೨೪ ಸಂಭವ ಪ್ರಮಾಣ ಪದ್ಧತಿ ಪ್ರಾರಂಭವು.

ಮೂಲ|| ತ್ರಿಪುಡೆ|| ಬಂಧವಾವುದರಿಂದ ನೋಡಲ್ಬಂದುದೆನೆ ಕಾಯಾಭಿಮಾನದಿ|ಸಂಧಿಸಿದುದದುಬಂದುದಾರಿಂಚೆಟುಲವಾಗೀ ||ಟೀ|| ಈ ಅವಿದ್ಯಾಬಂಧವು ಯಾರಿಂದ ಬಂದುದು ಅಂದರೆ, ಶರೀರಾಭಿಮಾನದಿಂದ ದ ಬಂತು. ಆ ಅಭಿಮಾನ ಬಂದು ಸಾಮರ್ಥ್ಯವಾಗಿ ಯಾರಿಂದ ತಗುಲಿದ್ದಾಯಿತು. ... ... ||೧||

ತನ್ನನರಿಯದ ಭಾವದಿಂದದು ತಗುಲಿತಾರಿಂದೆನಲು ವಿಕ್ಷೇ । ಪೋಂನತಿಕೆಯಿಂದದುವೆ ಸೇರಿದ ಪೊಂಕವಾರಿಂ ||ಟೀ|| ತನ್ನ ಸ್ವರೂಪ ಅರಿಯದ ಅಭಿಪ್ರಾಯವು ಯಾರಿಂದ ತಗುಲಿ ಕೊಂಡದ್ದಾಯಿತು ಅಂದರೆ, ವಿಕ್ಷೇಪ ಶಕ್ತಿಯ ಸಾಮರ್ಥ್ಯದಿಂದ. ಆ ವಿಕ್ಷೇಪ ಶಕ್ತಿಯು ಉನ್ನತಿ ಹೊಂದಿದ ಯುಕ್ತಿಯು ಯಾರಿಂದ. ... ||೨||

ಶೋಭನಾಶೋಭನಗುಣಂಗಳಶುದ್ಧವಾದಧ್ಯಾಸದಿಂದದು|ವೈಭವಕ್ಕೆಡೆಯಾದುದದರಿಂವರ್ನ್ಯವಾದಾ ||ಟೀ|| ಶುಭಕರವಾದಂಥಾ ಗುಣಗಳಿಂ ದಲೂ, ಅಶುಭಕರವಾದಂಥಾ ಗುಣಗಳ ಆರೋಪಣೆಯಿಂದಲೂ, ಆ

ಶೋಭನಾಶೋಭನಾ ಗುಣಗಳ ಶುದ್ಧವಾದ ಅಧ್ಯಾಸವು ವಿಭವತ್ವಕ್ಕೆ ಅನುಕೂಲವಾದದ್ದು ಯಾರಿಂದ ಅಂಗೀಕಾರವಾಗುವದಕ್ಕೆ ಯೋಗ್ಯವಾದ॥

ರಾಗ ವಿದ್ವೇಷಂಗಳಿಂದವು ರಾಜಿಸಿದವಾರಿಂದ ಸುಖದುಃಖಾಗಮನ ದಿಂದಾದದು ಮೋಣಾರದೆಸೆಯಿಂ ॥ಟೀ॥ ವಿಷಯದಲ್ಲಿ ಅನುರಾಗವಾಸನದಿಂದಲೂ, ವಿದ್ವೇಷವಾಸನೆಯೆಂಬ ಯೆರಡರಿಂದಲೂ, ಆ ರಾಗದ್ವೇಷಗಳು ಪ್ರಕಾಶಿಸಿದ್ದ ಯಾರ ದೆಶೆಯಿಂದ, ಸುಖದುಃಖಗಳ ಪ್ರಾಪ್ತಿಯಿಂದಾದುದು. ಆ ಸುಖದುಃಖಾಗಮನವು, ಮತ್ತು ಯಾವ ಪದಾರ್ಥದ ದೆಶೆಯಿಂದಾದುದು॥ ... ... ॥೪॥

ಪುಣ್ಯಪಾಪಗಳಿಂದಲವು ಸಂಪ್ರಪ್ಪವಾಗುವವಾರ ದೆಶೆಯಿಂ। ಗಣ್ಯಮೆನಿಪ ದ್ವೈತದಿಂದದು ಗಾಢವಾಗೀ ॥ಟೀ॥ ಪುಣ್ಯಪಾಪಗಳಿಂದ. ಆ ಪುಣ್ಯಪಾಪಗಳು ಸಂಪಾದಿಸಲ್ಪಡುವದು ಯಾತರಿಂದ, ಆದರೆ ಎಣಿಸಲ್ಪಟ್ಟಂಥಾ ಭೇದದಿಂದ. ಅದು ದೃಢವಾಗಿ ... ॥೫॥

ಎಷ್ಟು ತೆರದಿಂದಹುದು ಕಾಣಲ್ಕೆರಡು ತೆರದಿಂ ಬ್ರಹ್ಮಜೀವರ। ರಿಷ್ಟಮಂ ಗುಣಿಸುತ್ತಿರುವ ಶಾಸ್ತ್ರೀಯುಮೆಂದೂ ॥ಟೀ॥ ನೋಡುವದಕ್ಕೆ ಎಷ್ಟು ಪ್ರಕಾರವಾಗುತ್ತೆ ಅಂದರೆ, ಯೆರಡು ಪ್ರಕಾರದಿಂದಾ, ಹಾಗಂದರೇನು! ಬ್ರಹ್ಮನೆಂಬುವನನ್ನು, ಜೀವನೆಂಬುವನನ್ನು, ಇಷ್ಟವಾಗಿ ಹೇಳುತ್ತಲಿರುವ ಶಾಸ್ತ್ರದಲ್ಲಿ ಹುಟ್ಟಿದ್ದೂ ಯೆಂದು. ॥೬॥

ಆ ವಿಧವನುಳಿದಿರುವ ಶಾಸ್ತ್ರೀಯುಂ ತಿಳಿಯಲೆರಡಾಗಿ ಇರುವುದು। ಭಾವಿಸಲ್ಕಂ ತೀವ್ರಮೆಂದುಂ ಮಂದಮೆಂದುಂ ॥ಟೀ॥ ಪೂರ್ವೋಕ್ತ ಶಾಸ್ತ್ರೀಯ ಬಿಟ್ಟು ಇರುವ ಶಾಸ್ತ್ರಗಲ್ಲಿ ಹುಟ್ಟಿದ್ದು ತಿಳಿದರೆ ಯೆರಡಾಗಿರುತ್ತವೆ. ವಿಚಾರಣೆ ಮಾಡಿದಂಥಾದ್ದಾದರೆ, ತೀವ್ರವೆಂದು, ಮಂದವೆಂದು ಯೆರಡಾಗಿರುವುದು. ತೀವ್ರನೆಂದರೆ ಮಂದವಂದರೆ ಅದರ ವಿವರವೇನೂ. ... ... ॥೭॥

ಕಾಮರೋಷಾದಿಗಳ ವ್ಯಾಕೃತಿಯೋ ಮತಿಯೊಳರಿಯಲ್ಕೆ ತೀವ್ರಂ। ಈ ಮನೋರಾಜ್ಯವ ವರಿಸಲಿಂತಿಪ್ಪಮಂದಂ ॥ಟೀ॥ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳ ವ್ಯಾಪಕತ್ವವೇ ಬುದ್ಧಿಯಲ್ಲಿ

ಅರಿದಂಥಾದ್ದಾವರೆ, ತೀವ್ರವೆಂಬ ಹೆಸರುಳ್ಳ ಶಾಸ್ತ್ರೀಯವು. ಈ ದೃಶ್ಯವಾದ ಮನೋರಾಜ್ಯವನ್ನು ಅಂಗೀಕರಿಸಲು ಹೀಗೆ ಇರುವಂಥಾದ್ದು ಮಂದವೆಂಬ ಶಾಸ್ತ್ರೀಯವು. ... ||V||

ಇದರ ದೆಶೆಯಿಂದಾಯ್ತು ಸಂಸ್ಕೃತಿ ಯಿಾತಿ ಇದರಿಂ ತೊಲಗಲೆಣಿಸ ೪ ಲ್ಕೊದಗುವುದುತಾಂ ಶೇಷ ಶೇಷಿತ್ವೋಕ್ತಿಯಲ್ಲಿ ||೬|| ಹಿಂದೆ ಹೇಳಿದಂಥಾ ಅರ್ಥದಿಂದ ಜನನ ಮರಣ ರೂಪ ಸಂಸಾರವಾಯಿತು, ಯಿಾ ಸಂಸೃತಿಯಿಂದ ಪಾರೆಗಾಗುವ ರೀತಿ ಯೆಣಿಸಿದರೆ (ನೇತಿನೇತಿಯೆಂ) ಶ್ರುತಿ ವಾಕ್ಯದಿಂದ ಪ್ರಾಪ್ತವಾಗುವದು. ಶೇಷ ಶೇಷಿತ್ವ ವಾಕ್ಯದಲ್ಲಿ ||೯||

ಮೂ|| ವ|| ಅದೆಂತು||ಶೇಷವೆಂದರೆ, ಕಳೆಯಿಸಿಕೊಂಬುದು. ಶೇಷಿ ಅಂದರೆ, ಕಳೆಯಿಸಿಕೊಂಬುವದರೊಳಿದ್ದು ಕಳೆತೆಗೆಬಾರದುದು, ಆದಾವುದು, ಪರಮಾತ್ಮನು|| ||೬|| ಆ ವಾಕ್ಯಾರ್ಥವು ಹ್ಯಾಗೆಅಂದರೆ, ಶೇಷವೆಂದರೆ ಕಳೆಯಿಸಿಕ್ಕೊಂಬ ಅನಾತ್ಮರೂಪ ಪದಾರ್ಥಗಳು. ಶೇಷಿಅಂದರೆ, ಯೇನು ಅನ್ನುತ್ತ ಕೇಳಿದರೆ ಹೀಗೆ ಕಳೆತೆಗೆಬಂದ ಅನಾತ್ಮ ಪದಾರ್ಥಗಳಲ್ಲಿ ಎಡೆದೆರಪಿಲ್ಲದೆ ಸಾಕ್ಷಿಯಾಗಿ ಯಿದ್ದುಕ್ಕೊಂಡು ತಾನು ಕಳೆಯುವದಕ್ಕೆ ಕೂಡದೆಯಿರುವ ಪದಾರ್ಥವು ಅದು ಯಾವ ಪದಾರ್ಥವು ಅಂದರೆ, ಸಚ್ಚಿದಾನಂದ ಸ್ವರೂಪವಾದ ಆತ್ಮನು ಹ್ಯಾಗೆ||

ಮೂ|| ವ|| ಭೂಮಿಯುಂ ಕಳೆಯಲಾಗಿ, ಭೂಮಿಯ ಗುಣಮಾದ ಗಂಧದೊಡನೆ ಭೂರೂಪಮುಂ, ಭೂಮ್ಯಾದಿದೇವತೆಯುಂ, ಭೂಕಾರ್ಯಮುಂ, ಭೂವಿಕಾರಮಾದ ಚರಾಚರದೇಹ ನಿಷ್ಠಮಾದ ಸಕಾಷ್ಠಾದಿಗಳುಂ ಪೋಗುವವೂ. ಜಲಮುಂ ಕಳೆಯಲಾಗಿ, ಜಲಗುಣಮಾದ ರಸದೊಡನೆ ಜಲರೂಪಮುಂ, ಜಲಾಧಿದೇವತೆಯುಂ, ಜಲಕಾರ್ಯಮುಂ, ಜಲವಿಕಾರಮಾದ ಚರಾಚರ ದೇಹ ನಿಷ್ಠಾರುಧಿರಸ್ವರಾದಿಗಳುಂ ಪೋಗುವವೂ. ಅಗ್ನಿಯುಂ ಕಳೆಯಲಾಗಿ, ಅಗ್ನಿಯ ಗುಣಮಾದ ರೂಪದೊಡನೆ ಅಗ್ನಿಯ ರೂಪಮುಂ, ಅಗ್ನಿಯಾಧಿ ದೇವತೆಯುಂ, ಅಗ್ನಿಕಾರ್ಯಮುಂ, ಅಗ್ನಿವಿಕಾರಮಾದ ಚರಾಚರ ದೇಹನಿಷ್ಠಪಿತ್ತ ಶೋಷಣಾದಿಗಳುಂ ಪೋಗುವವೂ. ವಾಯುವುಂ ಕಳೆಯಲಾಗಿ, ವಾಯುವಿನ ಗುಣಮಾದ ಸ್ಪರ್ಶ

ದೊಡನೆ ವಾಯುರೂಪವುಂ, ವಾಯು ಅಧಿದೇವತೆಯುಂ, ವಾಯುಕಾರ್ಯವುಂ, ವಾಯು ವಿಕಾರವಾದ ಚರಾಚರ ದೇಹ ನಿಷ್ಟಪ್ರಾಣ ಮೂಲಾಕರ್ಷಣಾದಿಗಳು ಪೋಗುವವೂ. ಆಕಾಶವುಂ ಕಳೆಯಲಾಗಿ, ಆಕಾಶಗುಣವಾದ ಶಬ್ದದೊಡನೆ ಆಕಾಶರೂಪವುಂ, ಆಕಾಶಾಧಿದೇವತೆಯುಂ, ಆಕಾಶಕಾರ್ಯವುಂ, ಆಕಾಶವಿಕಾರವಾದ ಚರಾಚರ ದೇಹನಿಷ್ಟ ಕಾಮನಿರ್ಯಾಸಾದಿಗಳು ಪೋಗುವವೂ. ಅವಿದ್ಯೆಯುಂ ಕಳೆಯಲಾಗಿ, ಅವಿದ್ಯಾನಿಷ್ಟ ಜೀವರ ಕಾರ್ಯಾಕಾರಣ ಜ್ಞಾನದೊಡನೆ ಅವಸ್ಥಾತ್ರಯಂಗಳುಂ ಪೋಗುವವೂ. ಪ್ರಕೃತಿಯುಂ ಕಳೆಯಲಾಗಿ, ಪ್ರಕೃತಿನಿಷ್ಟ ಭೋಗ್ಯತ್ವದೊಡನೆ ಜಗತ್ತಿನ ವ್ಯಾಪಾರಂಗಳು ಪೋಗುವವೂ. ಮಾಯೆಯುಂ ಕಳೆಯಲಾಗಿ, ಮಾಯಾನಿಷ್ಟೇಶ್ವರಾದೀನ ಜಗಜ್ಜನಕ ಶಕ್ತಿಯೊಡನೆ ಅನೃತ, ಜಡ, ದುಃಖ, ನಿತ್ಯಖಂಡಿತತ್ವಂಗಳೆಂಬ ನಿಜರೂಪ ಲಕ್ಷಣಂಗಳುಂ, ಗುಣತ್ರಯಂಗಳುಂ ಪೋಗುವವೂ. ಆ ಸಮಯದೊಳ್ಪೋಗದೆನಿಂತ ಸಚ್ಚಿದಾನಂದಂಗಳೇ ನಾನೆಂದು ನಿಶ್ಚೈಸುವದೇ ಶೇಷಿತ್ವ ಸಮಾಸಾದಿತ ಜೀವನ್ಮುಕ್ತಿಯೆಂದು ಸಂಭವ ಪ್ರಮಾಣಪದ್ಧತಿಯುಂ ವಿಜೃಂಭಣೆಗೈದುಇನ್ನೊಂದುಪ್ರಕಾರವುಂ ಪೇಳುತ್ತಿರ್ದಪನದೆಂತೆನೆ॥ ॥ಟೀ॥ ಅದು ಹ್ಯಾಗೆಅಂದರೆ, ವ್ಯತಿರೇಕ ಕ್ರಮದಿಂದ ಬುದ್ಧಿಯಲ್ಲಿ ಯುಕ್ತಿಯಿಂದ ಭೂಮಿಯು ಆತ್ಮಸ್ವರೂಪವಲ್ಲವೆಂದು ಕಳೆಯಲಾಗಿ, ಭೂಸಂಬಂಧ ಗುಣವಾದ ಸುಗಂಧ ದುರ್ಗಂಧಗಳ ಸಮೇತ ಭೂಮಿಯ ರೂಪವನ್ನು, ಭೂಮಿಗೆ ಅಧಿದೇವತೆಯಾದ ಚತುರ್ಮುಖ ಬ್ರಹ್ಮನನ್ನು, ಭೂಮಿಯ ಧಾರಣಾದಿ ಕಾರ್ಯವನ್ನು, ಭೂಮಿಯ ವಿಕಾರವಾದ ಚರಗಳಾದ ಅಚರಗಳಾದ ದೇಹಗಳಲ್ಲಿರುವ ಕಠಿಣಾಂಶಗಳಾದ ಅಸ್ತಿ ಕಾಷ್ಟಾದಿಗಳು ಸಹ ಹೋಗುವಂಥಾವುಗಳಾಗುತ್ತವೆ. ಜಲವು ಆತ್ಮನಲ್ಲವೆಂದು ಬುದ್ಧಿಯಲ್ಲಿ ಯುಕ್ತಿಯಿಂದ ತೆಗಿಯಲಾಗಿ! ಜಲಗುಣವಾದ ಮಧುರತ್ವ, ಕ್ಷಾರತ್ವದೊಡನೆ ಜಲದರೂಪವನ್ನು, ಜಲಕ್ಕೆ ಆಧಿದೇವತೆಯಾದ ವಿಷ್ಣುವನ್ನು, ಜಲದ ಕಾರ್ಯವನ್ನು, ಜಲಸಂಬಂಧ ವಿಕಾರವಾದ ಚರಗಳೆಂಬ ಅಚರಗಳೆಂಬ ಶರೀರಗಳಲ್ಲಿ ಇರುವ ರಕ್ತವನ್ನು, ನೀರು ಮೊದಲಾದಂಥಾವುಗಳು ಇಲ್ಲದೆ ಹೋಗುವವೂ. ಅಗ್ನಿಯನ್ನು! ಬುದ್ಧಿಯಲ್ಲಿ ಯುಕ್ತಿಯಿಂದ ಆತ್ಮನಲ್ಲವೆಂದು ಕಳೆಯಲಾಗಿ

ಅಗ್ನಿಸಂಬಂಧ ಗುಣವಾದ ರೂಪದಕೂಡಲೇ, ಅಗ್ನಿಗೆ ಅಧಿದೇವತೆಯಾದ ರುದ್ರನನ್ನು, ದಾಹ್ಯರೂಪವಾದ ಅಗ್ನಿಯ ಕಾರ್ಯವನ್ನು, ಅಗ್ನಿಯ ವಿಕಾರವಾದ ಸ್ಥಾವರ ಜಂಗಮ ದೇಹನಿಷ್ಠಂಗಳಾದ ಪಿತ್ತ ಶೋಷಣ ಮೊದಲಾದಂಥಾವುಗಳು ಹೋಗುವತ್ತಲವೆ. ವಾಯುವನ್ನು ಆತ್ಮನಲ್ಲವೆಂದು ಬುದ್ಧಿಯಲ್ಲಿ ಯುಕ್ತಿಯಿಂದ ಕಳೆಯಲಾಗಿ ವಾಯು ಸಂಬಂಧಗುಣವಾದ ಸ್ಪರ್ಶದಕೂಡ ವಾಯುವಿನ ರೂಪವನ್ನು, ವಾಯುವಿನ ಅಧಿದೇವತೆಯಾದ ಈಶ್ವರನನ್ನು, ವಾಯುವಿನ ಕಾರ್ಯವನ್ನು, ವಾಯು ವಿಕಾರವಾದ ಚರಗಳಾದ ಅಚರಗಳಾದ ಶರೀರಗಳಲ್ಲಿ ಇರುವ ಪ್ರಾಣಗಳನ್ನು, ವೃಕ್ಷಮೂಲದ ಜಲಾಕರ್ಷಣಾದಿಗಳನ್ನು, ಹೋಗುವವು. ಆಕಾಶವುಜಡವಾದಕಾರಣ ಆತ್ಮನಲ್ಲವೆಂದು ಬುದ್ಧಿಯಲ್ಲಿ ಯುಕ್ತಿಯಿಂದ ಕಳೆಯಲಾಗಿ, ಆಕಾಶಗುಣವಾದ ಶಬ್ದದಕೂಡಾ, ಆಕಾಶದ ರೂಪವನ್ನು, ಆಕಾಶಕ್ಕೆ ಅಧಿದೇವತೆಯಾದ ಸದಾಶಿವನನ್ನು, ಆಕಾಶದ ಕಾರ್ಯವನ್ನು, ಆಕಾಶದ ವಿಕಾರವಾದ ಸ್ಥಾವರ ಜಂಗಮಾತ್ಮಕ ಶರೀರಗಳೊಳಗೆ ಇರುವ ಕಾಮನಿರ್ಮ್ಯಾಸಾದಿಗಳು ಹೋಗುತ್ತಲಿವೆ. ಅವಿದ್ಯೆಯು ಆತ್ಮನಲ್ಲವೆಂದು, ಬುದ್ಧಿಯಲ್ಲಿ ಯುಕ್ತಿಯಿಂದ ತೆಗೆಯಲಾಗಿ, ಆ ಅವಿದ್ಯೆಯಲ್ಲಿ ಇರುವ ಜೀವಾಚ್ಛಾದಕವಾದ ಕಾರಣ ಜ್ಞಾನದ ಕೂಡಾ ಜಾಗ್ರಸ್ವಪ್ನ ಸುಷುಪ್ತಿಗಳೆಂಬ ಅವಸ್ಥಾತ್ರಯಂಗಳು ಹೋಗುವವೂ. ಪ್ರಕೃತಿಯು ಜಡವೆಂದು ಆತ್ಮನಲ್ಲವೆಂದು ಬುದ್ಧಿಯಲ್ಲಿ ಯುಕ್ತಿಯಿಂದ ಕಳೆಯಲಾಗಿ, ಪ್ರಕೃತಿ ನಿಷ್ಟವಾದ ಭೋಗಿಸುವದಕ್ಕೆ ಯೋಗ್ಯತ್ವದ ಕೂಡಲೇ ಜಗದ್ವ್ಯಾಪಾರಗಳು ಹೋಗುವವೂ. ಯಾ, ಮಾ, ಸಾಮಾಯ, ಯಂಬವ್ಯುತ್ಪತ್ತಿಯಿಂ ಯಾವದು ಇಲ್ಲವೋ, ಯಾವದು ತೋರಿಕೆಡುವದೋ ಅದು ಮಾಯೆಯೆಂದು ಹಿರಿಯರಾಡಿದರಾಗಿ ಇಂಥಾ ಮಾಯೆಯು ಆತ್ಮನಲ್ಲವೆಂದು ಬುದ್ಧಿಯಲ್ಲಿ ಯುಕ್ತಿಯಿಂದ ಕಳೆಯಲಾಗಿ, ಮಾಯೆಯಲ್ಲಿ ಇರುವ ಈಶ್ವರಾಧೀನವಾದ ಜಗದುತ್ಪತ್ತಿಯೂ ಮಾಡುವ ಶಕ್ತಿಕೂಡಲೇ, ಅನೃತ, ಜಡ, ದುಃಖ, ಅನಿತ್ಯ; ಖಂಡಿತತ್ವಂಗಳೆಂಬ ಮಾಯಾ ನಿಜರೂಪಲಕ್ಷಣಗಳನ್ನು; ಸತ್ವ, ರಜಸ್ಸು, ತಮೋಗುಣಂಗಳು ಹೋಗುವವೂ. ಆಕಾಲದಲ್ಲಿ ಹೋಗದೆನಿಂತಿರುವ ಸಚ್ಚಿದಾನಂದಗಳೇ ನಾನೆಂದು ನಿಶ್ಚಯ ಮಾಡುವದೇ, ಶೇಷಿತ್ವಸ

ನೊಳಾದಿತ ಜೀವನ್ಮುಕ್ತಿಯೆಂದು, ಸಂಭವ ಪ್ರಮಾಣ ಮಾರ್ಗವನ್ನು ವಿ
ಜೃಂಭಿಸಿ ಹೇಳಿ, ಇನ್ನೊಂದುಮಾರ್ಗವಾಗಿ ಹೇಳುತ್ತಲಿದ್ದಾನೆ. ಅದು
ಹ್ಯಾಗೆ ಅಂದರೆ.

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕ
ವಿಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣ
ಪ್ರಭು ವಿರಚಿತವಾದ ನಿಜದೀಪಿಕಾ
ರತ್ನಾಖ್ಯಗ್ರಂಥದಲ್ಲಿಪದ್ಧತಿ೨೮ರಕ್ಕಂ
ಸಂಭವಪ್ರಮಾಣ ಪದ್ಧತಿ
ಸಂಪೂರ್ಣಂ.

(ಇತಿ ಪದ್ಧತಿ ೨೮ರ ಸಂಭವಪ್ರಮಾಣ ಪೇಳಿದಿಲ್ಲಿಗೆ ಮಂಗಳಂ)

## ೨೯ ಪಂಚಭ್ರಮನಿವಾರಣ ಪದ್ಧತಿ ಪ್ರಾರಂಭವು.

ಮೂ॥ ವಚನ॥ ಯಥಾರ್ಥವಂಬಿಟ್ಟು ಯಥಾರ್ಥದಲ್ಲಿ ವರ್ತಿಸುವಣ
ವ್ವೂ ವಿಪರೀತ ಭಾವನೆ ಯೆನಿಸುವದು. ಅದು ಪ್ರಮಾಣಗತವೆಂದು, ಪ್ರ
ಮೇಯ ಗತವೆಂದು,ಯರಡುಪ್ರಕಾರಮಾಗಿಪ್ಪುದು. ಜೀವನಲ್ಲಿ ಬ್ರಹ್ಮಪ್ರ
ತಿಪಾದಕ ಶಾಸ್ತ್ರಂಗಳಲ್ಲಿ ವೈಯರ್ಥ್ಯಮಂ ಕಲ್ಪಿಸುವದೇ ಪ್ರಮಾಣಗತ
ಸಂಭಾವನೆ. ಜೀವನು ಬ್ರಹ್ಮನಾಗನೆಂದು ನಿಶ್ಚೈಸುವುದೇ ಪ್ರಮೇಯಗ
ತಾ ಸಂಭಾವನೆ. ಯರಡನೆಯ ಅಸಂಭಾವನೆಯುಲ್ಲ॥ ॥ಟೀ॥ ನಿಜಸ್ವ
ರೂಪವನ್ನುಬಿಟ್ಟು, ಅಬದ್ಧವಾದ ದೇಹಾದಿಗಳಲ್ಲಿ ಆತ್ಮಸ್ವರೂಪವು ಬಿ
ಟ್ಟು, ಅನಾತ್ಮಗಳಾದ ದೇಹಾದಿಗಳಲ್ಲಿ ನಾನೂಯೆಂದು ಭಾವಿಸುವುದೇ
ವಿಪರೀತ ಭಾವನೆ ಯೆನಿಸುವುದು. ಈ ವಿಪರೀತ ಭಾವನೆಯೆಂಬುದು,
ಪ್ರಮಾಣಗತವೆಂದು, ಪ್ರಮೇಯಗತವೆಂದು, ಉಭಯಪ್ರಕಾರಮಾಗಿರು
ವದು. ಜೀವನಲ್ಲಿ ಜೀವನೇ ಬ್ರಹ್ಮವೆಂದು ಹೇಳಲ್ಪಟ್ಟ ವೇದಶಾಸ್ತ್ರಂಗಳ

ಲ್ಲಿ ವೈರ್ಥತ್ವವನ್ನು ಕಲ್ಪಿಸಿ ಹೇಳುವದೇ ಪ್ರಮಾಣಗತ ಸಂಭಾವನೆಯು. ಬ್ರಹ್ಮನಿಂದ ಬೇರೆಯಾದ ಜೀವನು ತಿರಿಗಿ ಬ್ರಹ್ಮನಾಗುವದಿಲ್ಲವೆಂಬುದೇ ಪ್ರಮೇಯಗತ ಸಂಭಾವನೆಯು. ಈ ಯರಡನಯು ಅಸಂಭಾವನೆಯಲ್ಲಿ ||೧||

ಮೂ|| ಜಂಪೆ|| ಪುಣ್ಯಪಾಪಂಗಳಿಂಸ್ವರ್ಗನರಕಗಳೊಂದಿ | ಗಣ್ಯನಹಜೀವಂ ವಿಕಾರಿಯೇನಿತ್ಯಂ|| ||ಟೀ|| ಪುಣ್ಯದಿಂದ ಸ್ವರ್ಗವನ್ನು, ಪಾಪದಿಂದ ನರಕವನ್ನು ಹೊಂದಿ ಪಾಪಪುಣ್ಯಂಗಳ ನನುಭವಿಸುತ್ತಲಿರುವ ಜೀವನು, ಯಾವಾಗಲು ಸವಿಕಾರಿಯಲ್ಲದೆ ನಿರ್ವಿಕಾರಿಯಲ್ಲವು ||೧||

ಈತನಿಗೆತನುಸಂಗವಿಲ್ಲದಿರೆಕ್ಷುತ್ಪಿಪಾ | ಸಾತಿಶಯಮಾರಿಂದಸಾರಿತಾರ್ಥೈಯ್ಯ|| ||ಟೀ|| ಈ ಜೀವನಿಗೆಶರೀರದಲ್ಲಿ ಸಂಬಂಧವಿಲ್ಲದೆಯಿದ್ದರೆ, ಹಸಿವು, ತೃಷೆಗಳಾಧಿಕ್ಯವನ್ನು ವಿಚಾರಿಸಿದರೆ, ಯಾರಿಂದ ಬಂದು ಹೊಂದಿದಂಥಾದ್ದಾಯಿತು|| ... ... ||೨||

ಕರ್ತೃತ್ವಮಿಲ್ಲದಿರೆಕಾರ್ಯಮಾರಿಂದಾಯ್ತು |ಭರ್ತೃವಹಜೀವಂಗೆಭವಭವಂಗಳಲೀ|| ||ಟೀ|| ಈ ಜೀವನಿಗೆ ಕರ್ತೃತ್ವವಿಲ್ಲದೆ ಹೋದರೆ ಸಕಲ ಕಾರ್ಯಗಳು ಯಾರಿಂದ ಆದೀತು. ಶರೀರೋತ್ಪತ್ತಿಗಳಲ್ಲಿ ಪ್ರಭುವಾದ ಜೀವಂಗೆ ಕಾರ್ಯಗಳು ಹ್ಯಾಗೆಆದವು|| ||೩||

ಅದ್ವೈತವಿಾತನೊಳಗಾಗದೆಂದಿಗುಪರಮ | ಗದ್ವಿತೀಯಂಗೀತಗೂನಿಜಂಭೇದಂ|| ||ಟೀ|| ಅದ್ವಿತೀಯನಾಗಿ, ಏಕನಾಗಿ, ಸಜಾತಿಯ ವಿಜಾತಿಯ ಸ್ವಗತ ಭೇದರಹಿತನಾಗಿ ಯಿರುವಂಥಾ ಪರಬ್ರಹ್ಮನಿಗು, ಈಜೀವನಿಗು ಏಕತ್ವವಾದ ಐಕ್ಯವು ಯೆಂದಿಗೂ ಆಗುವದಿಲ್ಲ. ಭೇದವು ಯಥಾರ್ಥವು|| ... ... ... ||೪||

ಪಂಚಭ್ರಮೆಗಳಿವೆಪಟುವಾಗೆನುವದಿಂತು| ಸಂಚಿತಮಹಾಪಾಪಕಂಚುಕೀನರರಲೀ|| ||ಟೀ|| ಸಂಪಾದಿಸಲ್ಪಟ್ಟ ಮಹಾ ಪಾಪ ಕವಚ ಉಳ್ಳಂಥಾ ಮನುಷ್ಯರಲ್ಲಿ, ಈ ಐದು ಭ್ರಮೆಗಳು ಮಹಾ ಸಾಮರ್ಥ್ಯವಾಗಿ, ಹೀಗೆನ್ನುವದು ಇರುವದು|| ... ... ||೫||

ಮೂ|| ವ|| ಇದಕ್ಕೆ ಪರಿಹಾರವೆಂತು, ಶ್ರವಣದಿಂದ. ಆ ಶ್ರವಣಂ

ಸತ್ಸಹಾಯುವೋ, ಅಸಹಾಯುವೋ, ಕಾರ್ಯದಕ್ಷವಾಗೇಕ್ಕೆ ಸತ್ಸಹಾಯುವೇ, ಸರಿ. ಸತ್ಸಹಾಯುಂಗಳಾವಾವು, ಷಡ್ವಿಧಲಿಂಗಂಗಳು. ಅದೆಂತು,ಪ್ರತ್ಯಗಾತ್ಮನೇ ಬ್ರಹ್ಮವೆಂದು ಮರಳಿ ಮರಳಿ ಪೇಳ್ವುದಭ್ಯಾಸ. ಈತಂಗೆ ಪ್ರಮಾಣಾತೀತತ್ವಮಂ ಪೇಳ್ವುದ ಪೂರ್ವತೆ. ಈತನನ್ನರಿಯಲಾಗಿ ಸರ್ವಂ ಮರೆಯಲ್ಪಟ್ಟುದೆಂಬುದುಫಲ. ಈತಂಗೆಪಂಚಕೃತ್ಯಮಂಪೇಳ್ವುದರ್ಥವಾದವೃತ್ತಿಕೆಯೋ ಘಟಕೆಂತಂತು, ಜಗದುಪಾದಾನಕಾರಣವಾತನೆಂಬುದೇದೃಷ್ಟಾಂತ.ಮೊದಲುಸದ್ರೂಪದಿಂದಿರ್ದಾಮೇಲೆಯುತದ್ರೂಪಮಂಸಾಧಿಪುದುಪಕ್ರಮ. ಈಪ್ರಪಂಚಮಾತನೊಳಡಗಿಸಿ,ಪೂರ್ಣಾತನೇ ಪ್ರತ್ಯಗಾತ್ಮನೆಂದೊಂದನೇಸಾಧಿಪುದುಪಸಂಹಾರ. ಈ ಉಪಕ್ರಮೋಪಸಂಹಾರಂಗಳೆರಡುಕೂಡಿಬಂದುಲಿಂಗ. ಹಾಗಾದರೆ, ಈಪ್ರಪಂಚಭ್ರಮನಿವೃತ್ತಿಗಿವರೇಸಾಕೋ ಸಾಲದೊ, ಇನ್ನು ಉಂಟು; ಅದುಹ್ಯಾಗೆ॥ಟೀ॥ಇದಕ್ಕೆ ಪರಿಹಾರಹ್ಯಾಗೆ ಆಗಬೇಕು, ಗುರು ವೇದಾಂತವಾಕ್ಯಗಳನ್ನು ಕೇಳೋಣಾದುದರಿಂದ ಆ ಶ್ರವಣವು ಸತ್ಸಹಾಯುವ್ರೋ,ಅಸಹಾಯುವ್ರೋ, ಪಂಚಭ್ರಮಗಳನ್ನು ಹೋಗಲಾಡಿಸುವ ಕಾರ್ಯ ನಿರ್ವಾಹವಾಗುವದರಲ್ಲಿ ಸಹಾಯು ಸಹಿತತ್ವವೇಸರಿ. ಸಹಾಯುಂಗಳಾವಾವುಯೆಂದು ಕೇಳಿದರೆ, ಷಡ್ವಿಧ ಲಿಂಗಂಗಳು. ಅವು ಹ್ಯಾಗೆ ಅಂದರೆ, ಸಾಕ್ಷಿಸ್ವರೂಪವಾದಜ್ಞಾನಾತ್ಮನೇ ಬ್ರಹ್ಮಸ್ವರೂಪವುಯೆಂದು, ಪುನಪ್ಪುನಹಾ ಹೇಳುವದೆ ಅಭ್ಯಾಸವೆಂಬ ಪ್ರಥಮಲಿಂಗ. ಈ ಪ್ರತ್ಯಗಾತ್ಮ ಬ್ರಹ್ಮನಿಗೆ ಪ್ರಮಾಣಾತೀತತ್ವಮಂ ಪೇಳುವದು ಅಪೂರ್ವತೆಯುಂಬದ್ವಿತೀಯುಲಿಂಗ. ಈ ಪ್ರತ್ಯಗಾತ್ಮ ಬ್ರಹ್ಮನಿಗೆ ಪ್ರತ್ಯಕ್ಷವಾಗಿ ತಿಳಿದು ಸರ್ವವುಮರೆಯಲ್ಪಟ್ಟದ್ದು ಯಾವದುಂಟೋ ಆದೇಫಲವೆಂಬತ್ರಿತಯುಲಿಂಗವು ಈ ಪ್ರತ್ಯಗಾತ್ಮ ಬ್ರಹ್ಮನಿಗೆ ನಿಯುಮವೆಂಬ ಪಂಚಕೃತ್ಯಂಗಳು ಹೇಳುವದರ್ಥವಾದ ವೃತ್ತಿಕೆಯೋ ಮಡಕೆಗೆ ಯೆಂತೋ ಅಂತು ಆತ್ಮನು ಸಕಲಜಗತ್ತಿಗು (ಸದೇವ ಸೌಮ್ಯೇ ಇದಮಗ್ರಆಸೀತ್) ಯುಂಬ ಶ್ರುತ್ಯರ್ಥದಿಂದ ಉಪಾದಾನ ಕಾರಣವೆಂದು ಹೇಳುವುದು, ದೃಷ್ಟಾಂತವೆಂಬ ಚತುರ್ಥಲಿಂಗವು. ಪ್ರಥಮದಲ್ಲಿ ಸದ್ರೂಪದಿಂದ ಇದ್ದಂಥಾವನು ಆತ್ಮನೆಂದು ತಿಳಿದು ವರ್ತಮಾನ

ಕಾಲದಲ್ಲಿಯೂ, ಭವಿಷತ್ಕಾಲದಲ್ಲಿಯೂ ಕೂಡಾ ಆ ಪೂರ್ವ ಹೇಳಿದ ಥಾ ಸದ್ರೂಪವನ್ನೇ ಸಾಧಿಸುವದು ಯಾವದುಂಟೋ, ಅದು ಉಪಕ್ರಮ ವೆಂಬ ಪಂಚಲಿಂಗವು. ಈ ಸರ್ವ ಪ್ರಪಂಚವನ್ನು, ಆ ಸದ್ರೂಪದಲ್ಲಿ ಲೀನಮಾಡಿ ಮತ್ತು ಆ ಸದ್ರೂಪವಾದ ಬ್ರಹ್ಮನೇ ಈ ಪ್ರತ್ಯಗಾತ್ಮರೂಪ ಬ್ರಹ್ಮನೆಂದು ಏಕೀಕರಿಸಿ ಒಂದೇ ಯೆಂದು ಹೇಳುವದು, ಉಪಸಂಹಾರ ವೆಂಬ ಷಡ್ಲಿಂಗವು ಈ ಉಪಕ್ರಮವು ಸಂಹಾರವು ಯೆರಡುಕೂಡಿ ಒಂದುಲಿಂಗವು. ಹಾಗಾದರೆ ಈ ಪೂರ್ವೋಕ್ತವಾದ ಪ್ರಪಂಚ ಭ್ರಮನಿವೃತ್ತಿಗೆ ಈ ಆರುಲಿಂಗಗಳೇ ಸಾಕೋ ಸಾಲದೋ, ಇನ್ನುಯಿಧೆ. ಅದು ಹ್ಯಾಗೆಅಂದರೆ। ... ... ॥೧॥

ಮೂಲ॥ ಸಾಂಗತ್ಯ॥ ಗುಣದಲ್ಲಿ ತೋರಿದ ಹಾವು ಹರಿದುಬಂದು। ಜನರ ಕಚ್ಚಿದ ಕಾಲದಲ್ಲಿ ॥ ಘನವಾದ ಪ್ರತ್ಯಗಾತ್ಮ ಪ್ರತಿಬಿಂಬಾದಿ। ಗುಣಗಳಟ್ಟುಳಿ ತೋರಬೇಕು ॥ಟೀ॥ ಹಗ್ಗದಲ್ಲಿ ತೋರಿದ ಹಾವು ಓಡಿಬಂದು ಜನಗಳನ್ನು ಕಚ್ಚಿದಂಥಾದ್ದಾದರೆ, ದೊಡ್ಡದಾದಂಥಾ ಪ್ರತ್ಯಗಾತ್ಮ ಬ್ರಹ್ಮನ ಪ್ರತಿಬಿಂಬದಲ್ಲಿ, ಸತ್ವರಜಸ್ತಮೋಗುಣಗಳ ವ್ಯಾಪಕತ್ವ ರೂಪಸಂಬಂಧ ತೋರಬೇಕು. ... ॥೧॥

ಗಾಡಾಂಧಕಾರಕ್ಕೆ ಖರ ಕಿರಣನಿಗೊಂದು। ಗೂಡಿನೋಳ್ಬಾಳಾಗುವಾಗಾ ॥ ಪ್ರ್ಯಾಢವಮಾದೀ ಪ್ರಾಕೃತಕ್ಕು ಚೈತನ್ಯಕ್ಕು। ಕೂಡಿ ನಡವದಿನ ಮಹುದು ॥ಟೀ॥ ದೃಢವಾದಂಥಾ ಅಂದಕಾರಕ್ಕು ತೀಕ್ಷ್ಣವಾದಂಥಾ ಕಿರಣಗಳುಳ್ಳ ಸೂರ್ಯನಿಗು, ಒಂದು ಮನೆಯಲ್ಲಿ ಬಾಳುವಿಕೆಯಾದ ಕಾಲದಲ್ಲಿ, ರೂಢಿಯಾದಂಥಾ ಅಜ್ಞಾನ ಕಾರ್ಯಕ್ಕು ಪ್ರತ್ಯಗಾತ್ಮ ಚೈತನ್ಯಕ್ಕು ಕೂಡಿ ನಡಿಯುವಂಥಾ ದಿವಸ ವಾಗುವದು. ... ॥೨॥

ಉಡು ಪುಷ್ಪದಲಿ ತೋರಿದ ಕೆಂಪು ಪಳುಕಿನೊ। ಳೊಡೆವೆರದೇಕವಾದಾಗಾ ॥ ಜಡಕೋಶ ನಿಷ್ಠ ಕರ್ತೃತ್ವಾದಿಗಳು ಬಂದು। ತೊಡರಿ ಜೀವನೊಳ್ಯೈಕ್ಯಹವೂ ॥ಟೀ॥ ದಾಶಿವಾಳದ ಹುವ್ವಿನಲ್ಲಿ ಇರುವ ಕೆಂಪುವರ್ಣವು ನಿರ್ಮಲವಾದ ಸ್ಫಟಿಕ ವರ್ಣದಲ್ಲಿ ಬೆರದು ಏಕರೂಪವಾದಾಗ, ಜಡವಾದ ಪಂಚಕೋಶದಲ್ಲಿ ಇರುವ ಅಹಂಕಾರ ಸಂಬಂಧವಾದ ಕ

ತ್ವರ್ಗತ್ವಾದಿಗಳ ಬಂದು ಜೀವನೊಡನೆ ಕೂಡಿಕೊಂಡು ಏಕವಾಗಿ ಆದ್ಧೀತು. ||೩||

ಮಡಕೆಯೊಡದ ಕಾಲದೊಳಗೆ ಮಹಾಕಾಶ। ದೊಡನೆ ಗಗನ ಮನ್ಯವಾಗೆ ||ವಡಲಿಂದಜೀವನೆನಿಸುವಬೊಮ್ಮಕೆಜೀವ।ನೊಡನೆಪೃಥಕ್ತ್ವವೊಪ್ಪಿರಲೀ|| ||ಟೀ||ಘಟಧ್ವಂಸವಾದಕಾಲದಲ್ಲಿ,ಆಘಟಾಕಾಶದೊಡನೆಮಹದಾಕಾಶದಕೂಡಾ, ಆಘಟಾಕಾಶನು ಬೇರೆಯಾದರೆ, ಶರೀರದಿಂದ ಜೀವನು ಯೆನಿಸಿಕೊಂಬುವ ಬ್ರಹ್ಮಸ್ವರೂಪಕ್ಕೆ, ಜೀವನು ಕೂಡಾ ಭಿನ್ನತ್ವ ಒಪ್ಪಿಯಿರಬಹುದು. ... ... ||೪||

ಕನ್ನಡಿಯಿಂದತೋರಿದಮಾರ್ಪೊಳನ್ನಕ್ಕೈಯು । ಕನ್ನಡಿಕಡೆಯಾಗಲಿರಲೂ||ತನ್ನೊಳುಪಾಧಿಕೆಟ್ಟರುಕೆಡದಿಹನುವಿ। ಭಿನ್ನನಂತಿಹಚಿದಾಭಾಸಾ||

||ಟೀ|| ಕನ್ನಡಿಯಲ್ಲಿ ತೋರಿದ ಪ್ರತಿಬಿಂಬನ್ನು, ಕೈಯಲ್ಲಿಯಿರುವ ಕನ್ನಡಿಕಡೆಗೆ ಮಡಗಿದ್ದಾಗ್ಯು, ಆ ಪ್ರತಿಬಿಂಬನ್ನು ಪೂರ್ವದಹಾಗೆ ಯಿದ್ದಂಥಾದ್ದಾದರೆ, ತನ್ನಲ್ಲಿ ಅವಿದ್ಯೆಯು ಪಾಧಿಕೆಟ್ಟಾಗ್ಯು ವಿಶೇಷವಾಗಿ ಭೇದವಾದವನಹಾಗೆ ಯಿರುವ ಚಿದಾಭಾಸನಾದ ಜೀವನು ಕೆಡದೆ ಯಿದ್ದಂಥಾವನಾದಾನು|| ||೫||

ಕಾಕಪ್ರೋಕ್ತರಮಾತನೆಚ್ಚದಿರ್ಕೃಯುಪಿ।ನಾಕಿಯುಶಾಸನವಿಹುದೂ|| ಯಾಕೆಂದರೆನೆರಡೆಣಿಸಿದವರ್ಗೆಭ।ಯಾಕರನರಕತಪ್ಪುವದೇ|| ||ಟೀ|| ತಮಗೆತೋರಿದಹಾಗೆ ಯುಕ್ತಿಗಳ ಹೇಳುವರ ಮಾತುಗಳನ್ನು ನಂಬ ಬೇಡವೈಯು. ಪರಮೇಶ್ವರನ ಆಜ್ಞೆಯಾದ ಶೃತಿಯಿರುತ್ತಲಿಥೆ. ಯಾಕೆಂದರೆ ದ್ವಿತೀಯದ್ವೈಭಯಂಭವತಿ) ಯಂಬಶೃತಿಯಲ್ಲಿ ಹೇಳಿಯಿಥೆ. ಯೆಂತೆಂದರೆ; ಜೀವನು ಬೇರೆ, ಬ್ರಹ್ಮನುಬೇರೆ, ಯಂಬದಾಗಿ ಯೆಣಿಸಿಕೊಂಡವರಿಗೆ ಭಯಂಕರವೆಂಬ ನರಕ ತಪ್ಪೀತೆ|| ||೬||

ಏಕನೆಂದಾತ್ಮನತಿಳಿದವನೇವೀತ।ಶೋಕನೆಂದಾಮ್ನಾಯಶಿರರ್ವ|| ಸಾಕುಸಾಂಕೆಂಬಂತೆಘೋಷಿಸಿದುದಕೇಳಿ।ಯಾಕಾಣೆಯಾಸಜ್ಜನರಲೀ||

||ಟೀ|| ಸಜಾತೀಯ, ವಿಜಾತೀಯ, ಸ್ವಗತಭೇದರಹಿತವಾದಾತ್ಮ

ನು ಒಬ್ಬನೇಯೆಂದು ತಿಳಿದಂಥಾವನು ಯಾರೋ, ಅವನು, (ತರತಿಶೋಕಮಾತ್ಮವಿತ್) ಯೆಂಬ ಶ್ರುತ್ಯುಕ್ತಾರ್ಥಾನುಸಾರವಾಗಿ, ಸಕಲದುಃಖವನ್ನು ತರಿಸುತ್ತಲಿದ್ದಾನೆಯೆಂದು ವೇದವಾಕ್ಯವು ಸಾಕುಸಾಕೆಂಬುವಹಾಗೆ ಕೂಗುತ್ತ ಲಿರುವದನ್ನು, ನೀನು ಕೇಳಲಿಲ್ಲವೇ ಆ ಆತ್ಮಾನಭವಿಗಳಾದ ಸಜ್ಜನರುಗಳಲ್ಲಿ॥ ॥೭॥

ಮೂ॥ ವ॥ ಇಂತೆಂದು ಪಂಚಭ್ರಮನಿವೃತ್ತಿ ಪದ್ಧತಿಯಂ ಹೆಚ್ಚಾಗಿ ಪೇಳಿ ಇನ್ನೊಂದು ಪ್ರಕಾರಮಂ ಪೇಳುತ್ತಿರ್ದಪನದೆಂತೆನೆ ॥ಟೀ॥ ಹೀಗೆಂದು ಪಂಚಭ್ರಮನಿವಾರಣ ಮಾರ್ಗವನ್ನು ಸಂಭ್ರಮದಿಂದ ಹೆಚ್ಚಾಗಿ ಇನ್ನೊಂದು ಮಾರ್ಗವಾಗಿ ಹೇಳುತ್ತಲಿದ್ದಾನೆ ಅದುಹ್ಯಾಗೆ ಅಂದರೆ

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವ ತಾತ್ವಿಕ ವಿಚಾರ
ಪಾರೀಣಶಾಲ್ಯಕ್ಷಿತಿಪಾಲಕೃಷ್ಣ ಪ್ರಭುವಿರಚಿ
ತವಾದ ನಿಜದೀಪಿಕಾ ರತ್ನಗ್ರಂಥದೋಳ್
ಎಂಟರಲ್ಲಿಪಂಚಭ್ರಮನಿವಾರಣಲಕ್ಷಣಂ
ಸಂಪೂರ್ಣಂ.

(ಇತಿಸದ್ಧತಿ ಎಂಟರಲ್ಲಿ ಪಂಚಭಮನಿವಾರಣಲಕ್ಷಣ ಪೇಳಿದಿಲ್ಲಿಗೆ ಮಂಗಳಂ.)

—*—...—*—

## ಅಥ ಪಂಚಭ್ರಮನಿವಾರಣ ಪದ್ಧತಿ ಯೊಳಗಣ ಸಪ್ತಾವಸ್ಥಾಲಕ್ಷಣ ಪ್ರಾರಂಭವು.

---

ಮೂಲ॥ ಅಟತಾಳ॥ ಹತ್ತುಮಂದಿಯು ಕೂಡಿವಾಹಿನಿಯುತ್ತರಿಸ್ಸಿಯೇಬಳಿಕಬಂ।ಭತ್ತುಮಂದಿಯುನಿದಿರಿನಲ್ಲೆಣಿಸಲ್ಲಿತನ್ನಾ ॥ಟ॥ ಹತ್ತು ಜನಗಳುಕೂಡಿ ಒಂದುನದಿಯುನ್ನುದಾಂಟಿ, ಆಚೇತಡಿಯಲ್ಲಿನಿಂತುಕೊಂಡುಯೆಣಿಸುವಲ್ಲಿ, ಆಮೇಲೆ ಮತ್ತು ಒಂಭತ್ತುಮಂದಿಯುನ್ನುಪ್ರತ್ಯಕ್ಷವಾಗಿ ಯೆಣಿಸುವ ಕಾಲದಲ್ಲಿ ಯೆಣಿಸುವಂಥಾವನು. ... ॥೧॥

ಎಣಿಸದೆಲ್ಲರು ದಶಮನೀ ವಾಹಿನಿಯೊಳಳಿದಾನೆಂಬುದೇ । ಗಣಿಸಿಯು ಜ್ಞಾನವನು ಮೇಲೀಗಾತನಿಲ್ಲಾ ॥ಟೀ॥ ಹತ್ತನೆಯುವನಾದ ತನ್ನ ನೆಣಿಸದೆ, ಯಲ್ಲರೂ ಕೂಡಿ ಹತ್ತನೆಯುವನು ಈ ನದಿಯಲ್ಲಿ ಅಳಿದು ಹೋದನೆಂಬುದೇ. ಯೆಣಿಸಿ ನೋಡಿದರೆ. ಹೀಗೆ ತಿಳಿದಂಥಾದ್ದು ಯಾವದೋ,ಅದು ಅಜ್ಞಾನವು. ಮೇಲೆ ನೋಡಿದರೆ ಈಗ ಆ ದಶಮ ಪುರುಷನುಯಿಲ್ಲ॥

ಇರಲು ತೀರದಿ ಕಾಣಿಸನೆಯಿಂ । ಬೆರಡು ತೆರದಾ ಭ್ರಾಂತಿಯಾ । ಪಿರಿಯರದ ನಾವರಣಮೆಂದುಚ್ಚರಿಸುತಿಹರೂ ॥ಟೀ॥ ಹತ್ತನೆಯುವನು ಯಿದ್ದಂಥಾವನಾದರೆ, ನದೀತೀರದಲ್ಲಿ ಕಾಣಿಸದೇ ಇದ್ದಾನೇ ಯನ್ನುವ, ಯರಡು ತೆರನಾದ ಭ್ರಾಂತಿಯುನ್ನು ದೊಡ್ಡವರಾದಂಥಾವರು, ಆವರಣವೆಂದು ಹೇಳುತ್ತಲಿದ್ದಾರೆ. ... ॥೨॥

ದಶಮಮರಣವಿಷಾದದಿಂದಾ।ದರ್ಘಮೇವಿಕ್ಷೇಪವೂ। ಕುಶಲನೋರ್ವ್ವನ ಮುಖದೊಳೆಲ್ಲರು ಕೂಡಿ ತಿಳಿಯೇ ॥ಟೀ॥ ಹತ್ತನೇ ಪುರುಷನ ಮುಖದಿಂದಾದಂಥಾ ದುಃಖವಾದರ್ಘವೇ, ವಿಕ್ಷೇಪವು ಯೆನ್ನಿಸಿ ಕೊಳ್ಳುತ್ತಲಿಧೆ. ಚಾತುರ್ಯನಾದಂಥಾವನೊಬ್ಬನ ಮುಖದಿಂದ ಯೆಲ್ಲರೂ ಕೂಡಿ ತಿಳಿದಂಥಾವರಾದರೆ. ... ॥೪॥

ನಾಕದಲ್ಲಿಹ ದಶಮನೆಂಬುದ ನರಿಯೆ ಬಂದಾ ಭಾವಮೇ । ಸೌಕುಮಾರ್ಯ್ಯಂ ಮಿಗೆ ಪರೋಕ್ಷವ ಸಾರ್ದವಿತ್ತೀ ॥ಟೀ॥ ಆ ದಶಮ ಪುರು

ಷನು ಸ್ವರ್ಗದಲ್ಲಿ ಇದ್ದಾನೆಯೆಂದು ತಿಳಿದಂಥಾ ಭಾವ ಯಾವದುಂಟೋ, ಅದು ಹೆಚ್ಚಿದಂಥಾ ಮನೋಹರವಾದ ಪರೋಕ್ಷ ಜ್ಞಾನವು ||೫||

ವಿದುರನೋರ್ವನು ಬಂದಿವರ ದುಃಖದ ಪರಿಯನು ಚಿಂತಿಸಿ | ಯಿದಿರೊಳೆಣಿಸುತನೀಂದಶಮನೆಂಬುದನುದೋರೆ ||ಟೀ|| ತಿಳಿದಂಥಾವನೊಬ್ಬನು ಬಂದು, ಇವರ ದುಃಖದ ಪರ್ಯ್ಯಾಯವನ್ನು ವಿಚಾರಿಸಿ, ಯೆದುರಾಗಿ ಯೆಣಿಸುತ್ತಲಿರುವ ನೀನೇ ಹತ್ತನೆಯವನೂಯೆಂದುತೋರಿಸಿದ್ದರಿಂದ||

ಆಗಲೊಂದಿದ ಭಾವಮೇ ಪ್ರತ್ಯಕ್ಷ ವೃತ್ತಿಯುಹುದು | ದ್ವೇಗವಮಳಿದುದೆ ಕೂಡೆ ಶೋಕ ನಿವೃತ್ತಿಯುಕ್ಕುಂ ||ಟೀ|| ಆ ಸಮಯದಲ್ಲಿ ಹೊಂದಿದಂಥಾ ಭಾವ ಯಾವದುಂಟೋ, ಆ ಭಾವವು ಪ್ರತ್ಯಕ್ಷ ಜ್ಞಾನವಾಗುವದು. ಆ ಪ್ರತ್ಯಕ್ಷ ಜ್ಞಾನದಿಂದ ಮನಸ್ಸಿನಲ್ಲಿ ಹುಟ್ಟಿದಂಥಾ ದುಃಖವು ಹೋದಂಥಾದ್ದೇ, ದುಃಖಕ್ಕೆ ನಿವೃತ್ತಿಯೆನಿಸಿ ಕೊಳ್ಳುತ್ತಲಿಧೆ ||೭||

ಆ ದಶಮ ಮೃತಿತಿುಪ ಶಿಲಾಕ್ಷತವಾದ ಚಿನ್ಹಮೇನಿರ | ದೇದಣಿವಿನಿಂದ ದುನಿರಂ ಕುಶತೃಪ್ತಿಯುಕ್ಕುಂ ||ಟೀ|| ಆ ದಶಮ ಪುರುಷನ ಮರಣ ವ್ಯಾಜವೆಂಬ ಕಲ್ಲಿನ ಪೆಟ್ಟಿನಿಂದ ತಗುಲಿದ ಘಾಯದ ಗುರುತು ಹ್ಯಾಗೆ ನೋಡಿದಾಗ್ಯು ಇಲ್ಲದೆ, ಆನಂದದಿಂದ ಇರೋಣವೇ, ನಿರಂಕುಶ ತೃಪ್ತಿಯೆನಿಸಿ ಕೊಂಬುದು. ... ||೮||

ಏಳು ತೆರವಾದೀ ಸದ್ವೃತ್ತವ ನೆಣಿಕೆಗೊಳಲೂ ಕ್ರಮದಿಂ | ಮೂಲ ಕಾರಣದಲ್ಲಿ ನಿಜಸುಖ ಮುಚ್ಚರಿಪುದೂ ||ಟೀ|| ಏಳುವಿಧವಾಗಿದ್ದಂಥಾ ಪೂರ್ವದಲ್ಲಿ ಹೇಳಿದ ದೃಕ್ಕನ ಕೂಡಾ ಯೆಣಿಸಿಕೊಳ್ಳಲೂ, ಕ್ರಮದಿಂದ ಮೂಲಕಾರಣವಾದ ಪದಾರ್ಥದಲ್ಲಿ (ಆನಂದೋ ಬ್ರಹ್ಮೇತಿ ವ್ಯಾಜನಾತ್) ಯಂಬುವ ಶೃತ್ಯಾರ್ಥದಿಂದ ಬ್ರಹ್ಮಾನಂದವು ಹೇಳೋಣಾಗುತ್ತಲಿಧೆ. ... ... ||೯||

ಮೂ|| ವ|| ಮುದಿತಾಂತರಂಗನಾಗದೆಂತೆನೆ. ||ಟೀ|| ಶ್ರೀಗುರುವೇ, ನೀವು ಯೆಷ್ಟು ಹೇಳಿದಾಗ್ಯು ಸಂತೋಷಯುಕ್ತವಾದ ಅಂತಃಕರಣ ವ್ಯಾಕೆ ಆಗಲಿಲ್ಲವು|| ... ... ||೧||

ಮೂ|| ಜಂಪೆ|| ಕೇಳ್ಪೆಯುವಾನಸನ್ನೃಪಾಲನಿನ್ನಯ ನಿಜವ| ನಾಲೋ

ಚಿಸಿದದುವೆಯಜ್ಞಾನವೆನಿಸುವುದೂ॥ ॥ಟೀ॥ ಕೇಳೈಯ್ಯ ಮನೋರಾಜನೇ! ನಿನ್ನ ನಿಜಸ್ವರೂಪವನ್ನು ನೀನು ಆಲೋಚನೆಮಾಡಿ ತಿಳಿಯದೆ ಯಿರೋಣ ಯಾವದುಂಟೋ, ಅದೇ ಅಜ್ಞಾನವೆನಿಸುವದು॥ .. ॥೧॥

ಯಿಲ್ಲನಾನೀಬಳಿಯೊಳಿರಲುತೋರನೆಯುಂಬ । ಖುಲ್ಲಮತಿಯಾವರಣವಿಲ್ಲಿತಿಳಿಯಲ್ಕೆ॥ ॥ಟೀ॥ ಈ ಸ್ಥಳದಲ್ಲಿ ನಾನುಯಿಲ್ಲ. ನಾನು ಯಿದ್ದಂಥಾವನಾದರೆ ಕಾಣಿಸದೆ ಹೋದೇನೆಯುಂಬುವ ದುಷ್ಟವಾದ ಬುದ್ಧಿ ಯಾವದುಂಟೋ, ಆ ಭಾವವೇ ಆವರಣ ವೆನಿಸಿಕೊಂಬುದು॥ ॥೨॥

ಸುರನಾಸುರಗನಾನುನರನಾನೆನುತಕರ್ಮ।ಕಿರವಾಗಿರುವುದೇವಿಕ್ಷೇಪವೆನಿಸುವುದು॥ ॥ಟೀ॥ ದೇವಲೋಕದಲ್ಲಿ ದೇವತೆಯಾಗಿರುತ್ತೇನೆ. ನಾನು ಪಾತಾಳಲೋಕದಲ್ಲಿ ಸರ್ಪವಾಗಿರುತ್ತಲಿದ್ದೇನೆ. ಭೂಲೋಕದಲ್ಲಿ ಮನುಷ್ಯನಾಗಿರುತ್ತೇನೆ. ನಾನೂಯೆಂದು, ಕರ್ಮಕ್ಕೆ ಕರ್ತೃವಾಗಿರೋಣ ಯಾವದುಂಟೋ, ಆ ಭಾವವು ವಿಕ್ಷೇಪವೆನ್ನಿಸಿ ಕೊಳ್ಳುತ್ತಲಿಧೆ॥ ॥೩॥

ಶೃತಿಗಳಿಂದೇಹಾದ್ಯಶುಭವಿಲಕ್ಷಣನೋರ್ವ।ಪತಿರೂಪಲಕ್ಷಣವಿಭನಾತ್ಮನಿಹನೂ॥ ॥ಟೀ॥ ವೇದವಾಕ್ಯದಿಂದಲೂ, ಶ್ರೀಗುರುಮುಖದಿಂದಲೂ, ಹೇಳಲ್ಪಟ್ಟ ವಚನಗಳಿಂದಲೂ ದೇಹಾದ್ಯನಾತ್ಮಗಳಿಂದಲೂ, ಶುಭಕರವಾದ ಸತ್ಯಜ್ಞಾನಾನಂದಾದಿ ಲಕ್ಷಣಮುಳ್ಳ ಒಬ್ಬನಾದ ಪತಿರೂಪವಾದ ಲಕ್ಷ್ಯವೈಭವಉಳ್ಳ ಆತ್ಮನಿದ್ಧಾನೆ॥ ... ॥೪॥

ಸತ್ವದಿಂದೆನೆಪರೋಕ್ಷಜ್ಞಾನಮದುನೀನೆ । ಸತ್ಯರಂಚಿನ್ಮಾತ್ರಸಾಕ್ಷಿಯುಂದರುಹೇ॥ ॥ಟೀ॥ ಸತ್ವಗುಣದಲ್ಲಿ ಕೂಡಿದ ಬುದ್ಧಿಯಿಂದ, ಪೂರ್ವೋಕ್ತಲಕ್ಷಣ ಲಕ್ಷಿತವಾದ ಆತ್ಮನು ಒಬ್ಬನಿದ್ಧಾನೆಂದು ತಿಳಿದರೆ, ಆ ಭಾವವು ಪರೋಕ್ಷಜ್ಞಾನವೆನಿಸಿಕೊಂಬುದು. ಆಮೇಲೆ ಅಪರೋಕ್ಷವಾಗಿ ತಿಳಿದಂಥಾ ಬ್ರಹ್ಮಸ್ವರೂಪವೇ ನೀನುಯೆಂದು, ನಿಜಸ್ವರೂಪವಾದ, ಚಿತ್ಸ್ವರೂಪವಾದ, ಸರ್ವಸಾಕ್ಷಿಯಾಗಿ ಯಿರುವವನು ನೀನೇಯೆಂದು ತಿಳುಹಿಸಲಾಗಿ॥ ... ... ॥೫॥

ಸಾಕ್ಷಾತ್ಕರಿಸಿದುದಪರೋಕ್ಷವಿತ್ತಿಯೆನಿಪುದು । ಪಕ್ಷೀಕರಿಸದೆನ್ನೊಳಕ್ಷಸಂತಾಪಂ॥ ॥ಟೀ॥ ಪ್ರತ್ಯಕ್ಷೀಕರಿಸಿದ ಬ್ರಹ್ಮವಿಜ್ಞಾನವು, ಅಪರೋ

ಹಜ್ಞಾನ ವೆನ್ನಿಸಿಕೊಂಬುದು. ನನ್ನಲ್ಲಿ ಇಂದ್ರಿಯಂಗಳ ಸಂಬಂಧದ ದುಃಖವು ಅಭಿಮಾನಿಸಿಬಾರವು॥ ... ... ॥೬॥

ಯೆಂದುತಿಳಿದರ್ಥತನಗೊಂದೆಶೋಕನಿವೃತ್ತಿ । ಕುಂದದಿರೆತಾಂನಿರಂಕುಶತೃಪ್ತಿಯುಕ್ಕಂ॥ ॥ಟೀ॥ ಹೀಗೆಂದು ತಿಳಿದಂಥಾ ಯಾವ ಪ್ರಯೋಜನವುಂಟೋ, ಆ ಅರ್ಥವು ತನಿಗೆ ಹೊಂದಿದಂಥಾದ್ದಾದರೆ, ಅದೇ ದುಃಖನಿವೃತ್ತಿ. ಆ ಶೋಕನಿವೃತ್ತಿಯಾದ ಭಾವವು ಯಾವಾಗಲೂ ಕಡಮೆಬೀಳದೆಯಿದ್ದರೆ ನಿರಂಕುಶ ತೃಪ್ತಿಯೆಂದು ಯೆನಿಸಿಕೊಳ್ಳುತ್ತಲಿಧೆ॥ ॥೭॥

ಮೊದಲಿಂತಿವರಬಗೆಯುಮುಟ್ಟಭಾವಿಸಿನಿತ್ಯ।ಪದವಾಗುಘನವಾದಪರವಸ್ತುವಾಗು॥ ॥ಟೀ॥ ಮೊದಲಹಾಗೆ, ಜೀವಸಪ್ತಾವಸ್ಥೆಗಳ ಪ್ರಕಾರ ಹೊಂದಿ, ಜೀವ ಸಪ್ತಾವಸ್ಥೆಗಳು ನನಗೆ ಯಿಲ್ಲವೆಂದು ಚನ್ನಾಗಿ ತಿಳಿದು ನಿತ್ಯಸ್ವರೂಪವಾದಂಥಾವನಾಗು. ಪರಿಪೂರ್ಣವಾದಂಥಾ ಪರಬ್ರಹ್ಮವಸ್ತು ನೀನಾದಂಥಾವನಾಗು॥ ... ... ॥೮॥

ಮೂ॥ ವ॥ ಇಂತೆಂದು ಸಪ್ತಾವಸ್ಥಾಲಕ್ಷಣಂ ಜ್ಞಪ್ತಿಗೋಚರಂಗೈಸಿ, ಇನ್ನೊಂದುಪ್ರಕಾರಮಂ ಪೇಳುತ್ತಿರ್ದಪನದೆಂತೆನೆ॥ ॥ಟೀ॥ ಈ ಪ್ರಕಾರವಾಗಿ ಸಪ್ತಾವಸ್ಥಾ ಮಾರ್ಗ ಯಾವದುಉಂಟೋ, ಅದು ಜ್ಞಾಪಕಕ್ಕೆ ನಿಲ್ಲುವಹಾಗೆ ಹೇಳಿ, ಇನ್ನೊಂದುರೀತಿಯಾಗಿ ಹೇಳುತ್ತಲಿದ್ದಾನೆ. ಅದು ಹ್ಯಾಗೆಅಂದರೆ॥ ... ...

ಗದ್ಯ॥ ಇತಿ ಶ್ರೀಮತ್ಸಮಸ್ತ ತತ್ವತಾತ್ವಿಕ
ವಿಚಾರಪಾರೀಣಶಾಲ್ಯ ಕ್ಷಿತಿಪಾಲಕೃಷ್ಣ
ಪ್ರಭು ವಿರಚಿತವಾದ ನಿಜದೀಪಿಕಾ
ರತ್ನಾಖ್ಯಗ್ರಂಥದಲ್ಲಿ ಪಂಚಭ್ರಮನಿ
ವಾರಣಪದ್ಧತಿಯೊಳಗಣಸಪ್ತಾ
ವಸ್ಥಾಲಕ್ಷಣ ಸಂಪೂರ್ಣಂ.

(ಇತಿ ಪದ್ಧತಿ ೨೫ ಸಪ್ತಾವಸ್ಥಾಲಕ್ಷಣ ಪೇಳಿದಿಲ್ಲಿಗೆ ಮಂಗಳಂ)

---

## ೩೫ ಪಂಚಭ್ರಮನಿವಾರಣ ಪದ್ಧತಿಯೊಳಗಣ ಸಮಾಧಿಲಕ್ಷಣ ಪ್ರಾರಂಭವು.

ಮೂ॥ ವ॥ ಸಂಕಲ್ಪನಿರ್ವಿಕಲ್ಪಗಳೆಂಬವೃತ್ತಿಗಳಿಂ ಸಮಾಧಿಯೊಂದೇದ್ವಿವಿಧಮಾಗಿರ್ಪುದು. ಆ ದ್ವಿವಿಧದೊಳಾದ್ಯಮಾದ ಸವಿಕಲ್ಪ ಸಮಾಧಿಯೇದೃಶ್ಯಾನುವಿಧ, ಶಬ್ದಾನುವಿಧಮೆಂದೀತೆರನಾಗಿರ್ಪುದು ಈಸಮಾಧಿತ್ರಯಮಭ್ಯಂತರಬಾಹ್ಯಭೇದದಿಂಷಟ್ಪ್ರಕಾರಮಾಗಿರ್ಪುದು. ಈಸಮಾಧಿಷಟ್ಕಕ್ಕೆ ಮನನನಿಧಿಧ್ಯಾಸಂಗಳೇ ಸಖಂಗಳಾಗಿರ್ಪವವರಲ್ಲಿ, ಮನನಕ್ಕೆ ಯುಕ್ತಿತರ್ಕಾನುಮಾನಂಗಳೇ ಮಿತ್ರರಾಗಿರ್ಪರು. ಅವರಸ್ಥಿತಿಯೆಂತೆನ್ನೆ, ಬಾಧ್ಯಬಾಧಕ ರೂಪಮಾದುದೇಯುಕ್ತಿ. ಬಾಧ್ಯನಿವಾರಣ ಚಿಂತೆಯೇ ತರ್ಕ, ಗುಣದತ್ತಣಿಂ ಗುಣಿಗ್ರಹಣವೇ ಅನುಮಾನ, ಯರಡನೆಯ ನಿಧಿಧ್ಯಾಸಕ್ಕೆ॥ ॥ಟೀ॥ ಮನೋವೃತ್ತಿಯಿಂದ ಕೂಡಿ ಯಿರುವದೇ ಸವಿಕಲ್ಪಸಮಾಧಿಯು. ಮನೋವೃತ್ತಿ ಶೂನ್ಯಮಾದುದೇ ನಿರ್ವಿಕಲ್ಪಸಮಾಧಿಯು. ಸಮಾಧಿಯೊಂದೇ ಸಬೀಜವೆಂದು, ನಿರ್ಬೀಜವೆಂದು ಯರಡುಪ್ರಕಾರವಾಗಿ ಯಿರತ್ತಲಿವೆ. ಆ ಯರಡುವಿಧ ಸಮಾಧಿಗಳಲ್ಲಿ, ಮೊದಲನೆಯದಾದ ಸವಿಕಲ್ಪ ಸಮಾಧಿಯು ದೃಶ್ಯಾನು ವಿಧವೆಂದು, ಶಬ್ದಾನುವಿಧವೆಂದು ಯರಡುಪ್ರಕಾರವಾಗಿರ್ಪುದು. ದೃಶ್ಯಾನುವಿಧ, ಶಬ್ದಾನುವಿಧ, ನಿರ್ವಿಕಲ್ಪವೆಂಬ ಸಮಾಧಿತ್ರಿತಯವು, ವಳಗೆ ಹೊರಗೆಯೆಂಬ ಭೇದದಿಂದ ಆರುವಿಧವಾಗಿಯಿಧೆ. ಈ ಸಮಾಧಿಗಳ ಆರಕ್ಕೆ, ಮನನ, ನಿಧಿಧ್ಯಾಸಂಗಳೇ ಸ್ನೇಹಿತರಾಗಿ ಯಿರುತ್ತಲಿಧ್ದಾರೆ. ಆಮನನ ನಿಧಿಧ್ಯಾಸಂಗಳೇ ಮನನವೆಂಬುದಕ್ಕೆ ಯುಕ್ತಿತರ್ಕ ಅನುಮಾನಂಗಳೇ ಸಖಂಗಳಾಗಿರ್ಪರು. ಆ ಯುಕ್ತಿತರ್ಕ ಅನುಮಾನಂಗಳ ಸ್ಥಿತಿ ಹ್ಯಾಗೆಯೆಂದರೆ, ತನ್ನ ಅನುಭವವನ್ನ ತಿರಸ್ಕರಿಸಿ ಬಾಧಿಸುವಂಥಾ ಯುಕ್ತಿಯನ್ನ ಪುನಹ ತಿರಸ್ಕರಿಸಿ, ಬಾಧಿಸುವಹಾಗೆ ಹೇಳುವದೇಯುಕ್ತಿ. ತನ್ನ ಅನುಭವಕ್ಕೆ ಬಂದುಬಾಧೆ ಬಂದರೆ ಆ ಬಾಧೆಯನ್ನು ಹೋಗಲಾಡಿಸಿಕೊಳ್ಳುವದೇತರ್ಕ. ವಸ್ತುವಿನಲ್ಲಿಯಿರುವ ಗುಣದಿಂದ, ಆ ಗುಣವುಳ್ಳವಸ್ತುವು ಇಂಥಾಗುಣ ಉಳ್ಳಂ

ಥಾದ್ದುಯೆಂದು ತಿಳಿಯುವದೇ ಗುಣಿಗ್ರಹಣವು. ಅನುಮಾನ, ಯರಡನೆ ಯದಾದಂಥಾ ನಿಧಿಧ್ಯಾಸವೆಂಬುವದಕ್ಕೆ॥ ... ॥೧॥

ಮೂ॥ ವ॥ ಮಂತ್ರಯೋಗ, ಸ್ಪರ್ಶಯೋಗ, ಭಾವಯೋಗ, ಅಭಾವಯೋಗ, ಮಹಾಯೋಗಂಗಳೇ ಮಿತ್ರರಾಗಿ ಇರ್ಪರು. ಅವರ ಸ್ಥಿತಿಯೆಂತೆನೆ, ಪ್ರಾಣಾನುಸಂಧಾನವೇ ಮಂತ್ರಯೋಗಾ. ಮನಃಪವನಂಗಳಗೂಧ್ರ್ವಗತಿಯೇ ಸ್ಪರ್ಶಯೋಗಾ ವಿಶ್ವರೂಪ ಚಿಂತನವೇ ಭಾವಯೋಗಾ. ನಿರುಪಾಧಿಕವಸ್ತು ಚಿಂತನವೇ ಅಭಾವಯೋಗಾ. ಜ್ಞಾನಾಜ್ಞಾನಂಗಳಿಗೆ ನಿಲುಕದ ಅವಿನಾಶಿಯಾದ ಆತ್ಮನಲ್ಲಿ ಮನೋಲಯವೇ ಮಹಾಯೋಗಾ ॥ಟೀ॥ ಮಂತ್ರಯೋಗವೆಂಬ, ಸ್ಪರ್ಶಯೋಗವೆಂಬ, ಭಾವಯೋಗವೆಂಬ, ಅಭಾವಯೋಗವೆಂಬ, ಮಹಾಯೋಗವೆಂಬವೇ ಯರಡನೆಯ ನಿಧಿಧ್ಯಾಸಕ್ಕೆ, ಈ ಪಂಚಯೋಗಂಗಳೆ ಸಹಾಯಕರಾಗಿ ಇರುತ್ತಲಿದ್ದಾರೆ. ಆ ಯೋಗಗಳು ಇರೋಣ ಹ್ಯಾಗೆಯಂದರೆ,ಸಮಷ್ಟಿಯಾದ ಓಂ ಯಂಬ ಬ್ರಹ್ಮಸ್ವರೂಪವಾದ ಏಕಾಕ್ಷರ ಮಂತ್ರವನ್ನು ಜಪ ಮಾಡುವದೇ ಮಂತ್ರಯೋಗವೆನಿಸುವದು. ಅಧಾರ ಸ್ವಾಧಿಷ್ಠಾನಾದಿ ಚಕ್ರಗಳ, ಮನೋ ಮಾರುತಂಗಳ ಏಕೀಕರಿಸಿ ಮೇಲಕ್ಕೆ ಬ್ರಹ್ಮರಂಧ್ರ ಪರ್ಯಂತರಕ್ಕು ಏರಿಸುವದೇ, ಸ್ಪರ್ಶಯೋಗವೆನಿಸುವದು. ವಿಶ್ವರೂಪನಾದ ಈಶ್ವರನ ಧ್ಯಾನವೇ, ಭಾವಯೋಗವೆನಿಸುವದು. ಉಪಾಧಿ ರಹಿತವಾದ ಸನ್ಮಾತ್ರ ವಸ್ತು ಧ್ಯಾನವೇ, ಅಭಾವಯೋಗವೆನಿಸುವದು. ಇಧೆಯನ್ನುವದಕ್ಕು, ಇಲ್ಲವೆನ್ನುವದಕ್ಕು, ಯರಡಕ್ಕು ಶಿಕ್ಕದೆ ನಾಶವಿಲ್ಲದೆ ಇರುವ ಚಿನ್ಮಾತ್ರ ಸ್ವರೂಪವಾದ ಆತ್ಮನಲ್ಲಿ ಮನೋವೃತ್ತಿಲೀನತ್ವವೇ ಮಹಾಯೋಗವೆಂದು ಯೆನಿಸಿಕೊಳ್ಳುತ್ತಲಿಧೆ. ... ॥೨॥

ಮೂ॥ ವ॥ ಮತ್ತಮಾಮನನಕ್ಕೆ. ಸಂಶಯ ತಿರಸ್ಕಾರವೇ ಶರೀರ। ನಿಧಿಧ್ಯಾಸಕ್ಕೆ ವಿಜಾತೀಯ ತಿರಸ್ಕಾರವೇ ಶರೀರ। ಇವರೀರ್ವರ ಶರೀರಂಗಳಿಗೆ ವಿವೇಕ ನೇರಕ್ಷಕನು। ವಿವೇಕನಿಗೆ ಚಿತ್ತಶುದ್ಧಿಯೇ ಶಾಯಿ। ಈತನು ದಿಸಿದಾಕ್ಷಣವೇ ಆಕೆಯು ಕೃತಕೃತ್ಯಳಪ್ಪಳು। ಈ ಮನನ ನಿಧಿಧ್ಯಾಸಂಗಳಿಂ, ಈ ಯುಕ್ತ್ಯಾದಿ ಮಂತ್ರಯೋಗಾದಿಗಳಿಂ, ವಿವೇಕ ಚಿತ್ತಶುದ್ಧಿ

ಗಳಿಂ; ಕೂಡಿದ ಷಟ್ಸಮಾಧಿಗಳಂ ಪೇಳಲ್ ಗ್ರಂಥ ವಿಸ್ತಾರವಾಗುವದಾಗಿ ಈ ಆರು ಸಮಾಧಿಗಳಭ್ಯಂತರ ದೃಶ್ಯಾನುವಿಧ ಸವಿಕಲ್ಪ ಸಮಾಧಿಯೊಂದನ್ನೇಪೇಳುವೆನು ||ಟೀ|| ಮತ್ತು ಮನಸ್ಸಿನಲ್ಲಿ ಮನನಮಾಡುವದಕ್ಕೆ ಇದು ಆಹುದೋ ಅಲ್ಲವೋ ಯಂಬ ಸಂಶಯ ವಿಲ್ಲದೆ ಇರೋಣವೇ ಶರೀರನು. ಚಿತ್ತವೃತ್ತಿ ಏಕಾಗ್ರತೆಗೆ ಸಜಾತೀಯ ಪ್ರತ್ಯಾಯ ಅಂಗೀಕಾರವಾದ ಮೇಲೆ, ವಿಜಾತೀಯ ಪ್ರತ್ಯಾಯ ತಿರಸ್ಕಾರವೇ ಶರೀರ. ಪೂರ್ವದಲ್ಲಿ ಹೇಳಿದಂಥಾ ಇಬ್ಬರ ಶರೀರಗಳಿಗೆ ಚನ್ನಾಗಿ ವಿಚಾರಿಸಿ ತಿಳಿಯುವ ವಿವೇಕನೇ ಸಂರಕ್ಷಕನು. ಈ ವಿವೇಕನಿಗೆ ಚಿತ್ತ ಪರಿಶುದ್ಧಿಯೇತಾಯಿ. ಈ ವಿವೇಕನೆಂಬ ಮಗನು ಯಾವಾಗ ಹುಟ್ಟಿದನೋ, ಆ ಕ್ಷಣದಲ್ಲಿ ಆ ಚಿತ್ತಶುದ್ಧಿಯಂಬ ಪೆಸರುಳ್ಳ ತಾಯಿ ಮಾಡಲ್ಪಟ್ಟಂಥಾ ಕಾರ್ಯ ಮಾಡಿದವಳಾಗುವಳು. ಈ ಪೂರ್ವೋಕ್ತವಾದ ನಿಧಿಧ್ಯಾಸದಿಂದಲೂ, ಪ್ರಥಮದಲ್ಲಿ ಹೇಳಲ್ಪಟ್ಟ ಯುಕ್ತಿ ಮೊದಲಾದ ಮಂತ್ರಾದಿ ಪಂಚಯೋಗಗಳಿಂದಲೂ, ವಿವೇಕ ಚಿತ್ತಶುದ್ಧಿಗಳಿಂದಲೂ, ಕೂಡಿದಂಥಾ ಷಟ್ಸಮಾಧಿಗಳನ್ನ ಹೇಳಿದರೆ ನವಗ್ರಂಥ ಬಹುಳ್ಯವಾಗುವದೆಂಬ ಭಯದಿಂದ, ಈ ಆರು ಸಮಾಧಿಗಳ ಆಭ್ಯಂತರ ಭೇದದಿಂದ, ದೃಶ್ಯಾನುವಿಧವೆಂಬಸವಿಕಲ್ಪ ಸಮಾಧಿಯೊಂದನ್ನೇ ಹೇಳುತ್ತಲಿದ್ದೇನೆ. ... ||೩||

ಮೂ|| ಜಂಪೆ|| ಆಲಿಸ್ಯೆನಿನ್ನ ಸುತರಾದಕಾಮಾದಿಗಳ | ಲೋಲವೃತ್ತಿಯನಿದಿರೊಳಿಂದುವಂತಿಟ್ಟು|| ||ಟೀ|| ಕೇಳೈಯ ಮನಃಪ್ರಭುವೇ! ನಿನ್ನ ಪುತ್ರರಾದ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವೆಂಬುವರ ಚಾಂಚಲ್ಯ ವೃತ್ತಿಯನ್ನು, ನಿನಗೆ ಅಭಿಮುಖವಾಗಿರುವಹಾಗೆ ಯಿಟ್ಟುಕೊಂಡು|| ... ... ||೧||

ತಗ್ಗುವೆದಹೆಚ್ಚುವದತಲ್ಲಣಿಸುವದನವರ| ಮುಗ್ಗುವದನಿಲ್ಲುವದವೊಳೆವದಸಿಡಿವದಾ|| ||ಟೀ|| ಕಡಮೆಯಾಗುವದನ್ನು, ಹೆಚ್ಚುವದನ್ನು, ತಲ್ಲಣ ಗೊಂಬುವದನ್ನು, ನಿಲ್ಲುವದನ್ನು, ಹುಟ್ಟುವದನ್ನು, ಚೆದರುವದನ್ನು ಯಂಬವೃತ್ತಿಗಳು, ಕಾಮೇಚ್ಛಾ ಪೂರ್ತಿಯಾಗದೆ ಹೋದಲ್ಲಿ, ತಗ್ಗುವದು ಮೊದಲಾದ ವೃತ್ತಿವಿಶೇಷಗಳು ಹುಟ್ಟುವವು|| ... ||೨||

ಸುಣ್ಣಕಲ್ಲಿಗೆಜಲದಸೋಂಕಿನಂತಿಹುದೊಂದು, ಕಣ್ಣಿದುಯ್ಯಾಲೆಮಣಿಯುಗತಿಯೊಳಿಹುದೊಂದು॥ ॥ಟೀ॥ ಸುಟ್ಟಂಥಾ ಸುಣ್ಣದಕಲ್ಲಿಗೆ ಜಲ ಸೋಂಕಿದರೆ ಹ್ಯಾಗೆ ಯಿರುತ್ತಲಿಧೆಯೋ, ಹಾಗೆ ಯಿರುವುದೊಂದುಹಗ್ಗಗಳಕಟ್ಟಿ ಹುಯ್ಯಾಲೆ ಹಾಕಿಯಿರುವ ಮಣಿಯುಹಾಗೆಇರುವುದೊಂದು॥೩॥

ಇಷುವೇಗದಂತೆತಾನೆಸೆವದೊಂದೀಮೂರು । ಸುಷುಮಸಂಸ್ಕಾರವೇ ಶೋಭಿಸುತ್ತಿಹುದೂ॥ ॥ಟೀ॥ ಬಾಣವನ್ನು ಬಿಟ್ಟರೆ ಹ್ಯಾಗೆ ವೇಗವಾಗಿಹೋಗುತ್ತಲಿಧೆಯೋ, ಆದರೋಪಾದಿಯಲ್ಲಿ ಯಿರುವದು ಒಂದು. ಈ ಮೂರರ ಉತ್ಕೃಷ್ಟವಾದ ಕಾಂತಿ ಸಂಸ್ಕಾರವೇ ಪ್ರಕಾಶಿಸುತ್ತಲಿರುತ್ತಲಿಧೆ॥ ... ... ... ॥೪॥

ವರ್ತಿಪವು ಕಾಮಾದಿ ವರ್ಗವರ್ತನೆಗಳಲಿ । ಕರ್ತವ್ಯವೇನಿನಗೆ ಕಂಡಿವರ ಬಗೆಯಾ ॥ಟೀ॥ ಹಿಂದೆ ಹೇಳಿಯಿರುವ ಪ್ರಕಾರ ಪ್ರವರ್ತಿಸುತ್ತಲಿರುವವು. ಈ ಕಾಮಾದಿಗಳ ಪ್ರವರ್ತನೆಯಲ್ಲಿ, ಇವರ ಬಗೆಯನ್ನು ಕಂಡಂಥಾವನಾಗಿ, ಪುನಶ್ಚ ಮಾಡುವಂಥಾ ಕೆಲಸವುಂಟೆ. ॥೫॥

ಚಿನ್ಮಾತ್ರದಿಂದದೇ ಶಿದ್ಧಮಾಗಾನೆಂದು । ಸನ್ಮಾತ್ರದಿಂದರಿದ ವಿಚ್ಛಿಂನನಾಗಿ ॥ಟೀ॥ ಅರಿತಂಥಾದ್ದು ಯಾವದುಂಟೋ, ಅದೇ ಚಿನ್ಮಾತ್ರ ಸ್ವರೂಪದಿಂದ ಆ ಚಿನ್ಮಾತ್ರ ಸ್ವರೂಪವೇ, ಪ್ರಸಿದ್ಧವಾಗಿ ನಾನೂಯೆನ್ನುತ್ತ ಬಹುಮಾನದಿಂದ ತಿಳಿದು ವಿಚ್ಛೇದ ರಹಿತನಾಗಿ. ॥೬॥

ಇರುತಿರಲು ಚರಿಸದೇ ಕುರಿತು ವಿಷಯವನಪ್ಪು । ದುರಿಕರ್ಪೂರವನುಂಡ ತೆರಮಾತ್ಮನಲ್ಲಿ ॥ಟೀ॥ ಆ ಅರಿವೆ ನಾನೆನ್ನುತ್ತ ಎಡೆಬಿಡದೆ ಚಲಿಸದೇ ಇರುತ್ತಲಿರಲೀಕಾಗಿ, ಅಗ್ನಿಯು ವುರಿಯು ಕರ್ಪೂರವನ್ನು ಸುಟ್ಟು ಬಿಟ್ಟಹಾಗೆ, ಆತ್ಮಸ್ವರೂಪದಲ್ಲಿ ಆಗುತ್ತಲಿಧೆ. ॥೭॥

ಮೂಲ॥ ಚಂಪಕ ಮಾಲಾವೃತ್ತಂ॥ ವಿಕಸಿತಮಾದುಪಾಧಿ ಮುಖದಿಂ ಫಲವೊಪ್ಪುದು ಬುದ್ಧಿಗರ್ಭನಾ । ಧಕತೆನಿಮೀಲನೋಪದಿ ನಿಮಿತ್ತದಿ ನೋಡೆ ಚಿದೇಕರೂಪಮೇ । ಸುಕರದಿ ತೋರ್ಪುದೆಂದನುಭವಜ್ಞರ ನಾರತಮಾಡಿಕೊಂಬುದಾ । ಧಿಕ ಸುಖಮಲ್ಲಿದಾತ್ಮಗತ ಮುಚ್ಛಲಿಸುತ್ತಿಹುದೇಕ ವೃತಿಯೋಳ್ ॥ಟೀ॥ ಪ್ರಕಾಶಮಾಗಿರುವ ಅಂತಃಕರ

ಣೋಪಾಧಿಯಿಂದ ಸಕಲಾರ್ಥಗಳಿಗು ಸಾಧಕ ರೂಪವಾದ ಫಲವು, ಬುದ್ಧಿಗೆ ಆಗುತ್ತಲಿಧೆ. ಆ ಉಪಾಧಿಯಾದ ಅಂತಃಕರಣವು ಲಯಿಸಿಹೋದಮೇಲೆ, ಪೂರ್ವೋಕ್ತ ಚಿತ್ತಿನ ಸ್ವರೂಪ ಒಂದೇಸುಲಭವಾಗಿ ತೋರುತ್ತಲಿಧೆಯೆಂದು, ಆತ್ಮಾನುಭವಿಗಳಾದಂಥಾವರು ನಿರಂತರವು ಮಾತನಾಡಿಕೊಳ್ಳುತ್ತಲಿದ್ದಾರೆ. ಯೇನೆನ್ನುತ್ತ ಆಡಿಕೊಳ್ಳುತ್ತಾರೆಅಂದರೆ, ಏಕಾಗ್ರತೆಯಾದ ಅಂತಃಕರಣ ವೃತ್ತಿಯಲ್ಲಿ ಪ್ರಾರ್ಥಿಸಲ್ಪಟ್ಟ ಬ್ರಹ್ಮಾನಂದವು ಉತ್ಕೃಷ್ಟವಾಗಿ ವ್ಯಾಪಿಸಿಕೊಂಡು ಯಿರುತ್ತಲಿಧೆ॥

ಮೂ॥ ವ॥ ಪೂರ್ವೋಕ್ತಷಡ್ವಿಧಲಿಂಗಂಗಳೊಳ್ ಸದನ್ಯವಾದ ಪ್ರಪಂಚವಿಲ್ಲವಾದುದರಿಂ, ಸರ್ವ ಸಾಮಾನ್ಯಜ್ಞಾನವೇ ಫಲಮೆನಿಸಿಕೊಂಬುದಾಗಿ, ಮೇಷಾಫಲಾನುಸಾರದಿಂ ಕಲ್ಪನೆಯಲ್ಲದೆ, ಕಲ್ಪನಾನುಸಾರವಾಗಿ ಫಲಮಿರದಾಗಿ, ಸರ್ವ ಸಂಕಲ್ಪ ವಿಲೀನಾವಸ್ಥೆಯಾದ ಸಮಾಧಿಯೊಳ್ನಿನಗೇನನುಭವಂ ಬಂದುದಾಯರ್ಥಮುಂ ನಿನ್ನ ಮುಖದಿಂ ಕೇಳಿದಲ್ಲದೆನಗೆ ಮತಿಸಮಾಧಾನ ಮಾಗದೆನಲ್ಕೆ, ಎಲ್ಯೆ ವಿಚಾರನೇ॥

॥ಟೀ॥ ಪೂರ್ವದಲ್ಲಿ ಹೇಳಿದಂಥಾ ಉಪಕ್ರಮ, ಉಪಸಂಹಾರಾದಿ ಷಡ್ವಿಧ ಲಿಂಗಂಗಳಲ್ಲಿ ಹೇಳಲ್ಪಟ್ಟ, ಸದ್ರೂಪ ಬ್ರಹ್ಮಕ್ಕಿಂತಲೂ, ಇತರವಾದ ಪ್ರಪಂಚವಿಲ್ಲವಾಗಿ ಯಿರುವದರಿಂ, ಸರ್ವಜಗಜ್ಜನ್ಯ ಪದಾರ್ಥಗಳಲ್ಲಿ ಸರ್ವ ಸಮಾನಜ್ಞಾನವೇ ಫಲವುಯೆನ್ನಿಸಿ ಹೇಳಿಸಿಕೊಳ್ಳುತ್ತಿಧೆಯಾಗಿ, ಮತ್ತು ಫಲಸ್ವರೂಪವಾದ ಜ್ಞಾನಾನುಸರಣೆಯಿಂದ ಕಲ್ಪನೆಯೇಹೊರ್ತು, ಕಲ್ಪನಾನುಸರಣೆಮಾಡಿಕೊಂಡು ಫಲವಿರದಾಗಿ, ಸಕಲವಾದ ಸಂಕಲ್ಪಗಳು ಲಯವಾದ ಸಮಾಧಿಯಲ್ಲಿ ನಿನಗೆಯೇನು ಅನುಭವಂಬಂತೋ, ಆ ಅನುಭವವು ನಿನ್ನ ಮುಖವಚನದಿಂದ ನಾನು ಕೇಳಿದಲ್ಲದೆ, ನಂನಬುದ್ಧಿಗೆ ಸಂತೋಷವಾಗಿ ಸಮಾಧಾನ ವಾಗುವದಿಲ್ಲವೆಂದು ಶ್ರೀಗುರು ಹೇಳಿದ್ದರಿಂದ, ಶಿಷ್ಯನಾದ ಮನಃಪ್ರಭುವು ಉತ್ತರವಂ ಹೇಳುತ್ತಿದ್ದಾನೆ॥ ॥೧॥

ಮೂ॥ ವ॥ ದಾರಿದ್ರ್ಯಂಗರ್ಥಮಿತ್ತರೆ। ಕಾಮುಖಂಗೆಕಾಂತೆಯನಿತ್ತರೆ। ಕ್ಷುಧಿತಂಗನ್ನಮನಿತ್ತರೆ। ನಿದ್ರಾಳುವಿಂಗೆಶಯನಮನಿತ್ತರೆ। ಯುತ್ತಲಾನುಪೇಕ್ಷಿಸುವನೆ। ಸಂಸಾರಾರ್ತನಾಗಿಮುಮುಕ್ಷುವಾದೆನಗೆನೀಂ। ತತ್ವಮಂಸ

ಕೃದಾವೃತ್ತಿಯುಸುರೆದ್ದೊಡಂಅವಸ್ಥಾಭೇದದಿಂದುತ್ತಮನೆ । ಮರಳಿಪೇಳಿ ದೊಡಂಮರೆಯುಲಾಪನೆ।ಪರಾಕ್ರಾಂತಮತಿಯಿಂದಿರ್ಪನೆ।ಸಾಕುಬಿಡುಬಿಡಾ ದೊಡಂ॥ ॥ಟಿ॥ ರಿಕ್ತನಾದವನಿಗೆ ದ್ರವ್ಯವನ್ನುಕೊಟ್ಟರೆ, ಯವ್ವನದಿಂದ ಇಂದ್ರಿಯಂಗಳಲ್ಲಿ ಬಲವಿರುವ ಕಾಮಾತುರನಿಗೆ ಸೌಂದರ್ಯವತಿಯಾದ ವನಿ ತೆಯನಿತ್ತರೆ,ಕ್ಷುತ್ತಿನಿಂದಬಳಲಿದಂಥಾವನಿಗೆ ಪಳ್ಳಶಾಲ್ಯಾನ್ನಪಕೊಟ್ಟರೆ,ನಿ ದ್ರೆಬರುವಂಥಾವನಿಗೆವಳ್ಳಿಹಾಸಿಕೆಯನ್ನುಹಾಸಿಕೊಟ್ಟರೆ, ಯೆಲ್ಲಾದರೂ ಅ ಪೇಕ್ಷೆಯಿಲ್ಲದೆ ಬಿಟ್ಟುಬಿಡುವನೆ,ಜನನಮರಣರೂಪಸಂಸಾರದಿಂದಪೀಡಿತ ನಾಗಿಮೋಕ್ಷೇಚ್ಛೆಯುಳ್ಳಂಥಾವನಿಗೆನೀನುಯುತಾರ್ಥವಾದ ಬ್ರಹ್ಮಸ್ವರೂ ವನ್ನು, ಒಂದಾವರ್ತಿ ಹೇಳಿದಾಗ್ಯು, ಅವಸ್ಥಾಂತರ ಮಾರ್ಗದಿಂದ ಹೇಳಿ ದಂಥಾದ್ದನ್ನೇ, ಮತ್ತೂ ಮತ್ತು ಹೇಳಿದಾಗ್ಯು ಮರೆತುಬಿಡುವನೆ. ಇತರ ಬುದ್ಧಿಯಿಂದ ಆಕ್ರಮಿಸಿ ಕೊಳ್ಳಲ್ಪಟ್ಟ ಬುದ್ಧಿಯಿಂದ ಇದ್ದೀನೆ. ಸಾಕು ಬಿಡು, ವಿತರ್ಕಿಸುವದುಯಾಕೆ. ಆದಾಗ್ಯು॥ ... ॥೨॥

ಕಂದಾ॥ ಇಂಥಾಸಾಧನಸಂಪ । ತ್ತಂತಾಳ್ದೀಜನ್ಮಶುದ್ಧಿಗೋಸುಗ ಮಾಗಲ್।ಸಂತತಕರ್ಮಾನುಷ್ಠಾ ।ನಂತೀರುವದುಂಟೆಬಿದಿಯುಪರಮಾಯು ವಿಗಂ॥ ॥ಟೀ॥ ಈಗ ಹುಟ್ಟಿಯಿರುವ ಜನ್ಮವು ಪರಿಶುದ್ಧವಾಗಿ ತಿರಿಗಿ ಹುಟ್ಟದೇಯಿರುವದಕ್ಕೆ, ಪೂರ್ವೋಕ್ತವಾದ ಬ್ರಹ್ಮಜ್ಞಾನ ನಿಷ್ಠರೂಪವಾ ದಂಥಾ ಸಾಧನಾತಿಶಯವನ್ನು ಹೊಂದಿದಂಥಾದ್ದು ಆಗುತ್ತಲಿರಲಾಗಿ, ಇಂ ಥಾ ಸಾಧನಾ ಸಂಪತ್ತಿಯನ್ನು ಬಿಟ್ಟು, ನಿರಂತರವು ಯಾಗಾದಿ ಕರ್ಮಗ ಳ ಮಾಡಿದುದರಿಂದ ಬ್ರಹ್ಮನ ಪರಮಾಯುಃ ಪ್ರಮಾಣ ಪರ್ಯಂತವು ತೀ ರುವದಿಲ್ಲ॥ ... ... ... ॥೧॥

ವ॥ ಸಂಸಾರಬಂಧಮೆನಲದಂಕೇಳಿ॥ ॥ಟೀ॥ ಕರ್ಮ ಮಾಡಲ್ಪ ಟ್ಟಾಗ್ಯು, ಜನನ ಮರಣರೂಪ ಸಂಸಾರಬಂಧವು ಬಿಡುವದಿಲ್ಲವೆಂದಾ ಮಾತನ್ನುಕೇಳಿ॥ ... ... ... ॥೧॥

ಮೂ॥ ಉತ್ಪಲಮಾಲಿಕಾವೃತ್ತಂ॥ ಈಪಟುಪಂಚವಿಂಶತಿಸುಪದ ತಿಯೊಳ್ಮನಮಿಟ್ಟರೀಜಗ।ದ್ರೂಪಮೆತೋರ್ಪುದೇಮೊದಲಿನಂತೆಭವಾಂ ಕುರಶಕ್ತಿಯಿರ್ಪುದೇ ।ವ್ಯಾಪಿನಿಯಾದಮಾಯೆಯುಲಿತಗ್ಗಿದಕಾಮಮುಖಾ

ದಿಗಳ್ಗಿದು।ಸ್ವಾಧಗಣಪ್ರದಾನಬಲಮಿಪ್ಪುದೆಸೊಕುವಿತರ್ಕಮಾತರಂ॥

॥ಟೀ॥ ಈಪ್ರಕಾರವಾದ ಅಜ್ಞಾನವನ್ನು ಹೋಗಲಾಡಿಸುವದಕ್ಕೆ ಸಾಮರ್ಥ್ಯವಾದ ಇಪ್ಪತ್ತೈದುಮಾರ್ಗಗಳಲ್ಲಿ ಮನಸ್ಸು ಯಿರಿಸಿ, ಅನುಭವಕ್ಕೆ ತಂದುಕೊಂಡರೆ, ಈಪ್ರಪಂಚದ ರೂಪವು ಪೂರ್ವದಹಾಗೆ ತೋರುವದಿಲ್ಲವು ಯೆಂದು ಹೇಳಿದ ಹಾಗಾಯಿತು. ಪುನಶ್ಚ ಉತ್ಪತ್ತಿಯಾಗುವ ಮೊಳೆಕೆಗೆ ಶಕ್ತಿಯಿದ್ಧೀತೇ, ಇರಲಾರದು. ವ್ಯಾಪಿಸಿಕೊಂಡುಇರುವ ಬಲವಿಲ್ಲದ ಮಾಯೆಯಲ್ಲಿ ತಗ್ಗಿಹೋದಂಥಾ ಕಾಮಕ್ರೋಧಾದಿ ಅರಿಷಡ್ವರ್ಗಕ್ಕೆ ದುಷ್ಟವಾದಂಥಾ ಸಂತಾಪ ಸಮೂಹವನ್ನು ಕೊಡುವಂಥಾ ಬಲವಿದ್ಧೀತೇ, ಇರಲಾರದು. ವಳಗೆಹುಟ್ಟಿದಂಥಾವ್ಯೂಹಯಿಸೊಕುಸೊಕು॥೧॥

ಮೂ॥ ಜಂಪೆ॥ ಅಂದಮಾತಿಗೆಹರ್ಷವೈದಿಪೂರ್ವೋಕ್ತಾರ್ಥ।ಬೃಂದಮಂಮನನದಿಂಪ್ಪೊಂದುಗೆತಂದೂ॥ ॥ಟೀ॥ ಹೀಗೆನ್ನುತ್ತಾ ಹೇಳಿದಮಾತಿಗೆ ಅಧಿಕವಾದ ಸಂತೋಷವಂಹೊಂಧಿ, ಪೂರ್ವದಲ್ಲಿ ಹೇಳಿದಂಥಾ ಅರ್ಥಸ್ಸಮೂಹವನ್ನು, ಮನನದಿಂದ ಹೊಂದುಗಡೆಗೆತಂದು ॥೨॥

ಅನುಭವಮೆಸೆಯಲಾತ್ಮನಲಿಧನ್ಯನಾಗಿವೊದ।ಲನುಭವಿಸದಿಹಸುಖವನನುಭವಿಸಿಹಿಂಗ್ಗೀ॥ ॥ಟೀ॥ ಆತ್ಮಾನುಭವವು, ತನ್ನಲ್ಲಿ ತನಗೆ ಬಂದದ್ದರಿಂದ, ಕೃತಾರ್ಥನಾಗಿ, ತಾನು ಪೂರ್ವದಲ್ಲಿ ಅನುಭವಿಸದೇ ಯಿರುವಂಥಾ ಸುಖದ ಅನುಭವವನ್ನು, ಅನುಭವಿಸಿದಂಥಾವನಾಗಿ, ಮಹಾ ಸಂತೋಷಯುಕ್ತನಾಗಿ ಹಿಂಗ್ಗಿ॥ ... ... ॥೨॥

ಕನಕತೆಯುಸಿದ್ಧರಸಗತಿಯಿಂದಕಾಬೆರ್ಣನ್ನು।ವಿನಯಿಸಿದಪ್ಪೇಲ್ಲಿನ್ನವಿದ್ಯಾಮುಖದಲ್ಲಿ॥ ॥ಟೀ॥ ಕಬ್ಬಿಣವು ಸಿದ್ಧವಾದಂಥಾರಸದ ಸಂಬಂಧದಿಂದ ಸುವರ್ಣತ್ವ ಹೊಂದಿದಹಾಗೆ, ನೀನು ಹೇಳಿದಂಥಾ ಬ್ರಹ್ಮಜ್ಞಾನವೆಂಬ ಆತ್ಮ ವಿದ್ಯಾಮುಖದಿಂದ॥ ... ... ॥೩॥

ಕೃತಕೃತ್ಯನಾದೆಪಶುಪತಿಯೆನನಗೇನೀನು। ಪತಿತನೆನ್ನೆಹಿಂಗಹಿದ್ಯೈಭವಸಿಂಧುವಿಂದಾ॥ ॥ಟೀ॥ ಮಾಡಲ್ಪಟ್ಟಂಥಾ ಕಾರ್ಯಮಾಡಿದವನಾದ. ನಾನು ನನಗೆ ಪ್ರತ್ಯಕ್ಷವಾಗಿರುವಂಥಾ ಶಿವನೇ ನೀನು. ಉತ್ಪತ್ತಿಯೆಂಬ ಸಮುದ್ರದಲ್ಲಿ ಬಿದ್ದು ಇರುವಂಥಾ ನನ್ನನ್ನು ಮೇಲಕ್ಕೆ ಯೆತ್ತಿದಂಥಾವನಾದೆ।೪॥

ಎಂದಾತನಪದಾರವಿಂದದೊಳ್ತಲೆಯಭರ | ದಿಂದಾಗಲೊಂದಿಸಲವಂ ದೋತ್ಸವದಲೀ॥ ॥ಟೀ॥ ಹೀಗೆಂದು ಆ ಶ್ರೀಗುರುವಿನ ಪಾದ ಕಮಲಗಳಲ್ಲಿ, ತನ್ನ ಶಿರಸ್ಸಿನ ಭಾರವನ್ನು ಹೊಂದಿಸಿ, ಸಾಷ್ಟಾಂಗ ದಂಡಪ್ರಣಾಮವಂ ಮಾಡಿದಂಥಾವನಾಗಲಾಗಿ, ಶ್ರೀಗುರುವು ಅಧಿಕವಾದಂಥಾ ಆನಂದವೆಂಬ ಉತ್ಸಾಹದಲ್ಲಿ॥ ... ... ॥೫॥

ಮೂ॥ ವೆ॥ ವಿಚಾರ ಪುರೋಹಿತನಾತ ನುಪಚಾರ ಪರಿಶುದ್ಧತೆಯುಂ ಕಂಡು | ಪುಲಕಾಂಕಿತ ವಿಗ್ರಹನಾಗಾಲಿಂಗಿಸಿ ಫಲಿತಾರ್ಥನಾದೆಯೆಂದಾ ಮನೋನೃಪನಂ, ಭ್ರೂಮಧ್ಯವೆಂಬ ವಾರಣಾಸಿಪುರಕ್ಕೆ ತಂದು, ತ್ರಿಕೂಟಸಿಂಹಾಸನದೊಳ್ ಪರಮಹಂಸ ವಿಹಾರಯೋಗ್ಯಮಾದ ವಿದ್ಯಾ ಸಾಮ್ರಾಜ್ಯಚಕ್ರವರ್ತಿಯೆಂದು ಬ್ರಹ್ಮಾಭಿಷೇಕಮಂ ನಿವೃತ್ತಿ ಶಿವಭಕ್ತಿ ಮಹೀಷಿ ಸಮೇತಮಾಗಿ ಪ್ರಕಟೀಕರಿಸುತಿರ್ದಪನದಂತೆನ. ॥೧॥

ಟೀ॥ ವಿಚಾರನೆಂಬ ಪುರೋಹಿತನು, ಆ ಮನೋನೃಪನ ಸಂಬಂಧವಾದ ಆತ್ಮಾನುಭವವಾದ ಪರಿಶುದ್ಧತ್ವವನ್ನೋಡಿ, ರೋಮಾಂಚಕಂಚುಕಿತ ಶರೀರನಾಗಿ, ಗಾಢಾಲಿಂಗನವಂ ಮಾಡಿಕೊಂಡು, ಫಲಿಸಿದಂಥಾ ಪ್ರಯೋಜನ ಉಳ್ಳಂಥಾವನಾದೆಯೆಂದು, ಆ ಮನಃಪ್ರಭುವನನ್ನು ಹುಬ್ಬಿನ ಮಧ್ಯ ಪ್ರದೇಶವೆಂಬ ಕಾಸಿ ಪಟ್ಟಣಕ್ಕೆ ಕರದುಕೊಂಡುಬಂದು, ತ್ರಿಕೂಟವೆಂಬ ಸಿಂಹಾಸನದಲ್ಲಿ ಪರಬ್ರಹ್ಮಾನುಭವಿಗಳಾದ ಪರಮಹಂಸರಿಗೆ ಕ್ರೀಡಾಯೋಗ್ಯವಾದಂಥಾ ಬ್ರಹ್ಮವಿದ್ಯವೆಂಬ, ಏಕಚಕ್ರಾಧಿಪತ್ಯ ಚಕ್ರವರ್ತಿಯನ್ನು ಮಾಡುವದಕ್ಕೋಸ್ಕರ; ಬ್ರಹ್ಮನಿಷ್ಠನೆಂದು, ಪಟ್ಟಾಭಿಷೇಕವನ್ನು, ಶಿವಭಕ್ತಿ, ನಿವೃತ್ತಿಯರೆಂಬ ಭಾರ್ಯರ ಸಮೇತಮಾಗಿ ಪ್ರಸಿದ್ಧವಂ ಮಾಡುತ್ತಲಿದ್ದಂಥಾವನಾದನು. ಅದು ಹ್ಯಾಗೆ ಅಂದರೆ.

ಮೂಲ॥ ತ್ರಿಪುಡೆ॥ ವಿಮಲಮಾದನಭೋಬಲವಪರಿವೇಷ್ಟಿಸಿರ್ಪ ಸಹಸ್ರದಳಗಳ|ಕಮಲಮಿರ್ಪುದುನೋಡೆಪಳುಕಿನಕಲಶದಂತೆ ॥ಟೀ॥ ನಿರ್ಮಲವಾದ ಆಕಾಶದ ಬಲದಿಂದ ಸುತ್ತಲ್ಪಟ್ಟು ಇರುವಂಥಾ, ಸಾವಿರ ಯೆಸಳುಗಳುಳ್ಳ ಕಮಲ ಇರುತ್ತಲಿಧೆ. ಕಂಡರೆ ಸ್ಫಟಿಕದ ಕಲಶದಹಾಗೆ॥

ಆ ಕಮಲ ಮಧ್ಯದಿ ಸುಧಾಮಯಮಾದ ಶಶಿಮಂಡಲ ಮಿಹುದು ಸು

ಷು । ಮನಾಕಣಗಳಿಂದ ಮೃತಮಯುದಿಂ ಮಾಸ್ವಮಾಗೀ ॥ಟೀ॥ ಅಪೂರ್ವೋಕ್ತವಾದ ಕಮಲ ಮಧ್ಯದಲ್ಲಿ ಅಮೃತ ಪ್ರಾಚುರ್ಯವಾದ ಚಂದ್ರಮಂಡಲವಿರುತ್ತದೆ. ಉತ್ಕೃಷ್ಟವಾದ ಕಾಂತಿ ಲೇಶಗಳಿಂದಲೂ, ಅಮೃತ ಸ್ವರೂಪದಿಂದಲೂ, ಪೂಜಿಸಲ್ಪಡುವದಕ್ಕೆ ಯೋಗ್ಯವಾಗಿಯಿಧೆ॥

ಸಾವಿರದ ತುಂತುರ್ವನಿಗಳಾ ।ಸಾರಮಿರ್ಪುದದಕ್ಕೆ ರವಿಚಂ । ದ್ರಾಷಸಥನಾಡಿ ವಿವರ ಬಂಧಂ ವಿರಚಿಸೀ ॥ಟೀ॥ ಸಹಸ್ರವಾದ ತುಂತುರ್ವನಿಗಳ ಧಾರಾಸಂಪಾತ ಇರುತ್ತಲಿಧೆ ಈಡಾ, ಪಿಂಗಳಗಳೆಂಬ ಸೂರ್ಯನಾಡಿ ಚಂದ್ರನಾಡಿಗಳ, ಸೂರ್ಯನಿಗೆ, ಚಂದ್ರನಿಗೆ ಸ್ಥಾನಗಳಾದಂಥಾ ನಾಡಿಗಳ ವಿಂಗಡವಾದ ಬಂಧವಾಡಿ. ... ॥೩॥

ದಹನ ವಾಹಿನಿಯಾದ ನಾಡೀ ದ್ವಾರಮಂ ಮುಚ್ಚಿರ್ದ ಕುಂಡಲಿ । ಯಹಿಯನೆಬ್ಬಿಸಿ ಬಾಹ್ಯ ವೃತ್ತಿಯು ನ್ಯದದಿರಲೂ ॥ಟೀ॥ ಅಗ್ನಿಯಂನು ವಹಿಸಿದಂಥಾ, ಸುಷುಮ್ನ ನಾಡೀದ್ವಾರವನ್ನು ತನ್ನ ಹೆಡೆಯಿಂದಮುಚ್ಚಿಕೊಂಡು ಇರುವಂಥಾ ಕುಂಡಲಿ ಸರ್ಪದ ಹೆಡೆಯನ್ನು, ಯೋಗಧಾರಣೆಯಿಂದ ಹೇಳುವ ಹಾಗೆ ಮಾಡಿ, ಹೊರಗಣ ವೃತ್ತಿ ವ್ಯಾಪಾರವನ್ನು ಹೊಂದದೇ ಇರಲು. ... ॥೪॥

ಆದುದಾಗ ಮಹಾಭಿಷೇಕ ಮುದ ಮೃತ ಮಾಗಂಶು ಮತ್ಪರೆ । ಐದಿದ ಖಿಲಾವಯುವ ಮಧುರ ಸ್ವಾದುಮಂತೆ ॥ಟೀ॥ ಯಾವಾಗ ಸುಷುಮ್ನ ದ್ವಾರಾಪ್ರವೇಶ ವೃತ್ತಿಯಾವಾಗ ಆಯಿತೊ, ಆವಾಗಲೇ ಉತ್ಕೃಷ್ಟವಾದ ಬ್ರಹ್ಮಾಭಿಷೇಕವಾಯಿತು. ಆ ಅಭಿಷೇಕವು ಮೋಕ್ಷಸ್ವರೂಪವಾಗಿ ಕಾಂತಿಯುಳ್ಳಂಥಾದ್ದಾದ ಪರವಾಗಿ, ಸಮಸ್ತ ಅವಯುವಗಳಿಗೂ ಹೊಂದಿದ ಮಧುರ ರಸದ ರುಚಿಯು ಹಾಗೆ. ... ॥೫॥

ವಾಸನಾಕಲ್ಮಷ ವಳಿಯೆ ನಿಜವಾದ ಸುಖಮೋ ಪ್ಪೊಣ್ಮಿದುದುವಿಧಿ । ವಾಸವಾದೀ ಪದದಿ ಕಾಣದ ವಾಚ್ಯ ಸೌಖ್ಯಂ ॥ಟೀ॥ ಇಂದ್ರಿಯವಾಸನೆಯಂಬ ಮಾಲಿನ್ಯವಿಲ್ಲದೆ ಹೋದಾಗ, ಆತ್ಮಾನಂದವೇ ಹುಟ್ಟುತ್ತಲಿಧೆ. ಬ್ರಹ್ಮ ಲೋಕದಲ್ಲಿಯೂ, ದೇವೇಂದ್ರ ಲೋಕ ಮೊದಲಾದ ಲೋಕಂಗಳಲ್ಲಿ ಇಲ್ಲದೇ ಇರುವಂಥಾ, ವಾಕ್ಯದಿಂದ ಹೇಳಲಾಗ ಕೂಡ

ದಿರುವೆಂಥಾ, ಮನಸ್ಸಿನಿಂದಲೂಹಿಸುವದಕ್ಕೆ ಅಶಕ್ಯವಾದಂಥಾ ಸುಖವೋ॥

ಬಂದುದಾಗ ಮನೋನ್ನೃಪಗೆ ಮುನಿವಂದ್ಯನೀಯುಮನಿಸುವ ಸಾಮ್ರಾಜ್ಯಂದಿ ವಿಜರೊಗ್ಗಾಗಿ ಸೇವಿಸೆನಿಂದರಾಗಾ ॥೬॥ ಮನಃ ಪ್ರಭುವಿಗೆ ಪ್ರಾಪ್ತವಾದಂಥಾದ್ದಾಯಿತು. ಮುನಿಗಳಿಂದ ನಮಸ್ಕರಿಸುವದಕ್ಕೆ ಯೋಗ್ಯವಾದಂಥಾ, ಏಕಚಕ್ರಾಧಿಪತ್ಯನ. ದೇವತೆಗಳೆಲ್ಲಾ ಗುಂಪಾಗಿ ಬಂದು ಸೇವೆ ಮಾಡುವದಕ್ಕೆ, ಆ ಸಮಯದಲ್ಲಿ ಪ್ರತ್ಯಕ್ಷವಾಗಿ ನಿಂತಂಥಾವರಾದರು. ... ॥೭॥

ಮೂ॥ ವ॥ ಪಂಚಮಹಾ ಭೂತಾಧಿ ದೈವತಂಗಳಾದ, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರ್ಬಂದು ಸರ್ವಕಾಮಾಪ್ತಿ ರಸ್ತುಯೆಂದಭಿವಂದಿಸಿ ಬಲದಲ್ಲಿ ಕುಳಿತರು। ಗುಣತ್ರಯಾಧಿ ದೈವತಂಗಳಾದ ಭವಮೃಡಹರರ್ಬಂದು, ಅಷ್ಟಸಿದ್ಧಿರಸ್ತು ಎಂದಾಶೀರ್ವದಿಸಿ ಎಡದೋಳ್ಕುಳಿತರು। ಅಂತಃಕರಣಾಧಿ ದೈವತಂಗಳಾದ, ಚಂದ್ರ, ಚತುರ್ಮುಖ, ಕ್ಷೇತ್ರಜ್ಞ, ತ್ರಿಪುರಾಂತಕರ್ಬಂದು, ಐಶ್ವರ್ಯಮಸ್ತು ಎಂದು ಪಟಿಸಿ ಪಶ್ಚಾದ್ಭಾಗದಲ್ಲಿ ಕುಳಿತರು। ಜ್ಞಾನೇಂದ್ರಿಯಾಧಿ ದೇವತೆಗಳಾದ. ದಿಗ್ವಾಯರ್ಕವರುಣಾಶ್ವಿನೀ ದೇವರ್ಕಗಳೊಡನೆ, ಕರ್ಮೇಂದ್ರಿಯಾಧಿ ದೇವತೆಗಳಾದಅಗ್ನೀಂದ್ರೋಪೇಂದ್ರ ಮೃತ್ಯು ಪ್ರಜಾಪತಿಗಳ್ಬಂದು ಪರಾಕ್ರಮೋಸ್ತುಯೆಂದ್ಪರಸಿ ಪುರೋಭಾಗದಲ್ಲಿ ಕುಳಿತರು। ಪೂರ್ವಾದಿ ದಿಕ್ಕುಗಳಲ್ಲಿ ದಿಕ್ಪಾಲಕರೊಡನೆ ಸೂರ್ಯಾದಿ ರಾಹ್ವಂತ್ಯವಾದ ಗ್ರಹಂಗಳು ಬಂದುನಿಂದು ಜಯಜಯವೆಂದರು। ಪಾತಾಳವಾಸಿಗಳಾದ ವಿಜ್ಞಾನ ನಿಧಿಗಳಾದ ಶೇಷವಾಸುಕಿಪ್ರಮುಖರಾದ ನಾಗೇಂದ್ರರ್ಬಂದು ನಿಂದು ಪ್ರಸ್ಫುರ ಪ್ರಸ್ಫುರ ಯೆಂದರು। ಮಧ್ಯಮ ಲೋಕವಾಸಿಗಳಾದ ವಿಜ್ಞಾನ ನಿಧಿಗಳಾದ ಸ್ವಾಯಂಭುವಾದಿ ಮನುಗಳು ಬಂದುನಿಂದು ಕೀರ್ತಿರ್ಮಾಭವಭವಯೆಂದರು। ಪೂರ್ಧ್ವಲೋಕವಾಸಿಗಳಾಗಿ ವಿಜ್ಞಾನ ನಿಧಿಗಳಾದ ಮರೀಚ್ಯಾದಿ ನವಪ್ರಜೇಶ್ವರರೊಡನೆ ಸನಕಸನಂದಾದಿಗಳು ಬಂದು ನಿಂದು ಕಾಮಾದ್ಯರಿವರ್ಗಂಜಹಿಜಹಿಯೆಂದರು। ಇವರಲ್ಲದೆಮೇರ್ವಾದಿ ಕುಲಾಚಲಂಗಳುಂ, ಸ್ವಾದೋದಕಾದಿ ಸಮುದ್ರಂಗಳುಂ, ಜಂಬು ದ್ವೀಪಾದಿ ಸಪ್ತದ್ವೀಪಂಗಳುಂ, ಅತಲಾದ್ಯಂಡಾಂತಮಾದ ಸಪ್ತಪಾತಾಳ ಲೋಕಾಭಿಮಾನಿ ದೇವತೆಗಳುಂ

ಭೂವ್ಯಾದ್ಯೂರ್ದ್ವ ಬ್ರಹ್ಮಾಂಡ ಕಟಾಹಾಂತ್ಯವಾದ ಸಪ್ತೋರ್ದ್ವ ಲೋಕಾಭಿಮಾನಿ ದೇವತೆಗಳುಂಬಂದುನಿಂದು,ಅವ್ಯಾಹತ ಪ್ರತಾಪವಾ ಭೂಯೋಭೂತ್ವಾ ಚಿರಂ ತಿಷ್ಠ ತಿಷ್ಠ ಯುಂದರು! ಇದಲ್ಲದೆ ಸ್ವರೂಪ ಸಾಕ್ಷಾತ್ಕಾರಮಂ ಪಡೆದು ಪ್ರಾರಬ್ಧಾನುಸಾರಿಯಾಗಿ ಬಂದ ನಾನಾವಿಧ ದೇಹಂಗಳಂ ಧರಿಸಿರ್ದ ಖದ್ಯೋತಾದಿ ಕೀಟಂಗಳುಂ, ಗರುಡಾದಿಪಕ್ಷಿಗಳುಂ, ಸಿಹ್ಮಾದಿ ಮೃಗಂಗಳುಂ, ಇಕ್ಷ್ವಾಕು ಪ್ರಮುಖ ಮನುಷ್ಯರುಂ, ಭೂತಪ್ರೇತ ಪಿಶಾಚ ಯಕ್ಷರಾಕ್ಷಸಾದಿಗಳುಂ, ಗಂಧರ್ವ ಸಿದ್ಧ ವಿದ್ಯಾಧರ ಚಾರಣ ಅಪ್ಸರೋವಸು ವಿಶ್ವದೇವಾದಿಗಳುಂ ಬಂದುನಿಂದು ಶರದಾಂ ಶತಂ ಜೀವಜೀವೆಯೆಂದರು। ಆ ಕಾಲದೊಳ್ ನಾನಾಲೋಕವಾಸಿಗಳಾದ ಮಾರ್ದಂಗಿಕಾದಿಗಳ ಕೈಯಲ್ಲಿರ್ಪ ಭೇರಿ ಭಾಂಕಾರಂಗಳಿಂ, ಕಾಂಸ್ಯ ತಾಳಾದ್ರಿ ಕೇಂಕಾರಂಗಳಿಂ, ನಾಗಸ್ವರಾದಿ ಸುಷುರೋದಿತ ತಾರಾಧ್ವನಿಗಳಿಂ, ರುದ್ರವೀಣಾದಿ ತಂತ್ರೀ ಸಮುದ್ಗೀತ ನಿಕ್ವಾಣಧ್ವನಿಗಳಿಂ, ಮೃದುಮಧುರ ಗೀತಾಕರ ದೇವಾಂಗನಾ ಕಂಠಧ್ವನಿಗಳಿಂ, ಪಾತಕ ಮಾಗದಾದಿಗಳ ಪಾಂಚಾಲಾದಿಶಯ್ಯಾನು ಬದ್ಧ ಬಿರುದಾವಳಿ ಶ್ಲೋಕಧ್ವನಿಗಳಿಂ, ಭೂನಭಶ್ಚಕ್ರವಾಳವೆಲ್ಲಂ ಶಬ್ದ ಬ್ರಹ್ಮಮಯುವಾಗುತ್ತಿರೆ, ಸಾಮಾಜಿಕರಾದಂದಿನ ಸಕಲ ವಿಬುಧೇಶ್ವರಾದಿಗಳ ವಿಲೋಕನ ಪ್ರಕಾಶದಿಂ, ಬ್ರಹ್ಮಾಂಡ ಮಂಡಲವೆಲ್ಲಂ ತಾರಕ ಬ್ರಹ್ಮಮಯುವಾಗುತಿರೆ, ದೇವಾಸುರ ಗುರುಗಳಾದ ಗುರುಕವಿಗಳ ನಿರ್ಮಲ ದೃಷ್ಟಿಯಿಂ ಪರಿಶುದ್ಧವಾದ ನಿಮಿಷೋನ್ಮೇಷಂಗಳಿಲ್ಲದಧರ್ಾವಲೋಕನದಿಂ ದಂತಮುರ್ಖಿಸಾಗಿ ಪರಮಾತ್ಮನೊಳಗೆ ಲಜ್ಜಿತವಾದ ಚಿತ್ತವುಳ್ಳ ಹುಣ್ಣಿಮೆಯ ಲಗ್ನವಂ ನಿರೀಕ್ಷಿಸಿಕೊಂಡಿರ್ದ ಜೀವನ್ಮುಕ್ತಿ ರಮಣೀಮಣಿಯು, ಸ್ವಯಂವರವಂ ಮಾಡಿದಳಾ ನೃಪನನದೆಂತೆನೆ॥

॥ಟೀ॥ ಪೃಥ್ವಿ, ಅಪ್ಪು, ತೇಜೋ, ವಾಯು; ಆಕಾಶವೆಂಬ ಪಂಚಮಹಾಭೂತಂಗಳಿಗೆ ಅಧಿದೇವತೆಗಳಾದಂಥಾ ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರುಗಳುಬಂದು ಯೆದುರಾಗಿ ನಿಂತುಕೊಂಡು, ಸಕಲವಾದ ಕಾಮಗಳನ್ನು ಏಕಕಾಲದಲ್ಲಿಯೇ ಅನುಭವಿಸಿದಂಥಾವ ನಾಗುಯೆಂದು ಆಶೀರ್ವಾದವಂಮಾಡಿ ಬಲದ ಭಾಗದಲ್ಲಿ ಕುಳಿತರು. ಸತ್ವ ರಜ

ಸ್ತಮೋಗುಣಂಗಳಿಗೆ ಅಧಿದೈವತಂಗಳಾದ, ಭವ, ಮೃಡ, ಹರರುಬಂದು. ಇಷ್ಟಸಿದ್ಧಿ ಯಾಗಲೀಯೆಂದು ಯಡದ ಭಾಗದಲ್ಲಿ ಕುಳಿತರು. ಮನೋ, ಬುದ್ಧಿ, ಚಿತ್ತ, ಹಾಂಕಾರಗಳಿಗೆ ಅಧಿದೈವತಂಗಳಾದ, ಚಂದ್ರ, ಚತುರ್ಮುಖ, ಕ್ಷೇತ್ರಜ್ಞ, ತ್ರಿಪುರಾಂತಕರುಬಂದು ಐಶ್ವರ್ಯವಾಗಲೀಯೆಂದು ಹೇಳಿ, ಹಿಂದುಗಡೆಯಲ್ಲಿ ಕುಳಿತುಕೊಂಡರು. ಶ್ರೋತ್ರ, ತ್ವಕ್ಕು, ನೇತ್ರ ರಸನ, ಘ್ರಾಣೇಂದ್ರಿಯಗಳೆಂಬ ಜ್ಞಾನೇಂದ್ರಿಯ ಪಂಚಕಗಳಿಗೆ ಅಧಿದೇವತೆಗಳಾದ, ದಿಕ್ಕು, ಮಾರುತ, ಸೂರ್ಯ, ವರುಣ, ಅಶ್ವಿನಿದೇವತೆಗಳ ಕೂಡಲೆ; ವಾಕ್ಪಾಣಿ ಪಾದಗುಹ್ಯ ಪಾಯುಗಳೆಂಬ ಕರ್ಮೇಂದ್ರಿಯ ಪಂಚಕಗಳಿಗೆ ಅಧಿದೇವತೆಗಳಾದ, ಅಗ್ನಿ, ಇಂದ್ರ, ಉಪೇಂದ್ರ, ಪ್ರಜಾಪತಿ, ಮೃತ್ಯುಗಳೆಂಬ ಕರ್ಮೇಂದ್ರಿಯ ಅಧಿದೇವತೆಗಳುಬಂದು ಪರಾಕ್ರಮೋಸ್ತು ಯೆಂದು ಹರಸಿಪುರ ಪ್ರದೇಶದಲ್ಲಿ ಕುಳಿತರು. ಮೂಡಲು ಮೊದಲಾದ ದಿಕ್ಕುಗಳಲ್ಲಿಯೂ ಇರುವ ದಿಕ್ಪಾಲಕರಕೂಡಾ, ಸೂರ್ಯಾದಿ ರಾಹ್ವಾಂತಮಾದ ನವಗ್ರಹಂಗಳುಬಂದು ನಿಂದು, ಸರ್ವೋತ್ಕೃಷ್ಟವಾಗಿ ಯಿರುಯೆಂದು ಆಶೀರ್ವಾದವನ್ನು ಮಾಡಿದರು ಪಾತಾಳಲೋಕದಲ್ಲಿ ಯಿರುವಂಥಾ ವಿಶೇಷಜ್ಞಾನ ನಿಧಿಗಳಾದಂಥಾ ಆದಿಶೇಷ ವಾಸುಕಿಮೊದಲಾದ ನಾಗಾಧಿಪತಿಗಳು ಬಂದುನಿಂದು ಪ್ರಕಾಶಿಸು, ಪ್ರಕಾಶಿಸುಯೆಂದರು. ಮನುಷ್ಯಲೋಕ ವಾಸಿಗಳಾದ ವಿಶೇಷಜ್ಞಾನನಿಧಿಗಳಾದ ಸ್ವಾಯಂಭುವೇ ಮೊದಲಾದ ಹದಿನಾಲ್ಕು ಮನುಗಳೆಂಬ ಜನಗಳುಬಂದುನಿಂದು, ಕೀರ್ತಿಯುಳ್ಳವನಾಗು, ಆಗೂಯೆಂದರು. ಪೂರ್ಧ್ವಲೋಕ ವಾಸಿಗಳಾದ ವಿಜ್ಞಾನ ನಿಧಿಗಳಾದ ಮರೀಚ್ಯಾದಿ ನವ ಬ್ರಹ್ಮರೊಡನೆ ಸನಕಸ ನಂದನಾದಿಗಳುಬಂದುನಿಂದು, ಕಾಮನೆ ಮೊದಲಾದಶತೃ ಸಮೂಹವನ್ನು, ಜೈಸು, ಜಯಿಸೂಯೆಂದರು. ಇವರಲ್ಲದೆ, ಮೇರುವೆ ಮೊದಲಾದ ಸಪ್ತಕುಲಪರ್ವತಂಗಳು, ಜಂಭೂದ್ವೀಪಾದಿ ಸಪ್ತದ್ವೀಪಂಗಳನ್ನು, ಅತಲ ಮೊದಲಾಗಿ ಅಂಡವೇ ಕಡೆಯಾದಸಪ್ತಲೋಕಾಭಿಮಾನಿ ದೇವತೆಗಳನ್ನು, ಭೂಮಿ ಮೊದಲಾಗಿಬ್ರಹ್ಮಾಂಡ ಕಟಾಹ ಅಂತ್ಯವಾದ ಪೂರ್ಧ್ವಾದಿ ಸಪ್ತ ಲೋಕಾಭಿಮಾನಿ ದೇವತೆಗಳು ಬಂದುನಿಂದು ಭಾರಿಭಾರಿಗು ಅಪ್ರತಿಹತ

ವಾದಂಥಾ ಪರಾಕ್ರಮವಂತನಾಗಿ ಬಹುಕಾಲ ಇರು, ಇರೂಯೆಂದರು. ಇದಲ್ಲದೆ ಬ್ರಹ್ಮ ಸ್ವರೂಪ ಸಾಕ್ಷಾತ್ಕಾರವಾಗಿ, ಅಂಥಾ ಸ್ವರೂಪವೇ ನಾನೂಯೆಂದು ತಿಳಿದು ಕೊಳ್ಳದೇ ಇದ್ದದ್ದರಿಂದ, ಪ್ರಾರಾಬ್ಧ ಕರ್ಮಾನುಸಾರವಾಗಿ ಬಂದ ನಾನಾವಿಧ ದೇಹಗಳ ಧರಿಸಿಕೊಂಡು ಇರುವ ಖದ್ಯೋತಾದಿ ಕೀಟಂಗಳು, ಗರುತ್ಮಾಂತ ಮೊದಲಾದ ಪಕ್ಷಿಗಳು, ಸಿಹ್ಮ ಮೊದಲಾದ ಮೃಗಂಗಳು, ಇಕ್ಷ್ವಾಕು ಮೊದಲಾದ ಮನುಜರು, ಭೂತ ಪ್ರೇತ ಪಿಶಾಚ ಯಕ್ಷರಾಕ್ಷಸರು, ಗಾಂಧರ್ವ ಸಿದ್ಧ ವಿದ್ಯಾಧರ ಚಾರಣಾಪ್ಸರೋವಸು ವಿಶ್ವೇದೇವತೆಗಳು, ಬಂದು ನಿಂದು, ನೂರುವರುಷ ಬದುಕು, ಬದುಕೂ ಯೆಂದರು. ಆ ಸಮಯದಲ್ಲಿ ನಾನಾವಿಧ ಲೋಕವಾಸಿಗಳಾದ ಮಾರ್ದಂಗಿಕಾದಿಗಳ ಕೈಯಲ್ಲಿರ್ಪ, ಭೇರೀ ಝಾಂಕಾರಂಗಳಿಂದಲೂ, ಕಾಂಸ್ಯತಾಳಾದಿ ಕ್ರೇಂಕಾರ ಧ್ವನಿಗಳಿಂದಲೂ, ನಾಗಸ್ವರ ಮೊದಲಾದ ವಾದ್ಯ ವಿಶೇಷಗಳಿಂದಲೂ, ರುದ್ರ ವೀಣೆ ಮೊದಲಾದ ವೀಣಾತಂತಿಗಳಿಂದ ಹುಟ್ಟಿದಂಥಾ ನಿಕ್ವಾಣ ಧ್ವನಿಗಳಿಂದಲೂ, ಕೋಮಲವಾಗಿ ಮನೋಹರವಾದಂಥಾ ಸಂಗೀತ ಹಾಡುವಂಥ ದೇವಾಂಗನಾ ಕಂಠ ಧ್ವನಿಗಳಿಂದಲೂ, ಸ್ತೋತ್ರ ಪಾಠಕಮಾಗದಾರಿಗಳು ಮೊದಲಾದವರುಗಳ ಪಾಂಚಾಲಶಯ್ಯನು ಬದವಾದ ಶ್ಲೋಕಧ್ವನಿಗಳಿಂದಲೂ, ಭೂಮ್ಯಾಂತರಿಕ್ಷ ಮಂಡಲವೆಲ್ಲವೂ ನಾದ ಬ್ರಹ್ಮಮಯವಾಗುತ್ತಿರಲಾಗಿ, ಸಭೆಯಲ್ಲಿ ಇರುವಂಥಾ ಆ ಕಾಲದ ದೇವತಾಧಿಪತಿಗಳ ಅವಲೋಕನ ಪ್ರಕಾಶದಿಂದ ಬ್ರಹ್ಮಾಂಡ ಮಂಡಲವೆಲ್ಲವೂ, ತಾರಕ ಬ್ರಹ್ಮಮಯ ಪ್ರಕಾಶವಾಗುತ್ತಿರಲಾಗಿ, ಆ ಕಾಲದಲ್ಲಿ ದೇವತೆಗಳಿಗೂ, ರಾಕ್ಷಸರುಗಳಿಗೂ, ಗುರುಗಳಾದಂಥಾ ಬೃಹಸ್ಪತಿ, ಶುಕ್ರರೆಂಬ ಪರಮಾಲಿನ್ಯ ರಹಿತವಾದ ದೃಷ್ಟಿಗಳಿಂದಲೂ, ಪರಮ ಪರಿಶುದ್ಧವಾದ ಮುಕುಳಿನ ವಿಕಸನ ವಿಲ್ಲದ ಅರೆಗಂಣಿನ ನೋಟದಿಂದಲೂ, ಒಳಗಿರುವ ಆತ್ಮಾಭಿಮುಖವಾಗಿ ಪರಬ್ರಹ್ಮದಲ್ಲಿ ತಗುಲಿದ ಚಿತ್ತವುಳ್ಳ, ಪೌರ್ಣಮಾದಿ ದೃಷ್ಟಿಯಾದ ಹುಣ್ಣಿಮೆಯ ಲಗ್ನವಂ ನೋಡಿಕೊಂಡಿರ್ದ ಜೀವನ್ಮುಕ್ತಿಯೆಂಬ ಪ್ರೌಢಾಂಗನಾಮಣಿಯು ತನ್ನಿಷ್ಟಕ್ಕೆ ತಾನೇ, ಆ ಮನೋ

ಭೂಪಾಲನನ್ನು ವರಿಸಿದಂಥಾವಳಾದಳು. ಅದುಹ್ಯಾಗೆ ಅಂದರೆ ||೧||

ಮೂಲ|| ಜಂಪೆ|| ಉದಯಾಚಲಾಗ್ರದೊಳಗುದಿಸಿ ದಿನಮಂಡಲ ವ | ಚದರದೇಕಾಂತಿ ಮೇಲೊದಗಿ ನಿಂತಂತೆ ||ಟೀ|| ಉದಯಪರ್ವತದ ಶಿಖರದಲ್ಲಿ ಹುಟ್ಟಿದಂಥಾ ಸೂರ್ಯಮಂಡಲವಂ ಬಿಡದೆ ಕಾಂತಿ ಮೇಲಾಗಿ ಹೊಂದಿ ನಿಂತಿರುವದು ಹ್ಯಾಗೋಹಾಗೆ. ... ||೧||

ಕಾರ್ತಿಕ ದರಾಕೆಯಲಿ ಕಲಿತ ರಾತ್ರೆಯೊಳಿಂದು | ಮೂರ್ತಿಯು ಸುಧಾಕಲೆಯು ಮುದ್ದಾಡಿದಂತೆ ||ಟೀ|| ಕಾರ್ತೀಕ ಮಾಸದಲ್ಲಿ ಇರುವ ಪೌರ್ಣಿಮದಲ್ಲಿ ಒಪ್ಪುತ್ತಿರುವಂಥಾ ರಾತ್ರೆಯಲ್ಲಿ, ಚಂದ್ರನ ಶರೀರವು, ಪೂರ್ಣ ಅಮೃತ ಕಲೆಯು ಹೊಂದಿದಂತೆ. ... ||೨||

ಕುಂದನದ ಪದಕದಲಿ ಕೂಡಿಸಿದ ಮಾಣಿಕ್ಯ | ಬಿಂದು ರುಚಿಯಾಸ್ಥಲವ ಬೆಳಗುತಿರುವಂತೆ ||ಟೀ|| ಪದಕದಲ್ಲಿ ಕುಂದಣದಿಂದ ಕೆತ್ತಿದ ಬಿಂದುವ್ಯೋಪಾದಿಯಲ್ಲಿ ಇರುವ ಮಾಣಿಕ್ಯದ ಕಾಂತಿಯು, ಆ ಪ್ರದೇಶವ ಪ್ರಕಾಶವನ್ನು ಹ್ಯಾಗೆ ಮಾಡುತ್ತಲಿಧೆಯೋ ಹಾಗೆ. ||೩||

ಪೊಂದಾವರೆಯು ಪೊಕ್ಕು ಪೊರಡುವಳಿ ಮಂಡಲದಿ | ಮಂದಾನಿಲ ಸ್ಪೃಷ್ಟಿಯ್ಯೆ ಪತ್ತುವಂತೇ ||ಟೀ|| ಪೊನ್ನಿನ ತಾವರೆ ಕಮಲವನ್ನು ಹೊಕ್ಕಂಥಾದ್ದಾಗಿ, ಪುನಹಾ ಹೊರಡುವಂಥಾ ಭೃಂಗಗಳ ಸಮೂಹಕ್ಕೆ, ಶೈತ್ಯಮಾಂದ್ಯ ಸೌರುಭ್ಯಯುಕ್ತವಾದ ವಾಯುವಿನ ಸ್ಪರ್ಶವು ಶರೀರಕ್ಕೆ ಅಂಟಿದ ಹಾಗೆ. ... ... ||೪||

ಯಲವದೊಳು ತಿರುತಿರುಗಿ ಬಳಲಿ ಬಸವಳಿದ ಶುಕ | ಗಳಿಗೆ ಬಾಳೆಯ ಬನದ ನೆಳಲೊಂದಿದಂತೇ ||ಟೀ|| ಬೂರಗದ ವನದಲ್ಲಿ ಸಂಚಾರ ಮಾಡೀ ಮಾಡಿ ಆಯಾಸಪಟ್ಟು, ಹಸಿವು ತೃಷೆಗಳಿಂದ ಬಳಲಿಕೆ ಹುಟ್ಟಿ ಇರುವ ಗಿಳಿಗಳಿಗೆ ಫಲಿಸಿ ಇರುವ ಕದಳೀವನದಛ್ಛಾಯೆಯು ಪ್ರಾಪ್ತವಾದಂತೆ. ... ... ||೫||

ಮರುಭೂಮಿಯಲಿನೊಂದ ಮಾನವಗೆ ಕರ್ಪೂರ | ಪರಿಮಳದ ಪಂನೀರ ಪಾನವಾದಂತೆ ||ಟೀ|| ಜಲವಿಲ್ಲದ ಚೌಳು ಭೂಪ್ರದೇಶದಲ್ಲಿ

ಸಂಚಾರವಮಾಡಿ ಕಷ್ಟಪಟ್ಟು ದಾಹವನ್ನು ಹೊಂದಿರುವ ಮನುಷ್ಯನಿಗೆ, ಪಚ್ಚೆ ಕರ್ಪೂರದಿಂದ ಪರಿಮಳಿಸುವ ಹಾಗೆ ಮಾಡಿದ ಪನ್ನೀರಿನ ಪಾನವು ದೊರಕಿದಂತೆ. ... ... ||೬||

ಇಷ್ಟವಿರಹಾಗ್ನಿಯಿಂ ಕಷ್ಟಪಟ್ಟವಗೆ ಸಿಪಿ । ವಿಷ್ಟನ ದಯಾಪೂರ್ತಿ ದೃಷ್ಟಿ ಬಿಂದ್ದತೆ ||೭|| ಜನನ ಮರಣರೂಪವಾದ ಸಂಶ್ರುತಿಯಲ್ಲಿ, ತನಗೆ ಅತ್ಯಾಂತ ಪ್ರಿಯವಾದ ವಸ್ತುವಿನ ವಿಯೋಗದಿಂದ, ದುಃಖಪಡುತ್ತಲಿರುವಂಥಾ ಮನುಷ್ಯನಿಗೆ, ಪರಮೇಶ್ವರನ ಕೃಪಾಕಟಾಕ್ಷ ಪರಿಪೂರ್ಣವಾಗಿ ಬಂದು ವದಗಿದಂತೆ. ... ||೭||

ಮೂ|| ವ|| ಮತ್ತಮಾ ಸೂರ್ಯಚಂದ್ರರೊಳೆಸೆವ ಕಾಂತಿಯಂತೆ ಭೇದ ಸಂಬಂಧಿನಿಯಾಗಿಯುಂ, ಸುವರ್ಣದಳ ಮನುದ್ದೀಪನಕ್ಕೆ ತಂದ ಮಾಣಿಕ್ಯ ಕಾಂತಿಯಾಂತು ದೀಪಿತೆಯಾಗಿಯುಂ, ಮಧುಪಾನ ತೃಪ್ತಿಯಿಂ ಕಮಲದತ್ತಣಿಂದುಳಿದ ವನದ ಕುಸುಮಾಸ ವಾಸಕ್ತಿಯಿಂ, ಸಂಚಾರೋತ್ಸುಕವಾದ ಭ್ರಮರಂಗಳಿಗೆ ಪುನಃ ಪುನರಾತ್ಮ ಪ್ರಕಂಪನೋದ್ಬುದ್ಧ ಕಮಲಗಂಧದಿಂ ಸ್ಥಿತಿಯಂ ಸಂಪಾದಿಸುವ ಮಲಯಾನಿಲಗತಿಯಂತೆ ಸ್ಥಿರ ಪ್ರಜ್ಞಾಪ್ರದೆಯಾಗಿಯುಂ, ಕೂಟ ಶಾಲ್ಮಲಿ ಮರುಪ್ರದೇಶ ಸಂಚಾರಶ್ರಾಂತರಾದ ಶುಕಮಾನವರ್ಗಳ ತಾಪನಿವಾರಕವಾದ ಫಲಿತ ರಂಭಾಫಲ ಕರ್ಪೂರ ಶೀತಲವಾರಿ ಪಾನದಂತೆ ಪರಮ ವಿಶ್ರಾಂತಿ ಪ್ರದಳಾಗಿಯುಂ, ಭವಾರ್ತರ್ಗಂಗೆ ಸರ್ವಜ್ಞನಾದ ಅಲುಪ್ತಶಕ್ತಿಯಾದ ಶಿವಕಾರುಣ್ಯ ದೃಷ್ಟಿಯಂತೆ, ಅಮೋಘ ಶಕ್ತಿಯಾಗಿಯುಂ, ಜೀವನ್ಮುಕ್ತಿ ದೇವಿಯು ಮರೆಯಲಾಗ ವಿಚಾರ ಸಚಿವಂ ಬಂದು ಮನೋನೃಪಂಗಿಷ್ಟ ಪ್ರಾಪ್ತಿಯಾದುದ್ದು, ಅರಿಷ್ಟ ನಿವಾರಣಂ ಮಾಡಬೇಕೆಂದೂ ।೩೯|| ಇನ್ನೂ ಸೂರ್ಯನಲ್ಲಿಯೂ, ಚಂದ್ರನಲ್ಲಿಯೂ, ಇರುವ ಪ್ರಕಾಶದಂತೆ ಭೇದವಿಲ್ಲದ ಸಂಬಂಧ ಉಳ್ಳವಳಾಗಿ, ಇನ್ನು ಭಂಗಾರದ ತಗಡನ್ನು ಪ್ರಕಾಶಕ್ಕೆ ತಂದ ಮಾಣಿಕ್ಯದ ತೇಜಸ್ಸಿನ ಉತ್ಕೃಷ್ಟ ಪ್ರಕಾಶಮಾಡುವಳಾಗಿಯೂ, ಇನ್ನು ಮಕರಂದವನ್ನು ಕುಡಿದು ಸಂತುಷ್ಟವಾದ ಭೃಂಗವು, ಕಮಲದ ದೆಸೆಯಿಂದ ಮಿಕ್ಕಂಥಾ, ವನದ ಕುಸುಮಗಳ ಮಧುರ ರರ್ಗಳಲ್ಲಿ ಆ

ಸೆಯಿಂದ ಹೊರಟು ಸಂಚಾರವಂ ಮಾಡುವದಕ್ಕೆ ಸಂತೋಷಿಸಿ ಹೋಗುವಂಥಾ ಭೃಂಗಗಳಿಗೆ, ತಿರುಗಿತಿರಿಗಿ, ತಮಗೆ ಹೆಚ್ಚಾದ ಚಲನವನ್ನು ಹುಟ್ಟಿಸುವ ಕಮಲದ ವಾಸನೆಯಿಂದ ಇರೋಣವನ್ನು, ಸಂಪಾದಿಸಿಕೊಡುವಂಥಾ ಮಂದಮಾರುತ ಗಮನದಂತೆ, ಚಲಿಸದಿರುವ ಪ್ರಾಜ್ಞೆಯುಂನು ಕೊಡುವಂಥಾವಳಾಗಿಯೂ. ಇನ್ನು ಗುಂಪಾಗಿ ಬೋಗದ ಮರಗಳು ಇರುವ ತಿಟ್ಟಿನಲ್ಲಿ ಸಂಚಾರವಂ ಮಾಡಿ ಆಯಾಸ ಪಟ್ಟು ಇರುವ ಗಿಳಿಗಳಿಗು, ಮನುಷ್ಯರಿಗು ಸಂತಾಪವನ್ನು ಹೋಗಲಾಡಿಸುವಂಥಾ ಫಲಗಳುಳ್ಳ ಬಾಳೇಮರಗಳಛಾಯೆಯುನ್ನು. ಪಚ್ಚೆ ಕರ್ಪೂರದಿಂದ ತಂಣಗಿರುವ ಉದಕ ಪಾನಮಾಡಿದ ಹಾಗೆ, ಉತ್ಕೃಷ್ಟವಾದ ಆಯಾಸವಂ ಪರಿಹಾರ ಮಾಡುವಂಥಾವಳಾಗಿಯೂ. ಇನ್ನು ಜನ್ಮದಿಂದ ಪೀಡಿತನಾದವನಿಗೆ ಸಮಸ್ತವಂ ತಿಳಿದಂಥಾವನಾದ ಲೋಪವಿಲ್ಲದ ಸಾಮರ್ಥ್ಯ ಉಳ್ಳಂಥಾವನಾದ ಈಶ್ವರನ ಕೃಪಾದೃಷ್ಟಿಯುಹಾಗೆ, ವ್ಯರ್ಥವಾಗದೆ ಇರುವ ಶಕ್ತಿಯೂ, ಇನ್ನು ಜೀವನ್ಮುಕ್ತಿ ರಮಣೀಮಣಿಯು ಪ್ರಕಾಶಿಸುತ್ತಲಿರುವ, ಕಾಲದಲ್ಲಿ, ವಿಚಾರನೆಂಬ ಮಂತ್ರಿಯು, ಬಂದಂಥಾವನಾಗಿ ಮನಃಪ್ರಭುವಿಗೆ ಮನಸ್ಸಿನಲ್ಲಿ ಕೋರಿದಂಥಾ ಕೋರಿಕೆ ಸಿದ್ಧವಾದಂಥಾದ್ದಾಯಿತು. ದುಃಖವಿಲ್ಲದ ಹಾಗೆ ಮಾಡಬೇಕೆಂದು ಚಿಂತಿಸಿ. ॥೧॥

ಮೂಲ॥ ಸಾಂಗತ್ಯ॥ ಆಧಾರಚಕ್ರಪುರದನಕಾರಾತ್ಮಕ। ವಾದಸದ್ಯೋಜಾತಮುಖದಾ॥ ಸಾದುಲಿಂಗಾನುಮತಿಯುಪಡೆದೀಶಾ। ನಾದಿಚತುರ್ದಳಗಳಲೀ॥ ॥ಟೀ॥ ಮೂಲಾಧಾರಚಕ್ರವೆಂಬ ಪಟ್ಟಣದಲ್ಲಿಯಿರುವ, ನಕಾರವೇ ಶರೀರವಾಗಿಯುಳ್ಳಂಥಾ ಸದ್ಯೋಜಾತವೆಂಬ ಮುಖಉಳ್ಳಂಥಾವಳ್ಳೆ ಲಿಂಗದ ಸಮ್ಮತಿಪಡೆದು, ಈಶಾನದಿಕ್ಕು ಮೊದಲಾದ ನಾಲ್ಕು ದಳಗಳಲ್ಲಿ॥ ... ... ... ॥೧॥

ಇರುತಿಹಪರಮಸಹಜವೀರಯೋಗಾಖ್ಯ। ಪರಮದಾನಂದಬಂಧುಗಳಾ॥ಕರಕೊಂಡುಬಹುದುಜೀವನ್ಮುಕ್ತಿಕಲ್ಯಾಣವರವುಂಟಪಕ್ಕೆಂದಟ್ಟಿದನೂ॥ ॥ಟೀ॥ ಇರುವಂಥಾ ಪರಮ, ಸಹಜ, ವೀರ, ಯೋಗ, ಯುಂಬ ಹೆಸರುಗಳುಳ್ಳ ಅಧಿಕವಾದ ಆನಂದ ಕೊಡುವಂಥಾ ಬಂಧುಗಳಾದಂಥಾ

ವೆರನ್ನು, ಕರದುಕೊಂಡು ಬರುವುದು. ಜೀವನ್ಮುಕ್ತಿಯೆಂಬ ಕಾಂತೆಾ ವಿಹಾರದ ಕಲ್ಯಾಣ ಮಂಟಪಕ್ಕೆ ಕರದುಕೊಂಡುಬಾಯೆಂದು ಕಳುಹಿಸಿದನು॥ ... ... ... ॥೨॥

ಗಂಧಾನುಚರನವಿಚಾರನಮಧ್ಯದಿ। ಹೊಂದಿರ್ದಕುಂಡಲಿಶಕ್ತಿ ॥ ಬಂ
ಧುತೆಯಿಂಬಂದಳವನೊಡಲಾಗಲೆ। ಮಂದಿರದಾಶೆಯತೊರದೂ॥

॥ಟೀ॥ ಯಾರನ್ನುಯೆಂದರೆ, ಗಂಧನೆಂಬ ಪರಿಚಾರಕನನ್ನು. ವಿಚಾರ ಪುರೋಹಿತನು, ಆ ಆಧಾರ ಚಕ್ರಪುರದ ಮಧ್ಯದಲ್ಲಿಯಿರುವ, ಅಧಃಕುಂಡಲಿನೀ, ಶಕ್ತಿಯು ಬಂಧುತ್ವದಿಂದ, ಆ ಗಂಧಾನುಚರನಕೂಡಾ, ತನ್ನ ಮನೆಯಾಸೆಬಿಟ್ಟು ಬಿಟ್ಟು ಬಂದಂಥಾವಳಾದಳು॥ ।೩॥

ಸ್ವಾಧಿಷ್ಠಾನಚಕ್ರಪುರದಮಕರಾಂಗ। ವಾದಶ್ರೀವಾಮದೇವಾಸ್ಯ॥ ಸಾ
ಧುಲಿಂಗಾನುಜ್ಞೆಯಿಂಪ್ರಶ್ರಯನಪ್ರಿಯ। ವಾದದಿಂಕರಕೊಂಡಿತರರಾ॥

॥ಟೀ॥ ಸ್ವಾಧಿಷ್ಠಾನಚಕ್ರವೆಂಬ ಪಟ್ಟಣದಲ್ಲಿಯಿರುವ, ಮಕಾರವೇ, ದೇಹವಾಗಿ ಯುಳ್ಳಂಥಾ ಸಂಪದ್ಯುಕ್ತವಾದ ವಾಮದೇವನೆಂಬ ಮುಖಲುಳ್ಳ ಸಾಧುಲಿಂಗದ ಅಪ್ಪಣೆಯಿಂ ಪಡದಂಥಾವನಾಗಿ, ಪ್ರಶ್ರಯನೆಂಬವನ ಪ್ರಿಯ ವಚನಗಳಿಂದ ಕರದುಕೊಂಡು, ಮಿಕ್ಕವರನ್ನ॥ ... ॥೪॥

ಕ್ರೂರತೆಯುನುನಾಶನನುಮೂರ್ಛಾವಜ್ಞಾ। ನಾರಿಯುರನುವಿಶ್ವಾಸನ
ನೂ॥ ಆರುಮನೆಗಳಿಂದಸತ್ವಗುಣನಕಾರಾ। ಗಾರದೊಳಿಟ್ಟುಬರುವುದೂ॥

॥ಟೀ॥ ಕ್ರೂರತ್ವವೆಂಬುವನನ್ನು, ನಾಶನನೆಂಬುವನನ್ನು, ಮೂರ್ಛಾಯೆಂಬ, ಅವಜ್ಞಾಯೆಂಬ ಸ್ತ್ರೀಯರನ್ನು, ಅವಿಶ್ವಾಸನನ್ನು, ಆರು ಮನೆಗಳಿಂದ ಸತ್ವ ಗುಣವೆಂಬವನ ಬಂಧನಶಾಲೆಯಲ್ಲಿ ಕಾವಲುಇರಿಸಿ, ಜಾಗ್ರತೆಯಿಂದ ಬರಬೇಕು॥ ... ... ॥೫॥

ಈಗಲಿಂತೆಂದುರಸಾನುಗಾಮಿನಿಯನುಲೇ। ಸಾಗಿಕಳುಹಿಸಿದನುಬಳಿ
ಕಾ॥ ಮೇಗಣಮಣಿಪೂರಕಚಕ್ರಪುರಮಧ್ಯ। ಭಾಗದೊಳಿರುವಶಿಕಾರಾ॥

॥ಟೀ॥ ಈಗಲೇಯೆಂತೆಂದು, ರಸಾನುಗಾಮಿಯೆಂಬ ಪ್ಯಾಳಿಗದವಚನ್ನಾಗಿ ಕಳುಹಿಸಿದಂಥಾವನಾದನು. ಆಮೇಲೆ ಸ್ವಾಧಿಷ್ಠಾನಕ್ಕೆ ಮೇಲಾರುವ ಮಣಿಪೂರಕ ಚಕ್ರವೆಂಬ ಪಟ್ಟಣದ ಮಧ್ಯಪ್ರದೇಶದಲ್ಲಿಯಿರುವ, ಶಿ,

ಯೆಂಬ ವೇಷ್ಟಿತ್ವ್ರಣವದ ಕರ್ನಿಕಾಕ್ಷರವ್ನೇ॥ ... ॥೬॥

ದೇಹವಾಗೆಸೆವಘೋರಾರನಲಿಂಗದ।ನೇಹದಿಂದಶಿಪಲಾಶಗಳಿ॥ ಗೇಹ ಮಂಮಾಡಿಕೊಂಡಿಹಸುಪುಪ್ತೀರ್ಷ್ಯಾ।ಮೋಹಕಷಾಯವಿಷಾದಾ॥

॥ಟೀ॥ ಶರೀರವಾಗಿ ಪ್ರಕಾಶಿಸುತ್ತಿರುವ, ಅಘೋರ ಮುಖಲಿಂಗದ ಸ್ನೇಹದಿಂದ, ಹತ್ತು ದಳಗಳನ್ನು ಮನೆಯಂ ಮಾಡಿಕೊಂಡು ಇರುವಂಥಾ, ಗಾಢ ನಿದ್ರೆಯೆಂಬುವದನ್ನು, ಅಸಹ್ಯವೆಂಬುವದನ್ನು, ವ್ಯಾಮೋಹವೆಂ ಬುದನ್ನು, ನಿಶ್ಚಲಮನೋವೃತ್ತಿಯನ್ನು, ವಿಘ್ನಮಾಡಿ ಕೆಡಿಸುವಂಥಾಕ ಷಾಯನೆಂಬುವದನ್ನು, ದುಃಖವೆಂಬುವದನ್ನು॥ ... ॥೭॥

ಭಯಪಿಶುನತ್ವತೃಷ್ಣೆಗಳಿಗೆಕಾರಾ।ಶ್ರಯವನಿನಿಗುಂಟುಮಾಡಿ॥ ಜಯ ಶೀಲಬೋಧವಿಖ್ಯಾತವಿವೇಕನಿ।ಶ್ಚಯಹರ್ಷಮತಿಗಳಿಂಮತ್ತೆ॥

॥ಟೀ॥ ಭೀತಿಯೆಂಬುವದನ್ನು, ಲೋಭತ್ವವೆಂಬುವದನ್ನು, ಅಪಾರ ವಾದ ಆಸೆಯೆಂಬ ಹೆಸರುಳ್ಳ ತೃಷ್ಣೆಯೆಂಬುವ ರಿವರುಗಳಿಗೆ, ಬಂಧಕದ ಮನೆಯನ್ನು, ನೀನು ಈಗಲೇ ಸಂಪಾಧಿಸಿಕೊಟ್ಟು, ಜಯಸ್ವಭಾವವ ನ್ನು, ಆನಂದವೆಂಬುವನನ್ನು, ಪ್ರಖ್ಯಾತನೆಂಬುವನನ್ನು, ವಿವೇಕ ನೆಂ ಬುವನನ್ನು, ನಿಶ್ಚಯನೆಂಬವನನ್ನು, ಸಂತೋಷನೆಂಬವನನ್ನು, ಬುದ್ಧಿ ಯೆಂಬವರಿವರುಗಳನ್ನು ಮತ್ತು ಮೇಲಾಗಿ॥ ... ॥೮॥

ದಮಸಂತೋಷಗಳಿಂಲಜ್ಜಾಘ್ರಾಣನಾಮಕ।ರಮಣಿಯರನುಕರತಹು ದೂ॥ಸುಮುಖನಾಗೆಂದುರೂಪಾನುಗನನುಭಾವ । ಪ್ರಮಾದವೊತ್ತರಿಸ ಲಟ್ಟಿದನೂ॥ ॥ಟೀ॥ ದಮಯೆಂಬವನನ್ನು, ಸಂತೋಷಯೆಂಬವರಿವ ರುಗಳಕೂಡಾ, ನಾಚಿಕೆಯೆಂಬವಳನು, ಕರುಣಾಯೆಂಬ ಹೆಸರುಳ್ಳ ಸ್ತ್ರೀ ಯರನ್ನು, ಕರದುಕೊಂಡು ಬರುವದು. ಮುಗುಳನೆ ಮುಖವುಳ್ಳಂಥಾ ರೂಪವನ್ನು ಅನುಸರಿಸಿ ಯಿರುವಂಥಾ ಭಂಟನನ್ನು, ಅಂತಃಕರಣಕ್ಕೆ ಸಂತೋಷ ಪ್ರಾಪ್ತವಾಗುವಹಾಗೆ ಕಳುಸಿದನು॥ ... ॥೯॥

ಬಳಿಕದ್ವಾದಶದಳಮುಳ್ಳನಾಹತಚಕ್ರ। ನಿಲೆಯಾದಲೌಲ್ಯಕಪಟರಾ॥ ಬಳಿಸಂದಚಿತ್ತಾನುತಾಪವ್ಯಕಲ್ಯರ।ಬಿಲನದಶಾಪ್ರಕಾಶಕನಾ॥

॥ಟೀ॥ ಆಮೇಲೆ, ಹನ್ನೆರಡು ದಳಗಳುಳ್ಳಂಥಾ ಅನಾಹತ ಚಕ್ರವೆಂ

ಬ ಮನೆಯುಲ್ಲಿಯಿರುವ, ಚಾಂಚಲ್ಯನೆಂಬವನನ್ನು, ಕಾಪಟ್ಯನೆಂಬವನನ್ನು, ಅವರ ಬಳಿಯುಲ್ಲಿ ಸ್ನೇಹಉಳ್ಳಂಥಾ ಚಿಂತೆಯುಂಬವನನ್ನು, ಸಂತಾಪನೆಂಬವನನ್ನು, ವಿಕಲತ್ವನೆಂಬವನನ್ನು, ಅಬಲವಾದಂಥಾ ಅವಸ್ಥಾ ಪ್ರಕಾಶ ಮಾಡುವನನ್ನು॥ ... ... ॥೧೦॥

ಡಂಬಪ್ರಣಾಶಾಹಂಕೃತಿತೃಷ್ಣಾ ಧಿಃಕಾಶೆಯುರ ।ಸ್ತಂಬಿಸಿಪರಿಪಾಟಿಯಿಂದಾ॥ಜೃಂಭಿತಧೈರ್ಯವಿಶ್ವಾಸಮೋದಗಳಿಂವಿ।ಸ್ರಂಭಿಸುವೀರ್ಯತುಷ್ಟಿಗಳಿಂ॥

॥ಟೀ॥ ಡಂಬನೆಂಬವನನ್ನು, ಚನ್ನಾಗಿ ನಾಶಮಾಡುವನನ್ನು, ಹಾಂಕಾರ ನೆಂಬವನನ್ನು ಆಸೆಯುಂಬವನನ್ನು, ಅತಿಯಾಚಕನೆಂಬವನು ಇವರುಗಳನ್ನ ಕ್ರಮದಿಂದ, ಅವರವರು ಇರುವ ಸ್ಥಳದಲ್ಲಿಯೇ ನಿಲ್ಲಿಸಿ, ಪ್ರಕಾಶಉಳ್ಳಂಥಾ ಧೈರ್ಯದಿಂದಲೂ, ಪ್ರೀತಿ ಸಂತೋಷಗಳಿಂದಲೂ, ವಿಶೇಷ ವಿಶ್ವಾಸಉಳ್ಳ ಬಲತೃಪ್ತಿಗಳಿಂದಲೂ॥ ... ॥೧೧॥

ಗಾಂಭೀರ್ಯಯೋಗಶಾಸ್ತ್ರಜ್ಞಾನತೃಪ್ತಿಗ । ಳಿಂಭಯಹಾರವಕಾರಾ॥ ಮುಂಭಾವಮಾಗಿತಾಳಿದತತ್ಪುರುಷಲಿಂಗ।ಸಂಭಾವನೆಯುಪಡದಲ್ಲಿ॥

॥ಟೀ॥ ಗಾಂಭೀರತ್ವದಿಂದಲೂ, ಯೋಗದಿಂದಲೂ, ಶಾಸ್ತ್ರದಿಂದಲೂ, ಜ್ಞಾನದಿಂದಲೂ, ಸಂತುಷ್ಟಿಯಿಂದಲೂ, ಭಯುವನ್ನ ಹೋಗಲಾಡಿಸುವಂಥಾ ಕರ್ನಿಕಾ ಬೀಜವಾದ, ವಕಾರವೇ, ಶರೀರವಾಗಿ ಧರಿಸಿದಂಥಾ ತತ್ಪುರುಷಲಿಂಗದ ಅಪ್ಪಣೆಯುಂಹೊಂದಿ, ಆ ಸ್ಥಳದಲ್ಲಿ॥ ॥೧೨॥

ಕರಕೊಂಡುಬಹುದುವಿವೇಕವಿತರ್ಕರ।ಭರದಿಂದೀಗೆಂದುಸುಸ್ಪರ್ಶ॥ಚರನಕಳುಹಿದನುವಿಮಲವಿಶುದ್ಧಿಯು।ಸರಸಿಜಚಕ್ರಪುರದಲೀ॥ ॥ಟೀ॥ ಕರದುಕೊಂಡು ಬರುವದು. ವಿವೇಕನೆಂಬವನನ್ನು, ವಿತರ್ಕನೆಂಬವನನ್ನು, ತ್ವರಿತದಿಂದ ಈಕಾಲದಲ್ಲಿ ಯೆಂದು, ಸುಖಕರನಾದ ಸ್ಪರ್ಶಯುಂಬುವ ಬಂಟನ ಕಳುಹಿಸಿದನು. ಆಮೇಲೆ ನಿರ್ಮಲವಾದಂಥಾ ವಿಶುದ್ಧಿ ಚಕ್ರವೆಂಬ ಕಮಲ ಪಟ್ಟಣದ ಮಧ್ಯದಲ್ಲಿ॥ ... ... ॥೧೩॥

ಇಂದ್ರಾದಿದಿಗ್ವಿದಿಕ್ಕುಗಳಲ್ಲಿಹದಿನಾರು।ಚಂದದೆಲೆಯುಮನೆಗಳಲಿ ॥ಸಾಂದ್ರಪ್ರೀತಿಯೊಳುದ್ಗೀಥಪ್ರಣವಂಕೊನೆ।ಯೊಂದಿರುವನಮುಶ್ಯಬ್ಧಗಳಾ॥

॥ಟೀ॥ ಇಂದ್ರಾದಿ ದಿಕ್ಕುಗಳಲ್ಲಿಯೂ, ಇವುಗಳ ವಿದಿಕ್ಕುಗಳಲಿಯೂ,

ಹದಿನಾರು ವಿಧವಾದ ದಳಗಳೆಂಬ ಮನೆಗಳಲ್ಲಿ, ಧಟ್ಟವಾದ ವಿಶ್ವಾಸದಿಂದ ಷಷ್ಟಿಯಾಗಿ ಹೇಳಲ್ಪಟ್ಟಂಥಾ ಪ್ರಣವ ಮೊದಲಾಗಿ, ಕೊನೆಯಾಗಿ ಹೊಂದಿಕೊಂಡಿರುವ, ನಮಃ ಶಬ್ದಗಳನ್ನು॥ ... ॥೧೪॥

ತಾಳಿದಹುಂಪಡ್‌ಔಪಡ್ವಪಟ್ಸ್ವಹಾಸ್ವಾ।ದಾಲಸಚ್ಚಬ್ದಮೂರ್ತಿಗಳಾ॥ಮೇಲಮೃತವಸರಿಗಮಪದನಿಗಳಸಂ।ಭಾಳಿಸದೆಕರತಹುದೂ॥

॥ಟೀ॥ ಹೊಂದಿದಂಥಾ, ಹುಂ, ಫಟ್, ಔಷಟ್, ವಷಟ್, ಸ್ವಾಹಾ, ಸ್ವಧಯುಂಬ ಮಂತ್ರಪಟ್ಟಲ್ಲವಗಳಿಂದ ಪ್ರಕಾಶಿಸುತ್ತಿರುವಂಥಾ ಮೂರ್ತಿಗಳನ್ನು, ಆಮೇಲೆ, ಅಮೃತಸ್ವರೂಪವಾದ, ಸ, ರಿ, ಗ, ಮ, ಪ, ದ, ನಿ, ಯುಂಬುವ ಸಪ್ತಸ್ವರಗಳನ್ನು, ಆಲಸ್ಯಮಾಡದೆ ಕರದುಕೊಂಡು ಬರುವದು॥ ... ... ... ॥೧೫॥

ಅಲ್ಲಿಯುಕಡೆಯುವಿಷವಚಂದ್ರನಿಂಮೋಹ್ನ।ಸಲ್ಲಲಿತಯುಕಾರತನುವ॥ನಿಲ್ಲದೆಕಾಳೀಶಾನಲಿಂಗದಬಲ।ದಲ್ಲಿಂದುಶಬ್ದಾಗ್ರೇಸರನಾ॥ ॥ಟೀ॥ ಆ ವಿಶುದ್ಧಚಕ್ರದ ಮಧ್ಯದಲ್ಲಿ ವಿಷವನ್ನು, ಚಂದ್ರನನ್ನು ಧರಿಸಿ, ಮನೋಹರವಾದಂಥಾ, ಯುಕಾರಪ್ರಣವ ಶರೀರವನ್ನು, ತಡಮಾಡದೆ ಹೊಂದಿದ ಈಶಾನನೆಂಬುವ ಲಿಂಗದ ಬಲದಿಂದ ಅಗ್ರಗಣ್ಯನಾದ, ಶಬ್ದವೆಂಬುವ ಬಂಟನನ್ನು॥ ... ... ... ॥೧೬॥

ಕಳುಹಿದನಾಗಸಂಪ್ರೀತಿಯಿಂದಾಮೇಲೆ। ಲಲನಚಕ್ರದಪುರದೊಳಗೆ॥ ನೆಲಸಿರ್ಪಪೂರ್ವದಿದಳಗೃಹರನುಕರೆ । ಯುಲುಮನೋನ್ಮನಿಯುನಟ್ಟದನೂ॥ ॥ಟೀ॥ ಕಳುಹಿಸಿದನು, ಆಕಾಲದಲ್ಲಿ ಅತ್ಯಾಂತ ವಿಶ್ವಾಸದಿಂದ. ಆಮೇಲೆ ಚಿನ್ಮಯ ನೇತ್ರಸ್ಥಾನದಲ್ಲಿರುವ, ಲಲನಾಚಕ್ರವೆಂಬ ಪಟ್ಟಣದೊಳಗೆ ಇರುವಂಥಾ ಮೂಡಲು ಮೊದಲಾದ ದಿಕ್ಕುಗಳಲ್ಲಿ ಇರುವ ದಳಗಳೇ ಮನೆಯಾಗಿ ಉಳ್ಳವರನ್ನು ಕರತರಲು, ಉನ್ಮನೀ ಭಾವವೆಂಬ ವೂಳಿಗದವನ ಕಳುಹಿಸಿದನೂ. ... ॥೧೭॥

ಆತ್ಮಾಭಿಮಾನಿಭವಾಕ್ಯ ಲಿಂಗದಕೃಪೆ । ವೆತ್ತುನೀಂ ಮದಮಾನರುಗಳಾ ॥ ಸತ್ವದಿಂ ಸ್ನೇಹಶೋಕರ ಭೇದಸ್ಖಲಿತರ । ಮತ್ತಮರತಿ ಸಂಭ್ರಮರನೂ ॥ಟೀ॥ ವ್ಯಷ್ಟಿಯಾದ ಆಕಾರ ಪ್ರಣವದಲ್ಲಿ ಅಭಿಮಾನ ಉ

ಳ್ಳಂಥಾ, ಭವಯೆಂಬ ಹೆಸರುಳ್ಳ ಲಿಂಗದ, ದಯಾಸಂಪಾದಿಸಿಕೊಂಡು, ನೀನು ಮದಯೆಂಬವನನ್ನು, ಅಭಿಮಾನಯೆಂಬವರುಗಳನ್ನು, ಬಲದಿಂದ ವಿಷಯ, ವಿಶ್ವಾಸ, ದುಃಖಯೆಂಬವರುಗಳನ್ನು, ಯೆರಡಾಗಿ ಭೇದಮಾಡುವನನ್ನು, ತೊಂದರೆ ಮಾಡುವರುಗಳನ್ನು, ಮತ್ತು ಅನಾಸಕ್ತಿ ತುರುತು ಬೀಳುವರುಗಳನ್ನು. ... ॥೧೮॥

ರೋಷಪರಾಧಿತೆಯರಮೇಲೆಕಾವಲಿ । ಟ್ಟುಸಾಧುವೃತ್ತಿಯಬಳಿಕಾ॥ ತೋಷದಿ ಚಾಟು ಶ್ರದ್ಧೆಯರೊಡಗೊಂಡುನೀ । ನೇಸಾರೆಂದ ಸಚಿವೇಂದ್ರಾ ॥೬೯॥ ಕೋಪವೆಂಬವನನ್ನು, ಅಪರಾಧ ಮಾಡುವರುಗಳನ್ನು, ಆವರುಗಳ ಮೇಲೆ ಸಾಧು ವೃತ್ತಿಯನ್ನುವನ್ನ ಕಾವಲು ಹಾಕಿ, ಆಮೇಲೆ ಸಂತೋಷದಿಂದ ಚಮತ್ಕಾರವಾಗಿ ಮಾತನಾಡುವನನ್ನು, ಭಕ್ತಿಯೆಂಬವರುಗಳ ಕೂಡಾ ಕೂಡಿಕೊಂಡು, ನೀನೇ ಜಾಗ್ರತೆಯಾಗಿ ಬಾಯೆಂದನು. ವಿಚಾರವೆಂಬ ಮಂತ್ರಿ ಶ್ರೇಷ್ಠನು. ... ॥೧೯॥

ಆ ಯಜ್ಞ ಚಕ್ರಪುರದ ಮಧ್ಯದೊಳುಕಾರ । ಕಾಯಮೃಡಾಖ್ಯ ಲಿಂಗವನೂ ॥ ನೋಯದೆ ಭಜಿಸಿ ಯುತ್ತರ ದಕ್ಷಿಣಚಟ್ಟಂದ । ದಾಯಾದಳೆದ ಕ್ರಮದಲ್ಲಿ ॥೬೯॥ ಆಜ್ಞಾಚಕ್ರನೆಂಬುವ ಪಟ್ಟಣದ ಮಧ್ಯ ಪ್ರದೇಶದಲ್ಲಿ ಯಿರುವ, ಪ್ರಣವದ ಷ್ವಷ್ಟಿಯಾದ, ಉಕಾರವೆಂಬ ಶರೀರ ಉಳ್ಳ ಮೃಡನೆಂಬ ಹೆಸರುಳ್ಳ ಲಿಂಗವನ್ನು, ಕಷ್ಟಬೀಳದೆ ಸೇವೆಯ ಮಾಡಿ, ಉತ್ತರ ಭಾಗದಲ್ಲಿ, ದಕ್ಷಿಣ ಭಾಗದಲ್ಲಿ ಇರುವ ದಳಗಳೆಂಬ ಮನೆಗಳಲ್ಲಿ ಕ್ರಮವಾಗಿ. ... ... ॥೨೦॥

ಜನಿಮೃತಿಯಹತ್ರೈಗುಣತಾಳುತಿಜತಾರೆ। ಯನುಕಳುಹಿಸಿಯುಲೆನಿಲಿಸಿ॥ ಮನದಚಕ್ರದಪುರದೊಳಗಿಹಸ್ವಪ್ನ ಬೋ। ಧನ ಪಂಚಭೂತಗುಣಗಳಾ॥ ॥೬೯॥ ಜನನ ಮರಣಗಳ ಹೊಂದುತ್ತಿರುವ ತ್ರಿಗುಣಗಳನ್ನು, ತಾರೆ ಯೆಂಬವಳನ್ನು ಕಳುಹಿಸಿ ಕಂಣಿನ ಕರೆಗುಡ್ಡೆಗಳಲ್ಲಿ ನಿಲ್ಲಿಸಿ, ಮನಸ್ಸೆಂಬುವ ಚಕ್ರ ಪಟ್ಟಣದಲ್ಲಿ ಇರುವ ಸ್ವಪ್ನಯೆಂಬುವನನ್ನು, ತಿಳಿವಿಕೆಯೆಂಬುವನನ್ನು, ಪಂಚಭೂತ ಗುಣಗಳನ್ನು. ॥೨೧॥

ಬೋಧರ ನಿರ್ವಾಸನೆಯ ನೀನೀ ಬೈಧ । ವಾಧಿ ದೈವತವಾದ ಹರ

ನಾ ॥ ಸಾಧುಲಿಂಗದ ಕೃಪೆವೆತ್ತು ತುಳಿವುದೆಂದು । ಬೋಧಿಸಿ ಕಳುಹಿದೆ ನಾಗಾ ॥ಟೀ॥ ಜಾಗ್ರತೆಯುಂಬವನನ್ನು, ವಾಸನಾ ರಹಿತತ್ವಮಾದ ಬಿಂದುವೇ ಮೊದಲಾದವರುಗಳಿಗೆ ದೈವವಾದ, ಈಶ್ವರನಾದ, ಶುದ್ಧಸತ್ವಮುಳ್ಳಂಥಾ ಲಿಂಗದ ದಯಾಪಡದು, ಪೂರ್ವ ಹೇಳಿದವರುಗಳನ್ನು, ನೀನು ಇದ್ದ ಸ್ಥಳದಲ್ಲಿಯೇ ನಿಲ್ಲಿಸುವದೂ ಯೆಂದು, ಆ ಸಮಯದಲ್ಲಿ ಹೇಳಿ ಕಳುಹಿಸಿದನು. ... ॥೨೨॥

ಆಮೇಲೆ ಪೂರ್ವಾದಿ ದಳ ಷೋಡಶಗಳಿಂದ ।ಸೋಮಚಕ್ರವು ರಾಜಿಸುವದು ॥ ಆ ಮಧ್ಯವರ್ತಿ ಸಮಷ್ಟಿ ಪ್ರಣವದಲ್ಲಿ । ಸೋಮಶೇಖರ ಲಿಂಗಮಿಹುದೂ ॥ಟೀ॥ ಆಮೇಲೆ ಪೂರ್ವಾದಿ ದಿಕ್ಕಿನಲ್ಲಿ ಇರುವ ದಳವೇ ಮೊದಲ್ಗೊಂಡು ಹದಿನಾರು ದಳಗಳುಳ್ಳ, ಚಂದ್ರಮಂಡಲ ಚಕ್ರ ಪ್ರಕಾಶಿಸುತ್ತಲಿರುವದು. ಆ ಚಂದ್ರಮಂಡಲ ಚಕ್ರದ ಮಧ್ಯದಲ್ಲಿ ಇರುವಂಥಾ ಸಮಷ್ಟಿ ಪ್ರಣವದಲ್ಲಿ, ಸೋಮಶೇಖರ ಯಂಬುವಲಿಂಗ ಇರುವದೂ॥೭೩॥

ಅದರ ಕೃಪಾಬಲವನು ಪಡೆದಲ್ಲಿಹ । ವಿದುರರಿಗೆಮ್ಮ ಬಂಧುಗಳೂ॥ ಮುದದಿಂದ ನೀನವರನು ಕೊಂಡು ಬಂದರಾ । ದುದು ಜೀವನ್ಮುಕ್ತಿ ಕಲ್ಯಾಣಾ ॥ಟೀ॥ ಆ ಲಿಂಗದ, ದಯಾಬಲವನ್ನು ಹೊಂದಿ, ಆ ಚಕ್ರದಲ್ಲಿ ಇದ್ದುಕೊಂಡು ತಿಳಿಯುವಂಥಾವರೇ ನಮ್ಮ ಬಂಧುಗಳು. ಸಂತೋಷದಿಂದ ನೀನು ಅವರುಗಳನ್ನು ಕರದುಕೊಂಡು ಬಂದರೆ, ಜೀವನ್ಮುಕ್ತಿಯ ವಿವಾಹ ವಾಯಿತು. ... ॥೭೪॥

ಕೃಪೆಯುಕ್ಷಮೆಯು ನಾರ್ಜವವ ಧೈರ್ಯ ವೈರಾಗ್ಯ । ರಪಟುಧೃತಿಯು ಸಂಬಂಧನನೂ ॥ ಸುಪಥ ರಹಾಸ್ಯ ರೋಮಾಂಚ ವಿಜಯ ಧ್ಯಾನ ।ದಪರಿ ಪಾಟಿಯನು ತಪ್ಪಿಸದೆ ॥ಟೀ॥ ಕೃಪೆಯನ್ನು ಕ್ಷಮೆಯನ್ನು, ರುಜುತ್ವವನ್ನು, ಧೈರ್ಯವೆಂಬವನನ್ನು, ವಳ್ಳೆ ಮಾರ್ಗವುಳ್ಳವರನ್ನು, ಹಾಸ್ಯನೆಂಬವನನ್ನು, ಪುಲುಕಾಂಕುರ ಯುಂಬವನನ್ನು, ಧ್ಯಾನ ಯುಂಬವರಿವರುಗಳನ್ನು ಕ್ರಮವನ್ನು ತಪ್ಪಿಸದಂತೆ ॥೭೫॥

ಸ್ಥಿರತೆಯು ಗಂಭೀರೋದ್ರಮ ಸತ್ವೌದಾರ್ಯರ । ಮರೆಯದೇಕಾಗ್ರತೆಯೊಡನೇ ॥ ಕರತಹುದೆಂದು ವಿಜ್ಞಾನನ ಕಳುಹಿದ । ನರಿವರ ಮನದರ

ಗಿಳಿಯೂ ‖ಟೀ‖ ಸ್ಥಿರತ್ವ ಯುಂಬವನನ್ನು, ಗಂಭೀರಯುಂಬವನನ್ನು, ಸತ್ವಗುಣ ಯುಂಬವನನ್ನು, ಉದಾರತ್ವ ಯುಂಬವನ್ನು, ಇವರುಗಳನ್ನ ಮರೆತು ಹೋಗದೆ ಏಕಾಗ್ರತೆ ಯುಂಬವಳನ್ನು ಕೂಡಾ, ಕರದುಕೊಂಡು ಬರುವದುಯೆಂದು, ವಿಚಾರವೆಂಬ ಮಂತ್ರಿ ಶ್ರೇಷ್ಟನು, ಬಲ್ಲಂಥಾವರ ಮನಸ್ಸಿಗೆ ಅರಗಿಳಿಯಾದಂಥಾ ವಿಜ್ಞಾನವೆಂಬಪುರುಷನನ್ನು ಕಳುಹಿಸಿದನೂ‖

ಇಂತು ಕಳುಹಿ ಕರಸಿದರವರೆಲ್ಲರು । ಸಂತೋಷದಿಂಬಂದುನಿಂದೂ‖ ಚಿಂತಿತ ಫಲಸಿದ್ಧಿಸಿದುದೆಂದು ರೋಮಾಂಚ । ಮಂ ತಾಳಿ ಮುದದಿಂದುಬ್ಬಿದರೂ ‖ಟೀ‖ ಈ ಪ್ರಕಾರದಲ್ಲಿ ಕರೆಯ ಕಳುಹಿಸಿದ. ಅವರೆಲ್ಲರು ಸಂತೋಷಚಿತ್ತರಾಗಿ ಬಂದು ನಿಂತುಕೊಂಡು, ನೀನು ಚಿಂತೆ ಮಾಡಿದಂಥಾಫಲವು ಸಿದ್ಧವಾಯಿತೆಂದು ರೋಮಾಂಚವನ್ನು ಹೊಂದಿ, ಸಂತೋಷದಿಂದ ಹೆಚ್ಚಿದಂಥಾವರಾದರು. ... ‖೯೭‖

ಮೂ‖ ಕಂದ‖ ತೊಡೆಯೊಳಗಿಟ್ಟರ್ಕೆಲರ್ಕೆ । ಮೆಡದಿಯಕೆಲರೆದೆಯಮೇಲೆ ತಾಳಿದರಿತರ । ನ್ನುಡಿವಡೆಯೋಳಾ್ತಳಿದರವ । ರಡಕಗಳಂತಿರಲಿ ಈತನ ಕೃತಿ ವಿಚಿತ್ರಂ ‖ಟೀ‖ ಕೆಲವರು ತಮ್ಮ ಭಾರ್ಯೆಯರಂನು ತೊಡೆಯಮೇಲೆ ಇರಿಸಿ ಕೊಂಡಂಥಾವರಾದರು. ಇನ್ನು ಕೆಲವರು ಹೃದಯದಲ್ಲಿ ಇಟ್ಟುಕೊಂಡಂಥಾವರಾದರು. ಇನ್ನು ಕೆಲವರು ಮಾತುಗಳಾಡುವ ನಾಲಿಗೆಯ ಮೇಲೆ ಇರಿಸಿ ಕೊಂಡಂಥಾವರಾದರು. ಅವರ ಹೊಂದಿಕೆಗಳು ಹಾಗೆಯಿರಲಿ. ಈ ಮನೋ ನೃಪನ ಕುಶಲತ್ವ ಆಶ್ಚರ್ಯವಾಗಿ ತೋರುತ್ತಲಿದೆ. ... ‖೧‖

ಉತ್ಪಲ ಮಾಲಿಕಾ ವೃತ್ತಾ‖ ನೋಡುವಡಿಲ್ಲ ನೋಟ ಮನಸಾರತವೊಂದಿ ಹಳಪ್ಪಲಿಲ್ಲತಾಂ । ಕೂಡಿಹಳೊಮ್ಮೆಯಿಂ ತೆರಳ್ವೈದಿ ವಿಲಾಸಮನಂಟಲಿಲ್ಲಕೊಂ । ಡಾಡುವವ್ರೋಳ್ವಿವೇಕಿ ಜನ ಮಾಂತರ ವೇದಮನುಂಟು ಮಾಡುವ । ಳ್ನೋಡದ ಚಿತ್ರಮಂ ಭುವನದೊಳ್ಮಿಗೆ ನೋಡಿದ ವೆಂದುಹಿಗ್ಗಿದರ್‖ಟ‖ನೋಡಿದರೆ ಕಾಣುವದಿಲ್ಲ ನೋಟವನ್ನು ನಿರಂತರವು ಹೊಂದಿ ಇದ್ದಾಳೆ ಆಲಿಂಗನ ಮಾಡಿಕೊಳ್ಳಲಿಲ್ಲ. ಜೀವನ್ಮುಕ್ತಿ ರಮಣೀ ರಮಣಿಯು ಯಾವಕಾಲದಲ್ಲಿಯೂ ಎಡೆಬಿಡದೆಕೂಡಿ

ಕೊಂಡಿದ್ಧಾಳೆ. ಚಲಿಸುವದರನ್ನ ಹೊಂದಿ ಇದ್ದಂಥಾ ಚಲನ ರೂಪವಿಲ್ಲಾ. ಮುಟ್ಟಲಿಲ್ಲ. ಅನುಭವಿಗಳಾದಂಥಾ ಜೀವನ್ಮುಕ್ತರು ಸ್ತೋತ್ರ ಮಾಡುವಹಾಗೆ, ವಳಗೆ ಬ್ರಹ್ಮಾನಂದವಂ ಉಂಟು ಮಾಡುತ್ತಲಿದ್ಧಾಳೆ. ಲೋಕದಲ್ಲಿ ಯಾವಾಗಲು ಕಾಣದಿರುವಂಥಾ ಆಶ್ಚರ್ಯವನ್ನು ಅಧಿಕವಾಗಿ ನೋಡಿದೆವೋಯ್ಯೆಂದು ಸಂತೋಷಪಟ್ಟರು. ||೧||

ಮೂ|| ವಚನ|| ಈಕಡೆಯೊಳೀತನೊಳೆಂದು ಕೆಲರಾಡುತ್ತಿರೆ ಕೆಲಂಬರ್ ||ಟೀ|| ಈ ಮನೋನೃಪನಲ್ಲಿಯೂ, ಈ ಮುಕ್ತಿ ಕಾಂತಾಮಣಿಯಲ್ಲಿಯೂ ಯೆಂದು ಕೆಲರು ಆಡುತ್ತಿರಲೂ, ಇನ್ನು ಕೆಲವರು||೧||

ಮೂ|| ಕಂದ|| ಸತಿಯಾಗಲ್ಸಹಧರ್ಮಿಣಿ । ಪತಿಗಸ್ಪದ ಮೋಕ್ಷಸೌಖ್ಯಮೆಂಬಿದು ಪುಸಿಯೇ || ಸತಿಯಾಗೆ ಮುಕ್ತಿಬಂದುದು । ಮಿತಿಯಿಲ್ಲದ ಭಾಗ್ಯಮಿದು ಮಹಾಚಿತ್ರವಲಾ ||ಟೀ|| ಭಾರ್ಯೆಯಾದವಳು ಪತಿವ್ರತೆಯಾದರೆ, ಗಂಡನಾದವನಿಗೆ ಬಂಧರಹಿತವಾದ ಮುಕ್ತಿ ಸುಖವಾಗುತ್ತೆಯಂಬುವದು ಸುಳ್ಳಾದೀತೆ. ಹೆಂಡತಿಯಾಗಿಯೇ ಮುಕ್ತಿ ಬಂದಂಥಾದ್ದಾಯಿತು. ಮಿತಿಯಿಲ್ಲದಂಥಾ ಐಶ್ವರ್ಯ ಬಂದಂಥಾದ್ದಾಯಿತು. ಇದು ಮಹದಾಶ್ಚರ್ಯವಾಯಿತಲ್ಲಾ. ... ||೧||

ಮೂ|| ವ|| ಇಂತೆಂದು ಕೆಲಂಬರು ಸಹೇತು ಚತುರೋಕ್ತಿಗಳನ್ನಾಡುತ್ತಿರೆ ಅರುಂಧತ್ಯನಸೂಯಾದಿ ಪರಮ ಮುನೀಂದ್ರ ಪುರಂಧ್ರಿಯರ್ ಮಂಗಳಾರತಿಯನೆತ್ತಿದರದೆಂತೆನೆ ||ಟೀ|| ಹೀಗೆಂದುಕೆಲವರು ಹೇತು ಸಹಿತವಾದ ಚಾತುರ್ಯೋಕ್ತಿಗಳನ್ನ ಹೇಳುತ್ತಿರಲಾಗಿ, ಅರುಂಧತಿ, ಅನಸೂಯೆ ಮೊದಲಾದ ಮುನಿಶ್ರೇಷ್ಟರ ಹೆಂಡತಿಯರಾದ ಪತಿವ್ರತಾಸ್ತ್ರೀಯರು ಮನಃಪ್ರಭುವಿಗೆ ಮಂಗಳಾರತಿಯನ್ನು ಬೆಳಗಿದರು. ಅದುಹ್ಯಾಗೆ ಅಂದರೆ. ... ||೧||

ಮೂ|| ರಾಗಾ-ಭೈರವಿ|| ಕುಡಿತೆ ಗಂಣೆಂಬ ತಟ್ಟೆಯಲಿ ತಾರಕವೆಂಬ । ನಿಡಿದಾದ ಬತ್ತಿಯಲಿ ಜ್ಞಾನವೆಂಬಾ । ಕಡು ಹಬೆಯನುಳ್ಳ ದೀಪವ ಮುಟ್ಟಿಸಿಯೆ ಶಾಂತಿ । ಗೊಡಲಾದಮನವ ಬೆಳಗಿದರಳ್ಕರಿಂ । ಜಯಮಂಗಳಂ ಸದಾ ಶುಭಮಂಗಳಂ । ರಯದೆ ಭವಸಿಂಧು ಪಾರವ ಪಡೆದಗೆ||

॥ಟೀ॥ ಬೊಗಸೆಗೆಂಬೊಂಬ ತಟ್ಟೆಯಲ್ಲಿ ಚಕ್ಷುಃ ಕನೀನಿಕವೆನ್ನಿಸಿಕೊಳ್ಳುವ ನೀಳವಾದಂಥಾ ಬತ್ತಿಯಲ್ಲಿ ಅಜ್ಞಾನವೆಂಬ ಅಧಿಕ ತೇಜಸ್ಸುಳ್ಳಂಥಾ ದೀಪವ ಹತ್ತಿಸಿಯೇ, ಶಾಂತಿಗೆ ಶರೀರವಾದ ಮನಸ್ಸನ್ನು, ವಿಶ್ವಾಸದಿಂದ ಬೆಳಗಿದರು. ಅತಿಜಾಗ್ರತೆಯಿಂದ ಜನನ ಮರಣರೂಪಪ್ರವಾಹವೆಂಬ ಸಮುದ್ರದ ಕಡೆ ಕಂಡಂಥಾ ಮನೋನೃಪನಿಗೆ ನಿರಂತರವು ಜಯಮಂಗಳವಾಗಲಿ. ಶುಭಮಂಗಳವಾಗಲೀಯೆಂದು. ॥೧॥

ವಿಜಿತ ಷಡ್ವರ್ಗನಿಗೆ । ವಿಮಲಾಪವರ್ಗನಿಗೆ । ಭಜಿತ ವಿಜ್ಞಾನನಿಗೆಪಟುಮೌನಗೆ ॥ ಕುಜನ ಜನದೂರನಿಗೆ । ಕುಹಕ ಸಂಹಾರನಿಗೆ ನಿಜಪದ ವಿಹಾರನಿಗೆ ನಿರ್ವೈರಗೆ ॥ ಜಯಮಂಗಳಂ॥ ।ಟೀ॥ ಕಾಮವೇ ಮೊದಲಾಗಿ ಮತ್ಸರ್ಯವೇ ಕಡೆಯಾದ, ಅಂಥಾ ಶತ್ರುಸ್ಸಮೂಹವನ್ನು ಜೈಸಿದಂಥಾವನಿಗೆ, ನಿರ್ಮಲವಾದ ಮೋಕ್ಷವುಳ್ಳಂಥಾವನಿಗೆ ಹೊಂದಲ್ಪಟ್ಟಂಥಾ ವಿಜ್ಞಾನ ಸ್ವರೂಪವುಳ್ಳವನಿಗೆ, ಸಾಮರ್ಥ್ಯವಾದ ಮೌನವುಳ್ಳವನಿಗೆ, ಕುತ್ಸಿತರಾದ ಜನರಿಗೆ ದೂರನಾದಂಥಾವನಿಗೆ, ಕುಹಕೋದ್ಭವ ಸಂಹರಿಸಿದವನಿಗೆ, ಬ್ರಹ್ಮ ಸ್ವರೂಪದಲ್ಲಿಯೇ ಕ್ರೀಡೆಯುಳ್ಳಂಥಾವನಿಗೆ, ಸರ್ವಭೂತಗಳಲ್ಲಿಯೂ ವಿರೋಧವಿಲ್ಲದಂಥಾವನಿಗೆ. ... ॥೨॥

ಆಗಲಿ ನಿರಾವರಣವಾದ ಸಹಜಾನುಭವ । ಪೋಗಲಿ ವಿಪಜ್ಜಾಲದಳಿವು ತಳಿವಿಂ । ಆಗಲಿಶಶಾಂಕರೇಖಾ ಚೂಡದತ್ತನಿಜ । ಯೋಗಸಾಮ್ರಾಜ್ಯದ ವ್ಯಾಹತಪದಂ ॥ಟೀ॥ ಮಾಯಾವರಣ ರಹಿತವಾದ ಯತಾರ್ಥಾನುಭವವು ಆಗಲಿ. ಆಪತ್ತುಗಳ ಸಮೂಹದ ನಾಶವು ಸ್ವಸ್ವರೂಪದ ತಿಳುವಿಕೆಯಿಂದ ಆಗಲಿ. ಚಂದ್ರರೇಖೆಯು ಶಿರಸ್ಸಿನಲ್ಲಿ ಉಳ್ಳಂಥಾ ಈಶ್ವರನಿಂದ ಕೊಡಲ್ಪಟ್ಟಂಥಾ, ಯತಾರ್ಥವಾದ ಜೀವೈಕ್ಯದ ಆಧಿಪತ್ಯವೆಂಬ ಗತವಾಗದಿರುವ ಸ್ಥಾನವೂ ಆಗಲಿ. ... ॥೩॥

ಮೂ॥ ವ॥ -ಇಂತು ನಾನಾ ವಿಧಾರಾರ್ತಿಕೆಗಳಿಂ । ಶಾಂತಿ ಕಲ್ಯಾಣ ಮಹೋತ್ಸವಮಂ। ಪ್ರಣ್ಯಾಂಗನೆಯರ್ವಿರಚಿಸಲಾ ಕಾಲದಲ್ಲಿ, ಸಮುಚಿತ ನಮಸ್ಕಾರ ಸ್ತೋತ್ರಂಗಳಿಂ । ಸಕಲ ದೇವತೆಗಳಂ ಸತ್ಕರಿಸಿ। ಸಂಶಯ ವಿಪರೀತ ಅಸಂಭಾವನೆಗಳೆಂಬ ಪಟುತ್ರಯಂಗಳಂ ನಿವಾಳಿಸಿ

ದೂರಂ ಬಿಸುಟು । ಮುಕುಳಿತಾಂಜಲೀ ಬದ್ಧನಾಗಿ । ಮುಕ್ತಿಕಾಂತಾ ಸಹಾಯನಾಗಿ ಮನೋ ರಾಜನಿರಲಾ ಸಕಲ ದೇವತೆಗಳೆಲ್ಲರುಂ । ನಾವು ಕಾಂಬಂತೆ ನಮ್ಮ ಮುಂದೆ ನಿವಾಳಿಸಿ ಬಿಸುಟು ಸಂಶಯ ವಿಪರೀತಾ ಸಂಭಾವನೆಗಳೆಂಬ ಪಟುತ್ರಯಂಗಳಾವ ಕಾಲದಲ್ಲಿಯೂ । ಆವದೇಶದಲ್ಲಿಯೂ । ಆವವಸ್ತುವಿನಲ್ಲಿಯೂ ತೋರದೇ ಪೋಗಲೆಂದು ಪರಸಿ । ನಿಜಾವಾಸವಂ ಸೇರಲಾ ಮನೋನೃಪನೊಡನೆ । ವಿಚಾರನಿಂತೆಂದಪನದೆಂತೆನೆ.

||ಟೀ|| ಈ ಪ್ರಕಾರವಾಗಿ ನಾನಾವಿಧವಾದಂಥಾ ಮಂಗಳಾರತಿಗಳಿಂದ ಬ್ರಹ್ಮಶಾಂತಿ ವಿವಾಹ ಮಹೋತ್ಸವವನ್ನು, ಅರುಂಧತಿ, ಅನಸೂಯಾದಿ ಪತಿವ್ರತಾ ಸ್ತ್ರೀಯರುಗಳು ಮಾಡಲಾ ಸಮಯದಲ್ಲಿ ಯಥಾಯೋಗ್ಯವಾದ ನಮಸ್ಕಾರಂಗಳಿಂದಲೂ, ದೇವತಾ ಸ್ತೋತ್ರ ಪಾಠಂಗಳಿಂದಲೂ, ಸಮಸ್ತ ದೇವತೆಗಳನ್ನು ಉಪಚಾರಂಗಳಂ ಮಾಡಿ, ಸಂಶಯ ವಿಪರೀತ, ಅಸಂಭಾವನೆಗಳೆಂಬುದಕ್ಕೆ, ಜೀವನು ಬ್ರಹ್ಮನಾದನೋ ಅಲ್ಲವೋ ಯಂಬುವದೇ, ಸಂಶಯವೆನಿಸುವದು. ಸ್ವರೂಪಜ್ಞಾನವಿಲ್ಲದೆ, ದೇಹವೇ ತಾನೆಂಬುದೇ, ವಿಪರೀತ ಭಾವನೆ ಯೆನಿಸುವದು. ಹಾಂಕಾರರೂಪಾಂತಃ ಕರಣದಲ್ಲಿ ಸುಖದುಃಖಾಧ್ಯಾನುಭವವು, ಬ್ರಹ್ಮಸ್ವರೂಪವಾದಂಥಾ ತಾನು ಅನುಭವಿಸುತ್ತೇನೆಂದು ತಿಳಿದು ಕೊಂಬುದೇ, ಅಸಂಭಾವನೆ ಯೆನಿಸುವದು. ಅಂಥಾ ಮೂರು ತೆರೆಗಳನ್ನು ಇಳೇತೆಗೆದು ದೂರವಾಗಿ ಬಿಸಾಟುಬಿಟ್ಟು, ಕೈಗಳಂ ಜೋಡಿಸಿ ಕೊಂಡು, ಮುಕ್ತಿಕಾಂತಾ ಸಮೇತನಾಗಿ ಮನೋನೃಪನು ಇರಲು ಆ ಸಮಯದಲ್ಲಿ ಪೂರ್ವೋಕ್ತ ಸಮಸ್ತ ದೇವತೆಗಳೆಲ್ಲರು, ನಾವು ಕಾಣುವಹಾಗೆ ನಮ್ಮ ಮುಂದೆ ಇಳೇತೆಗೆದು ಬಿಸಾಟಂಥಾ ಪೂರ್ವೋಕ್ತ ಸಂಶಯ ವಿಪರೀತ ಅಸಂಭಾವನೆಗಳೆಂಬ ಮೂರು ತೆರೆಗಳು ಅಂಥಾ ಸ್ತ್ರೀ ಅನ್ನ ಪಾನಾದಿ ವಿಚಿತ್ರ ಭೋಗಕಾಲದಲ್ಲಾದರೂ, ಪುಣ್ಯದೇಶದಲ್ಲಾಗಲಿ, ಪಾಪದೇಶದಲ್ಲಾಗಲಿ, ಕಟಕ ಕಿರೀಟ ಕುಂಡಲಾದಿ ಸುವರ್ಣ ಭೂಷಣ ವಸ್ತುಗಳಲ್ಲಾಗಲಿ ಘಟಾದಿ ಮೃಣ್ಮಯ ಪಾತ್ರ ವಿಶೇಷ ವಸ್ತು ಗಳಲ್ಲಾಗಲಿ, ಪೂರ್ವೋಕ್ತವಾದ ಆವೃತ್ತಿತ್ರಯವು ತೋರದೆ ಹೋಗಲೆಂದು ಹರಸಿಬಿಟ್ಟು, ತಮ್ಮ ತಮ್ಮ ಸ್ಥಳಗಳಂ ಸೇರಿದರು. ಆ ಕಾಲದಲ್ಲಿ ಮನೋರಾ

ಜನಕೊಡೆ ವಿಚಾರ ಸಚಿವನಿಂತೆಂದನು. ಅದು ಹ್ಯಾಗೆ ಅಂದರೆ ||೧||

ಮೂಲ|| ಜಂಪೆ|| ಎಲೆರಾಯ ಕಲ್ಯಾಣದಲಿ ಮಹೋತ್ಸವದಲ್ಲಿ ಬಲರಾದರಾಗಲೀ ಕೊಲೆಗೆ ಪಾತ್ರರ್ಕಳ್ ||ಟೀ|| ಎಲೈ ಮನೋರಾಜನೇ, ವಿವಾಹದಲ್ಲಿ ಅಧಿಕವಾದಂಥಾ ಉತ್ಸವಕಾಲದಲ್ಲಿ ಕೊಲ್ಲುವದಕ್ಕೆ ಪಾತ್ರರಾದಂಥಾ ದುಷ್ಟರಾದಾಗ್ಯು ಆಗಲಿ. ... ||೧||

ಅಷ್ಟಮಂಡಲ ಪುರದೊಳಡ್ಡಿಗೊಡಲಾದವರ । ಕಷ್ಟಮಂ ಪರಿಹರಿಸು ಕಾವಲಂ ತೆಗಸೂ ||ಟೀ|| ಮೂಲಾಧಾರಾದಿಯಾದ ಅಷ್ಟಚಕ್ರಪಟ್ಟಣದಲ್ಲಿ ನಿರ್ಬಂಧಕ್ಕೆ ದೇಹವಾಗಿರುವಂಥಾವರುಗಳ ಕಷ್ಟ ಪರಿಹಾರ ಮಾಡಿಸಿ ಕಾವಲು ಇರುವ ಆಳುಗಳನ್ನ ತೆಗಸಿಬಿಡು. ||೨||

ಆಪ್ರವೃತ್ತಿಯು ಬೆರಸಿಯುಖಿಲರಾಗಾದಿಗಳು । ಸಪ್ರಭೆಯೊಳೈದಲೀಸಂಸ್ಥಾನ ಮುಖವಾ ||ಟೀ|| ಆ ಪೂರ್ವೋಕ್ತವಾದ ಪ್ರವೃತ್ತಿಯೊಡನೆ ಕೂಡಿ ಸಮಸ್ತ ವಿಷಯರಾಗಾದಿಗಳು ಪ್ರಕಾಶ ಸಹಿತವಾಗಿ, ತಾವುತಾವು ಇರುವ ಸ್ಥಾನದಲ್ಲಿಯೇ ಇರಲಿ. ... ||೩||

ಈನಿವೃತಿಯು ಬೆರಸಿ ಇರಲಿ ವೈರಾಗ್ಯಾದಿ । ಮಾನನಿಧಿಗಳುತಮ್ಮ ಮಾನ್ಯಮಿರ್ದಂತೆ ||ಟೀ|| ಈ ಪ್ರತ್ಯವಾಗಿರುವಂಥಾ ನಿವೃತ್ತಿಯೊಡನೆ ಕೂಡಿ, ವಿರಾಗಾದಿ ಮಾನನಿಧಿಗಳುತಮ್ಮ ತಮ್ಮ ಪೂಜ್ಯತೆಇದ್ದಂತೆಇರಲಿ||

ಬಾಳುವಂದಿನೊಳು ಭಯಪಾಕ್ಷಿಕತ್ವಾವ ಪಡೆದ । ಲೋಲರಾಜಸವಿರಲಿ ರೂಢಿಯುಂತಂತೂ ||ಟೀ|| ಜೀವಿಸಿ ಇರುವ ಕಾಲದಲ್ಲಿ ಪ್ರವೃತ್ತಿನಿವೃತ್ತಿ ಪಕ್ಷಪಾತಿಯಾದ ಚಂಚಲವಾದ ರಾಜಸ ಸುಗುಣವು ತನ್ನ ಬಳಿಕೆ ಹ್ಯಾಗೆಯೋ ಹಾಗೆಯೇ ಇರಲಿ. ... ||೫||

ಮೂ|| ವ|| ಇಂತೆಂದಾ ವಿಚಾರದೊಡನೆ ವಿತರ್ಕಂಬಂದು, ಪಿಂತಣ ಕಾಮಾದಿಗಳು ಬಂದರೆ ಶಾಂತಿ ಮಾರ್ಗಕ್ಕಂತರಾಯ ಮಾಗದೆನಲೂ||

||ಟೀ|| ಹೀಗೆ ಹೇಳಿದಂಥಾ ವಿಚಾರ ಸಚಿವನ ಕೂಡಲೆ, ವಿತರ್ಕನೆಂಬವನು ಬಂದು, ಹಿಂದೆ ಹೇಳಿ ಇರುವ ಕಾಮಾದಿಗಳು ಬಂದರೆ, ಬ್ರಹ್ಮಾನುಭವ ಮಾರ್ಗಕ್ಕೆ ವಿಘ್ನವಾಗದೆಯೆಂದು ಕೇಳಿದರೆ. ||೧||

ಮೂಲ|| ಉತ್ಪಲ ಮಾಲಿಕಾವೃತ್ತ|| ರೋಗದಿ ನರ್ತಿಯುಂ ಪಡೆ

ದುತದ್ವಿಲಯುಕ್ಕೆ ಭಿಷಕ್ಪ್ರಸನ್ನಹ । ಸ್ತಾಗತವೈದ್ಯಮಂ ತೆಗದುಕೊಂ ಬಿಡೆಯೇಳ್ಳಡು ಪಥ್ಯಮಿದುರ್ಜಚ । ನ್ನಾಗಲದಂ ವಿಸರ್ಜಸುವನೋ ಮರಣಾವಧಿಯಾಗಿ ಕೊಂಬನೋ । ರೋಗನಿರಾಮಯುಂಗಿಹವೆ ದುರ್ಜ ಲ ಭೋಜ್ಯಗಳೀ ಧರಿತ್ರಿಂಯೋಳ್ ॥೬॥ ರೋಗದಿಂದ ಪೀಡಿತನಾ ದಂಥಾವನಾಗಿ, ಆರೋಗದ ನಾಶಾರ್ಥವಾಗಿ ವೈದ್ಯನ ಸುಮುಖವಾದಂ ಥಾ ಹಸ್ತದಿಂದ ಅನ್ನುಷಧವನ್ನ ತೆಗದು ಕೊಂಬುವ ಕಾಲದಲ್ಲಿ ಅತ್ಯಾಂತ ಕಠಿಣವಾದ ಪಥ್ಯಮಿದುರ್ಜ, ಆರೋಗ ಪರಿಹಾರವಾದಮೇಲೆ, ಆ ಪಥ್ಯ ವನ್ನ ಬಿಟ್ಟು ಬಿಡುವನೋ, ದೇಹ ಹೋಗುವ ಪರ್ಯಂತವು ಆ ಪಥ್ಯದ ಲ್ಲಿಯೇ ಇರುವಂಥಾವನಾದಾನೋ, ರೋಗೋಪದ್ರವ ರಹಿತವಾದಂಥಾವ ನಿಗೆ ಭೋಜನ ಮಾಡುವದಕ್ಕೆ ಯೋಗ್ಯವಾಗದೆ ಇರುವಂಥಾ ಪದಾ ರ್ಥಗಳು ಉಂಟೇ ಈ ಭೂಮಿಯಲ್ಲಿ. ... ॥೧॥

ಮೂ॥ ವ॥ ಅದರಿಂ ಪ್ರಾರಾಬ್ಧ ಕರ್ಮಾನುಸಾರಮಾಗಿ । ಅವಶ್ಯಂ ಭಾವಮಂ ಪಡೆದು ಬರುವ ಅನುಭೂತ ವನಿತಾದಿ ವಿಷಯ ರುಚಿರೂಪಂ ಗಳಾದ ಭೌತಿಕ ಪ್ರತಿ ಬಂಧಂಗಳುಂ, ಜಡಬುದ್ಧಿ, ಜನಸಂಗರತಿ, ದುರ ಭಿಮಾನ, ಚಾಪಲ್ಯಾದಿ ರೂಪಂಗಳಾದ ವರ್ತಮಾನಿಕ ಪ್ರತಿ ಬಂಧಂಗ ಳುಂ, ಬ್ರಹ್ಮಾದಿ ಲೋಕವಾಂಛೆ ಪ್ರಮಥಾದಿ ಕಾಯಾಭೀಪ್ಸತೆ ವಿಭೂತಿ ಪ್ರಯುತ್ನಾದಿಗಳಾದ ಭವಿಷ್ಯತ್ ಪ್ರತಿಬಂಧಂಗಳುಂ ಯಥಾಸಾವಕಾಶಮಾ ಗಿರಲಿ । ಇವರೊಳ್ಳರಾಜಿತರಾದ ಕಾಮಾದಿಗಳು ಪಿಹರಿಸಲಿ । ನಿನಗಿನ್ನೆ ಪ್ಪುದೇ ಭವಮಾಲೆ, ಇವತ್ತಣ ಭಯಂ ಬಿಡ.ಬಿಡಾ ॥೬॥ ಹಿಂದಹೇ ಳಿದ ಅರ್ಥದಿಂದ ಪ್ರಾರಂಭಿಸಿಕೊಂಡು ಬಂದಂಥಾ ಕರ್ಮಾನುಸಾರವಾ ಗಿ ಅನುಭವಿಸಲ್ತಕ್ಕ ಭಾವವನ್ನು ಹೊಂದಿ ಬರುತ್ತಾ ಇರುವಂಥಾ, ಜ್ಞಾ ನಾಭ್ಯಾಸಕ್ಕೆ ಪೂರ್ವಅನುಭವಿಸಿದಂಥಾ ಸ್ತ್ರೀಯೆ ಮೊದಲಾದ ವಿಷಯ ದಲ್ಲಿ ಅತ್ಯಾಸಕ್ತಿ ರೂಪಂಗಳಾದ ಭೌತಿಕ ಪ್ರತಿ ಬಂಧಂಗಳು, ಮಂದಬು ದ್ಧಿ ವಿಷಯಾಸಕ್ತ ಜನರ ಸಹವಾಸದಲ್ಲಿ ಆಸಕ್ತಿ, ದುಷ್ಟವಾದಂಥಾ ಅಭಿ ಮಾನವು, ವಿಷಯದಲ್ಲಿ ಚಪಲತ್ವಾದಿ ರೂಪಂಗಳಾದ ಈಗ ಅನುಭವಿಸು ವಂಥಾ ವರ್ತಮಾನ ಪ್ರತಿ ಬಂಧಂಗಳು, ಬ್ರಹ್ಮಲೋಕ ಮೊದಲಾದ ಪು ಣ್ಯಲೋಕಂಗಳಲ್ಲಿ ಆಸಕ್ತಿಯು, ಪ್ರಮಥಗಣಂಗಳು ಮೊದಲಾದಂಥಾವ

ರ ಕಾಯುಸಿದ್ಧಿಯು ತನಗೆ ಆಗಬೇಕೆಂಬುವ ಇಚ್ಛಾವಿಶೇಷವನ್ನು, ತನಗೆ ಐಶ್ವರ್ಯಾದಿ ಪ್ರಯುಕ್ತಗಳಾದ ಭವಿಷತ್ಪ್ರತಿ ಬಂಧಂಗಳನ್ನು ಯಥಾ ಸಾವಕಾಶವಾಗಿ ತ್ಯಾಗಿ ಇರಬೇಕೋ ಹಾಗೆಯಿರಲಿ. ಪೂರ್ವೋಕ್ತವಾದ ಭೂತ ಭವಿಷ್ಯದ್ವರ್ತಮಾನ ಪ್ರತಿ ಬಂಧಂಗಳಲ್ಲಿ ಜೈಸಲ್ಪಟ್ಟ ಕಾಮ ಮೊದಲಾದಂಥಾ ಅರಿಷಡ್ವರ್ಗಗಳು ವಿನೋದವಾಗಿ ಇರಲಿ. ಎಲೈ ಮನೋರಾಜನೇ ಜನನ ಮರಣ ಪ್ರವಾಹ ರೂಪವಜ್ರಿ ಇನ್ನಾದೀತೆ, ಆಗಲಾರದು. ಇದೆಲ್ಲಿಯುಭಯುಂ ಬಿಡುಬಿಡು. ... ||೧||

ಮೂಲ|| ಜಂಪೆ|| ಥರಥರದಿ ಜಲಧರ ನಿಕರವೊತ್ತರಿಸಲುಪು | ಷ್ಕರಕೆಂದಿಗಾದೊಡಂಬರುವುದೇ ವಿಕೃತಿ ||ಟೀ|| ನಾನಾ ವಿಧವಾಗಿ ಮೇಘಗಳ ಸಮೂಹ ಆವರಿಸಿಕೊಂಡಿರಲು, ಆ ಆಕಾಶಕ್ಕೆ ಭೂತ ಭವಿಷತ್ ವರ್ತಮಾನ ಕಾಲಂಗಳಲ್ಲಾದರು ವಿಕಾರ ಬಂದೀತೆ, ಬರಲಾರದು ||೧||

ಕಾವಳದ ಹಗ್ಗದಲಿ ಕಲ್ಪಿಸಿದ ಸಟೆಯಾದ | ಹಾವುಕಚ್ಚಿದ ರಾರು ಸಾವರೈ ಜಗದಿ ||ಟೀ|| ಕತ್ತಲೆಯಿಂದ ಮುಚ್ಚಲ್ಪಟ್ಟ ಹಗ್ಗದಲ್ಲಿ ಹುಟ್ಟಸಲ್ಪಟ್ಟ ಅಬದ್ಧವಾದ ಹಾವು ಕಚ್ಚಿದರೆ, ಲೋಕದಲ್ಲಿ ಯಾರಾದರು ಸಾಯುವವರುಂಟೆ, ಇಲ್ಲ. ... ||೨||

ಬೆಳಕಿನಿಂ ಕೋಣೆಯುಲಿ ಬೇಕಾದುದಂ ಪಡೆದು | ಘಳಿಸೆನೆಂಬವರು ಕಾವಳದೊಳಾರುಂಟೂ ||ಟೀ|| ಬೆಳಕಿನಿಂದ ಕತ್ತಲಾದಂಥಾ ಕೋಣೆಯು ಮನೆಯುಲ್ಲಿ ಇರುವ ಪದಾರ್ಥವಂ ತೆಗದುಕೊಂಡು, ಅಂಧಕಾರದಲ್ಲಿ ಆ ಪದಾರ್ಥವನ್ನ ಸಂಪಾದಿಸುವೆನು ಯುಂಬವರು ಲೋಕದಲ್ಲಿ ಯಾರಾದರೂ ಉಂಟೆ, ಯಾರು ಇಲ್ಲ. ... ||೩||

ಹಾಲು ಸಂಸ್ಕಾರದಿಂದಾಗಿ ಘೃತರೂಪವಾದ | ಮೇಲೆ ಪೂರ್ವಾಕೃತಿಯು ತಾಳಿ ಮೊಸರಹುದೇ ||ಟೀ|| ಹಾಲು ಹೆಪ್ಪಿನ ಸಂಸ್ಕಾರದಿಂದ ತುಪ್ಪದ ರೂಪಹೊಂದಿದಮೇಲೆ, ಪೂರ್ವ ಪ್ರಕಾರ ಹೊಂದಿ ಮೊಸರಾದೀತೆ, ಆಗುವದಿಲ್ಲ. ... ||೪||

ದಗ್ಧಪಟವೆಂದಿನಂದದಿ ತೋರಲಿಳೆಯುಲ್ಲಿವಿ | ದಗ್ಧರಾರದನುಟ್ಟು ತಳ್ಳಿದರು ಹಿಮಮಂ ||ಟೀ|| ಸುಟ್ಟುಹೋದಂಥಾ ಬಟ್ಟೆ ಪೂರ್ವದ ಹಾಗೆ ಆಕಾರಮಾತ್ರ ವಿದ್ದಾಗ್ಯೂ, ವಿವೇಕಿಗಳಾದವರು ಸುಟ್ಟ ವಸ್ತ್ರವ

ನ್ನ ಉಟ್ಟುಕೊಂಡು ಛಳಿ ಹೋಗಲಾಡಿಸಿದವರು, ಯಾರಾದರುವುಂಟೆ ||

ಗರುಡ ಮಂತ್ರದೊಳಳಿದ ಗರಳಶಕ್ತಿಯು ಜೀವ | ಕರಣಮಂ ವಿಸ್ಮೃತಿಯ ಮರಳಿ ಪೊಂದಿಪುದೇ ||ಟೀ|| ಗರುತ್ಮಂತನ ಮಂತ್ರೋಚ್ಚಾರಣೆಯಿಂದ ಹೋದಂಥಾ ವಿಷದ ಸಾಮರ್ಥ್ಯವು, ಜೀವ ಸಂಬಂಧವಾದ ಅಂತಃಕರಣಕ್ಕೆ ಪುನಹಾ ಮರವೆ ಕೊಟ್ಟೀತೆ, ಕೊಡಲಾರದು ||

ಕನಸಿನೊಳು ಬಂದ ಕಾಮಿನಿಯ ಸಂಸಾರದಿಂ | ತನಯರಂ ಪಡದಿರ್ಪ ಮನುಜರಾರುಂಟೂ ||ಟೀ|| ಸ್ವಪ್ನದಲ್ಲಿ ಲಭ್ಯವಾದಂಥಾ ಕಾಮುಕಸ್ತ್ರೀ ಸಂಸಾರದಿಂದ ಮಕ್ಕಳನ್ನು ಪಡದಂಥಾ ಮನುಷ್ಯರು ಯಾರಾದರು ಲೋಕದಲ್ಲಿ ಇದ್ದಾರೆಯೇ, ಯಾರು ಇಲ್ಲ. ... ||೭||

ಮೂಲ|| ವಚನ|| ಇದರಿಂ ದೇಹ ವ್ಯಾಧ್ಯಾದಿಗಳಿಹ ಲೋಕದುಃಖಂಗಳು | ಪುಣ್ಯಾರ್ಜನಾದಿಗಳು, ಪರಲೋಕ ದುಃಖಂಗಳು, ಪಂಚಕೋಶಂಗಳಿಗೆ ಸಾಕ್ಷಿಯಾದುದರಿಂದಿ ವೆರಡು ದುಃಖಂಗಳಿಲ್ಲವಾದುದು | ಈ ದುಃಖಾಭಾವದಿಂದಲೂ, ಬ್ರಹ್ಮಾದ್ಯಾನಂದಂಗಳು, ಪರಿಗಣಿತಂಗಳು, ತನ್ನಾನಂದವಾದರೋ, ಅಪರಿಗಣಿತ ವಾದುದರಿಂದೀ ಸರ್ವಕಾಮಪ್ತಿಯಿಂದಲೂ ಕೃಷ್ಯಾದಿಯಾದುದು | ದೇಹಕ್ಕೆ ಯಾಗಾದಿ ಯಾದುದು| ವಾಕ್ಯಕ್ಕೆ ಶ್ರವಣಾದಿಯಾದುದು | ಮನಸ್ಸಿಂಗೆ ಕರ್ತವ್ಯಂಗಳೂ||

||ಟೀ|| ಈ ಪ್ರಕಾರ ಹೇಳಿದ್ದರಿಂದ ಸ್ಥೂಲದೇಹಕ್ಕೆ ಬಂದಂಥಾ ವ್ಯಾಧಿಯೇ ಮೊದಲಾದಂಥಾವುಗಳು ಈ ಲೋಕ ದುಃಖಂಗಳು. ಈ ಭೂಲೋಕದಲ್ಲಿ ಪುಣ್ಯ ಸಂಪಾದನೆ ಮಾಡಬೇಕೆಂಬುವದು ಪರಲೋಕ ದುಃಖಂಗಳು. ಆತ್ಮನು, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯವೆಂಬಪಂಚಕೋಶಂಗಳಿಗೆ ಸಾಕ್ಷಿಯಾಗಿ ಇರುಪದ್ದರಿಂದ, ಇಹಲೋಕ ದುಃಖವೂ, ಪರಲೋಕ ದುಃಖವೂ ಎರಡು ಇಲ್ಲದೇ ಹೋದ್ದರಿಂದ ಬ್ರಹ್ಮಾದಿ ಸಾರ್ವಭೌಮಾಂತವಾದ ಆನಂದಂಗಳಂ ತಾರತಮ್ಯದಿಂದ ಎಣಿಸುವದಕ್ಕೆ ಯೋಗ್ಯವಾದಂಥಾವು. ಬ್ರಹ್ಮಾನುಭವಿಯಾದ ತನ್ನಾನಂದವಾದರೋ, ಎಣಿಸುವದಕ್ಕೆ ಅಶಕ್ಯವಾದುದರಿಂದ ಈ ಪ್ರಕಾರವಾದ ಸರ್ವಕಾಮ ಪ್ರಾಪ್ತಿಯಿಂದಲೂ, ವ್ಯವಸಾಯ

ಮೊದಲಾದಂಥಾದ್ದು ಸ್ಥೂಲದೇಹಕ್ಕೆ ಯಾಗಾದಿ ಮೊದಲಾದ ಕರ್ಮವು, ವಚನಕ್ಕೆ ಶ್ರವಣ ಮನನ ನಿಧಿಧ್ಯಾಸ ಮೊದಲಾದಂಥಾದ್ದು ಮನಸ್ಸಿಗೆ ಕರ್ತವ್ಯಂಗಳು. ... ... ||೧||

ಮೂಲ|| ಶ್ಲೋಕ|| ಕರ್ತವ್ಯದುಃಖಮಾರ್ತಾಂಡಜ್ವಾಲಾದ
ಗ್ಧಾಂತರಾತ್ಮನಾಂ । ಕುತಃಪ್ರಶಮಪೀಯೂಷಧಾರಾಸೇತಮೃತೇಸು
ಖಂ ||ಟೀ|| ಪ್ರಶಮವೆಂದರೆ, ಪರಿಜ್ಞಾನ. ಕರ್ತವ್ಯವೆಂದರೆ, ಕರ್ಮಾಧಿಕಾರ. ಕರ್ಮಾದಿಕಾರವೆಂಬ ಚೈತ್ರಮಾಸದ ಮಧ್ಯಾಹ್ನ ಸೂರ್ಯಕಿರಣದಿಂ ಬೆಂದವರಿಗೆ ಬ್ರಹ್ಮಜ್ಞಾನಾಮೃತದ ಧಾರಾಭಿಷೇಕಂ ಪೊರತಾಗಿ, ಚತುರ್ದಶ ಭುವನಂಗಳಲ್ಲಿಯೂ ಸುಖಂ, ಸುಸ್ಥಿತಿಯು, ಕುತಃ-ಯತ್ತಣದುಯೆಂದು ನಿರ್ಣೈಸಿದರು ಯೆಂಬ, ಪೂರ್ವೀಕರ ಮಾತಿನಿಂದ. ||೧||

ಮೂಲ|| ವಚನ|| ಇಲ್ಲವಾದುದರಿಂದಾದ ಕೃತಕೃತ್ಯತ್ವದಿಂದಲೂ। ಎಷ್ಟು ಮೋಕ್ಷಸಾಧನಂಗಳುಂಟೋ । ಅಷ್ಟು ನಿನಗೆ ದೊರಕೊಂಡಿತ್ತಾಗಿ । ಇದರಿಂ ಸೇರಿದ ಪ್ರಾಪ್ತ ಪ್ರಾಪ್ಯತ್ವದಿಂದಲೂ । ಧನ್ಯನಾದೆಯಾಗಿ। ಆ ದೇಹಾಂತರಮಂ ಬುದ್ಧಿ ನೈರ್ಮಲ್ಯಮೆಂಬ ಜ್ಞಾನರಕ್ಷೆಯಿಂ । ಏಕಾಗ್ರ ಮನಸ್ಸೆಂಬ ತಪಸ್ಸಿನಿಂ। ಸಾರ್ವಜನೀನಮಾದ ಸರ್ವಜನ ಪೂಜ್ಯತೆಯೆಂಬ ಸರ್ವಸಂವಾದದಿಂ। ಕ್ಲೇಶಂಗಳಿಲ್ಲದಿಹಣ ಮೆಂಬ ದುಃಖಕ್ಷಯದಿಂ । ಸಾಧನ ಪ್ರತಿಬಂಧರಾಹಿತ್ಯಮೆಂಬ ಸುಖಾವಿರ್ಭಾವದಿಂದಿರ್ಪಯಾಗಿ । ನಿನಗಾವಕಾಲದೊಳ್ ಭಯಮಿಲ್ಲದೆ ಪುಷ್ಪಿತ ದ್ರುಮದಂತೆ ಹ. ದ್ವ್ಯಾಸನನಾಗಿ । ಫಲಿತರ ಸಾಲದಂತೆ ಸುರಸನಾಗಿ। ಮಹೋದ್ಯಾನದಂತೆ ಮುಮುಕ್ಷುಗಳಿಗೆ ನೆಳಲಾಗಿ । ದೇವಗಂಗೆಯಂತೆ ದರ್ಶನ ಮಾತ್ರದಿಂ ಪಾಪಹಾರಕನಾಗಿ । ಸೂರ್ಯನಂತೆ ತೇಜೋನಿಧಿಯಾಗಿ । ಚಂದ್ರನಂತೆ ವಿಬುಧರ್ಕಗಳಿಗೆ ಅಮೃತಮಂ ಬೀರುವನಾಗಿ । ಸಮುದ್ರನಂತೆ ಗರ್ಭೀಕೃತ ಗಂಭೀರನಾಗಿ । ಪುಣ್ಯರಾಸಿಯಾಗಿ । ಬ್ರಹ್ಮವಿದ್ಯಾನಿಧಿಯಾಗಿ । ಮೋಕ್ಷಲಕ್ಷ್ಮೀಜನ್ಯಸ್ಥಾನಮಾಗಿ । ಶಿವಪ್ರಸಾದದಿಂದ ಶಿವಭಕ್ತಿ ಜೀವನ್ಮುಕ್ತಿಯರೆಂಬ ಕಳತ್ರದ್ವಯದಿಂ ಕೂಡಿ ಸುಖದಿಂಬಾಳೆಂದು ಹರಸಲಾ ವಿಚಾರಂಗೆ ನಮಸ್ಕರಿಸಿ । ನಿಜಸುಖದಿಂದ ಮನೋರಾಜನಿರ್ಗಮನದೆಂತೆನೆ.

॥೬೬॥ ಪೂರ್ವೋಕ್ತ ಕೃಷಿ ಮೊದಲಾದವುಗಳು, ಯಾಗಾದಿಗಳು, ಶ್ರವಣ ಮನನಾದಿಗಳು, ಬ್ರಹ್ಮನಿಷ್ಠನಾದ ನಿನಗೆ ಇಲ್ಲವಾದುದರಿಂದ, ಅಂಥಾ ಮಾಡಲ್ಪಟ್ಟ ಕಾರ್ಯ ಮಾಡಿದ್ದರಿಂದಲೂ, ಎಷ್ಟು ಮೋಕ್ಷಸಾಧನೋಪಾಯಂಗಳುಂಟೋ, ಅಷ್ಟು ನಿನಗೆ ಲಭ್ಯವಾದಂಥಾದ್ದಾಯಿತಾಗಿ, ಇದರಿಂದ ಹೊಂದತಕ್ಕ ವಸ್ತುವನ್ನು ಹೊಂದಿದ್ದರಿಂದಲೂ, ಕೃತಾರ್ಥನಾದೆಯಾಗಿ, ಆ ದೇಹಪತನ ಪರ್ಯಂತವು ಬುದ್ಧಿ ನಿರ್ಮಲತ್ವವೆಂಬ ಜ್ಞಾನಸಂರಕ್ಷಣ್ಯದಿಂದಲೂ, ವೃತ್ತ್ಯಾಂತರವಿಲ್ಲದೆ ಇರುವ ಮನಸ್ಸೆಂಬ ತಪಸ್ಸಿನಿಂದಲೂ, ಸರ್ವಜನದಿಂದ ಹುಟ್ಟದಂಥಾ ಸಕಲಜನ ಪೂಜ್ಯತೆಯೆಂಬ ಸರ್ವ ಸಂವಾದದಿಂದಲೂ, ಮನಸ್ಸಿಗೆ ಕ್ಲೇಶಂಗಳು ಇಲ್ಲದೆ ಇರುವದೆಂಬ ದುಃಖವಿಲ್ಲದಿರುವದ್ದರಿಂದಲೂ, ಸಾಧನಾಂತರಾಪೇಕ್ಷೆಯಿಲ್ಲದೆ ನಿಜಸುಖಾವಿರ್ಭಾವದಿಂದ ಇದ್ದಂಥಾವನಾಗಿ ಇದ್ದೀಯಾಗಿ, ನಿನಗೆ ಯಾವಕಾಲದಲ್ಲಿಯೂನಿನ್ನಬಿಟ್ಟು ಇತರವಸ್ತು ನಿನಗೆತೋರದೆ ಇರುವದ್ದರಿಂದ,ಭಯವಿಲ್ಲದೆ ಇದ್ದುಕೊಂಡು,ಕುಸುಮಗಳುಳ್ಳವೃಕ್ಷದಂತೆ, ವಳ್ಳಿವಾಸನೆಯುಳ್ಳಂಥಾವನಾಗಿ; ಅಂಬುಗಳುಳ್ಳಶೀಮಾವಿನಮರದಹಾಗೆ ಒಳ್ಳಿತ್ತಾದರಸವುಳ್ಳಂಥಾವನಾಗಿ,ಅಧಿಕವಾದಉದ್ಯಾವನದಂತೆಮೋಕ್ಷೇಚ್ಛೆಯುಳ್ಳಂಥಾವರಿಗೆನೆರಳಾಗಿ,ದೇವಗಂಗೆಯಹಾಗೆದರ್ಶನಮಾತ್ರದಿಂದಪಾಪವನ್ನುಪರಿಹರಿಸುವನಾಗಿ, ಸೂರ್ಯನಹಾಗೆತೇಜಸ್ಸಿಗೆಸ್ಥಾನವಾದಂಥಾವನಾಗಿ,ಚಂದ್ರನಹಾಗೆವಿಬುಧರಿಗೆಅಮೃತಕೊಡುವನಾಗಿಯೂ, ಸಮುದ್ರನಹಾಗೆಗರ್ಭದಲ್ಲಿಇರಿಸಿಕೊಂಡಿರುವಗಾಂಭೀರ್ಯಉಳ್ಳವನಾಗಿ,ಪುಣ್ಯರಾಶಿಯಾಗಿ, ಬ್ರಹ್ಮವಿದ್ಯಕ್ಕೆಸ್ಥಾನವಾಗಿ,ಮೋಕ್ಷವೆಂಬಲಕ್ಷ್ಮಿಗೆಹುಟ್ಟದಸ್ಥಾನವಾಗಿ,ಸಚ್ಚಿದಾನಂದಸ್ವರೂಪವಾದಶಿವಪ್ರಸಾದದಿಂದಶಿವಭಕ್ತಿ,ಜೀವನ್ಮುಕ್ತಿಯರೆಂಬಇಬ್ಬರುಹೆಂಡತಿಯರಿಂದ ಕೂಡಿಕೊಂಡು ಸುಖದಿಂದ ಬಾಳಿಕೊಂಡು ಇರೂಯೆಂದು ಹರಸಲೂ, ಮನೋರಾಜನು ವಿಚಾರನೆಂಬ ಪುರೋಹಿತನಿಗೆ ನಮಸ್ಕಾರಮಾಡಿ, ನಿಜಸುಖದಿಂದ ಇದ್ದಂಥಾವನಾದ. ಅದುಹ್ಯಾಗೆಅಂದರೆ ॥೧॥

ಮೂಲ॥ ಚಂಪಕಮಾಲಾವೃತ್ತಾ॥ ಕಳಿಯುದಕಾಂತಿಯಿಂ ಸಕಲವೃತ್ತಿಗಳಲ್ಲಿ ಸಮಾನಚಾರಮಂ। ಬಳಸಿ ವಿಕಾರ ವ್ಯೃದದ ವಿಲಾಸದೊಳು

ಬ್ಬಿ ವಿಚಾರನಿಂದೆಬಂ । ದಲಘುವಿವೇಕದಿಂದ ಪರಜೇಯ ಪರಾಕ್ರಮನಾ
ಗಿ ವೇದವೊ । ದ್ಗಲಗುರುಭಕ್ತಿಯಿಂ ಮೆರೆದನಾ ಕಮಲಾಸ್ತ ಶಶಾಂಕ
ತಾರಕಂ ॥ಟೀ॥ ಕಡಮೆ ಬೀಳದೆ ಇರುವ ತೇಜಸ್ಸಿನಿಂದ, ಸಮಸ್ತ
ವಾದಂಥಾ ವೃತ್ತಿಗಳಲ್ಲಿ ಸಮಾನವಾದ ಸಂಚಾರವನ್ನು ಹೊಂದಿಯೂ,
ವಿಕಾರವಂ ಹೊಂದದೆ ಇರುವಂಥಾ ವಿಲಾಸದಿಂದ ಹಿಗ್ಗಿ, ವಿಚಾರನೆಂಬ
ಮಂತ್ರಿಯಿಂದ ಪ್ರಾಪ್ತವಾದಂಥಾ ವಿಸ್ತಾರವಾದ ವಿವೇಕದಿಂದ ಶತೃಗಳ
ನ್ನು ಜೈಸುವ ಸಾಮರ್ಥ್ಯ ಉಳ್ಳಂಥಾವನಾಗಿ, ವೇದದಲ್ಲಿ ಹೇಳಿರುವಂಥಾ
ಶ್ರೀಗುರುವಿನಲ್ಲಿ ಭಕ್ತಿಯಿಂದ ಸೂರ್ಯಚಂದ್ರ ನಕ್ಷತ್ರಗಳು ಇರುವ ಪರಿ
ಯಂತರವು, ಪ್ರಕಾಶಿಸಿಕೊಂಡು ಇರುವಂಥಾವನಾದನೂ. ॥೧॥

ಮೂಲ॥ ಮತ್ತೇಭ ವಿಕ್ರೀಡಿತವೃತ್ತ॥ ಇದು ಗೌರೀಶ ತಟತ್ಪಿಶಂಗಿ
ಮಜಟಾ ಘೋರಾಟವೀ ಬಂಭ್ರಮ।ತ್ರಿದಶೋತ್ತುಂಗ ತರಂಗಿಣೀ ಸಲಿಲ
ಮೃಣ್ಮಾಧ್ವೀ ಝರೀಸೋದರಂ । ಪದಕಾವ್ಯಂ ಕವಿಗಳ್ ವಿಚಾರಿಪುದಿ
ದಂ ಸೌರಭ್ಯಮಂ ಮಿಕ್ಕಲೋ । ಕದ ವಾಕ್ಯಂಗಳವೋಲ್ನಿರೀಕ್ಷಿಸದೆ
ಧೀಮತ್ಕಾಮಸಾದೃಷ್ಟಿಯಿಂ ॥ಟೀ॥ ಪಾರ್ವತಿಯ ಸಂಬಂಧವಾದ
ಮಿಂಚುಗಳೋಪಾದಿಯಲ್ಲಿ ಅರಿಸಿನ ವರ್ಣವಾದ ಜಡೆಗಳೆಂಬ, ಭಯಂಕ
ರವಾದ, ಅರಣ್ಯದಲ್ಲಿ ತಿರುಗುತ್ತಲಿರುವ ದೇವತೆಗಳ ಉತ್ಕೃಷ್ಟವಾದನ
ದಿಯಲ್ಲಿ ಯಿರುವ ವುದಕಹೊಂದಿದ ಮಾಧುರ್ಯ ಪ್ರವಾಹಕ್ಕೆ ಸಮಾನವಾ
ದಂಥಾವರುಗಳು ಚೆನ್ನಾಗಿ ವಿಚಾರಿಸುವುದು. ಈ ಪ್ರತ್ಯಕ್ಷವಾದಂಥಾ
ಸುಲಭತ್ವವನ್ನು ಈ ಗ್ರಂಥಕ್ಕಿಂತಲೂ, ಇತರವಾಗಿ ಲೋಕದಲ್ಲಿರುವ
ಗ್ರಂಥಗಳಹಾಗೆ ನೋಡದೆ ಮಹಾ ಸೂಕ್ಷ್ಮಬುದ್ಧಿಯುಳ್ಳಂಥಾವರಾಗಿ ಅ
ತ್ಯಾಂತ ಬಯಕೆಯುಳ್ಳ ದೃಷ್ಟಿಯಿಂದ ನೋಡುವುದೂ. ॥೧॥

ಮೂಲ॥ ಶಾರ್ದೂಲ ವಿಕ್ರೀಡಿತವೃತ್ತ॥ ಕಲ್ಯಬ್ದೇಷು ಗತೇಷು
ಚಂದ್ರನಗನಾಗಾಬ್ಧಿಷ್ವಿದಂ ನಿರ್ಮಿತಂ । ಕಾವ್ಯಂ ಕೃಷ್ಣಮಹೀಭುಜಾ
ಭಿನವಮನಂ ಶ್ರೀದಕ್ಷಿಣಾಮೂರ್ತಯೇ। ಕೃತ್ವಾಬ್ದೇ ವಿಕೃತೌ ವಿರಾಮ
ಮಗಮಾದ್ರೌದ್ರಾಶ್ವಿನೀ ಸತ್ತಿಥಾ । ವಾರಬ್ಧಂ ನಿಜದೀಪಿಕಾ ಪದಶಿರೋ
ರತ್ನಾಭಿದಂ ವರ್ಧತಾಂ ॥ಟೀ॥ ಕಲಿಯುಗ ಸಂವತ್ಸರಗಳು ನಾಲ್ಕು
ಸಾವಿರದ ಎಂಟುನೂರು ಎಪ್ಪತ್ತೊಂದು ಸಂವತ್ಸರಗಳು ಕಳೆದು ಹೋ

ಗುತ್ತಲಿರಲಾಗ್ಯಿರಹುದ್ರಿ ಸಂವತ್ಸರದಲ್ಲಿ ಆಶ್ವಿನಿ ನಕ್ಷತ್ರಯುಕ್ತಮಾದ ಶು ಭದಿವಸದಲ್ಲಿ ಪ್ರಾರಂಭಮಾಡಿ, ಮಾಡಲ್ಪಟ್ಟಂಥಾ ಕಾವ್ಯವು ಕೃಷ್ಣಭೂಪಾಲನಿಂದ ಸಂಪದ್ಯುಕ್ತಮಾದ ದಕ್ಷಿಣಾಮೂರ್ತಿಗೋಸ್ಕರ ನಮಸ್ಕಾರ ರೂಪವಾಗಿ ಮಾಡಿದ ನಿಜದೀಪಿಕಾ ಶಿರೋರತ್ನವೆಂಬ ಗ್ರಂಥವೂ ಉತ್ಕೃಷ್ಟಮಾಗಿಪ್ರವರ್ಥಮಾನವಾಗಿ ಸರ್ವೋತ್ಕೃಷ್ಟವಾಗಿಇರಲಿ. ||೨||

ಗದ್ಯ|| ಶ್ರಾವಕಜನ ವರ್ತಮಾನ ಪ್ರತಿಬಂಧ ಶಿರಸ್ಥ ನೀಯಾಲಸ್ಯ ನಿವೃತ್ತಿಯಿಂದ ಶೇಷಬೃಂದಾರಕ ಸಂದೋಹ ಸ್ತೂಯಮಾನ ಸಹಜಾಪವರ್ಗ ಫಲಪ್ರದಾಯಕ ಪುನಃಪುನ ರುಪನಿಷದ ಶ್ರವಣ ರುಚಿರೂಪಶ್ರೇಯಃ ಪದಂ ಸಿದ್ಧಿಸಲೋಸುಗಂ ಸಮಾಪ್ತಿಯಾದ ಪಂಚಮ ಪಟಲ ಪೂರ್ತಿಯಂ ಗೈದು ಕವಿಯುತ್ತ ರಮಂಗಲಮಾ ಚರಿಸಿದಪಂ||

||ಟೀ|| ಕೇಳುವಂಥಾ ಜನರುಗಳಿಗೆ ಇರುವಂಥಾ ಪ್ರತಿಬಂಧದಿಂದ ಶಿರಸ್ಸಿನಲ್ಲಿ ಹುಟ್ಟಿದ ಆಲಸತ್ವದ ನಿವಾರಣೆಯಿಂದ ಸಮಸ್ತರಾದ ದೇವತೆಗಳ ಸಮೂಹದಿಂದ ಸ್ತೋತ್ರ ಮಾಡಲ್ಪಟ್ಟಂಥಾ ಯಥಾರ್ಥವಾದ ಮೋಕ್ಷವೆಂಬ ಫಲವನ್ನು ಕೊಡುವಂಥಾದ್ದಾಗಿ, ಬಾರಿಬಾರಿಗೂ ಉಪನಿಷದರ್ಥವ ಕೇಳೋಣದರಲ್ಲಿಆಸಕ್ತಿಯುಂಬ ಸ್ವರೂಪಮಾದ ಸುಕೃತ ಸ್ಥಾನ ಸಿದ್ಧಿಸುವದಕ್ಕೋಸ್ಕರ ಪರಿಸಮಾಪ್ತಿಯಾದ ಐದನೆ ಪಟಲವನ್ನು ಪರಿಪೂರ್ತಿಮಾಡಿ, ಕವೀಶ್ವರನು, ಗ್ರಂಥದ ಕಡೆಯಲ್ಲಿ ಉತ್ತರಮಂಗಲವಂನು ಮಾಡಿದಂಥಾವನಾದನು. ... ||೧||

ಗದ್ಯ|| ಇತಿ ಶ್ರೀಮತ್ಸಮಸ್ತ ತತ್ವ ತಾತ್ವಿಕ ವಿಚಾರ
ಪಾರೀಣ ಶಾಲ್ಯ ಕ್ಷಿತಿಪಾಲ ಕೃಷ್ಣಪ್ರಭು ವಿರಚಿತ
ಮಾದ ನಿಜದೀಪಿಕಾರತ್ನ ಗ್ರಂಥದೊಳ್
ಸಮಾಧಿಲಕ್ಷಣ ಸಂಪೂರ್ಣಂ.

(ಇತಿ ಪದ್ಧತಿ ೫ರಲ್ಲಿ ಪಂ[illegible]ಮಾರ್ಣಾ[illegible] ಹೇಳಿದಲ್ಲಿಗೆಮಂಗಳಂ



ಶ್ರೀಮದನೇಕ ಸುರಾಸುರ ಶಿರೋದೇಶ ಕಿರೀಟ ಮಣಿ ಪ್ರಭಾನೀರಾಜಿ
ತಪಾದಾರವಿಂದ ಪರಮೇಶ್ವರಾಸಕ್ತ ಚಿತ್ತ ಕೃಷ್ಣಪ್ರಭು ವಿರಚಿತವಾದ
(ನಿಜದೀಪಿಕಾರತ್ನ) ವೆಂಬ ಗ್ರಂಥಕ್ಕೆ ಶ್ರೀಮತ್ ಕರ್ಣಾಟಕ ರಾಜಧಾನೀ
ಮಹೀಶೂರ ಪುರವರಾಧೀಶ್ವರ ಕೃಷ್ಣರಾಜಸಾರ್ವಭೌಮ ಮಹಾ
ಸ್ಥಾನ ವಿದ್ವಚ್ಚೂಡಾಮಣಿಗಳೆಂದೆನಿಸಿರ್ಪ ಸಂಸ್ಕೃತಾಂಧ್ರ
ಕರ್ನಾಟಕವಿತಾ ವಿಶಾರದ ತಿರುಮಲ ಸೋಮನ ನ
ಗರನಿವಾಸ ವೇದಾಂತ ರಾಘವಾಚಾರ್ಯರಿಂರಚಿ
ತವಾದ ವ್ಯಾಖ್ಯಾನ, ವಿರೋಧಿಕೃತುಸಂ
ವತ್ಸರ ಶ್ರಾವಣಸಿತ ಪಕ್ಷ ದಶಮೀ
ಸೌಮ್ಯವಾರದಲ್ಲಿ ಸಂಪೂರ್ಣ
ವಾದುದು.

ಶ್ರೀ.

